ಸಂಶೋಧನ ಉಪನ್ಯಾಸ ಮಾಲೆ—೯

ಪ್ರಧಾನ ಸಂಪಾದಕರು :

ಎಸ್. ಎಸ್. ಮಾಳವಾಡ, ಎಂ. ಎ.
ಡಾಯರೆಕ್ಟರ್ ಕನ್ನಡ ರಿಸರ್ಚ, ಧಾರವಾಡ

# ಕರ್ನಾಟಕ ಲಾಕುಳಶೈವರ ಇತಿಹಾಸ

ಉಪನ್ಯಾಸಕರು :

ಶ್ರೀ. ಕಪಟರಾಳ ಕೃಷ್ಣರಾಯರು

೧೯೫೫

ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ

# ಪ್ರಸ್ತಾವನೆ

ಕನ್ನಡ ಸಂಶೋಧನಸಂಸ್ಥೆಯ ಪರವಾಗಿ ೧೯೫೩ರಲ್ಲಿ ನಡೆದ ಉಪನ್ಯಾಸ ಮಾಲೆಯ ಮೂರು ಉಪನ್ಯಾಸಗಳನ್ನು ಈಗ ಪ್ರಕಟಿಸಲಾಗುತ್ತಿದೆ ಗುಲಬುರ್ಗೆಯ ವಕೀಲರಾದ ಶ್ರೀಮಾನ್ ಕಪಟರಾಳ ಕೃಷ್ಣರಾಯರು "ಕರ್ನಾಟಕ ಲಾಕುಳಶೈವರ ಇತಿಹಾಸ"ವನ್ನು ಇಲ್ಲಿ ವಿವೇಚಿಸಿದ್ದಾರೆ. ಶ್ರೀಯುತರ ಸಂಶೋಧನಕಾರ್ಯದಲ್ಲಿಯ ಆಸ್ಥೆಯು ಪ್ರಸಿದ್ಧವಿದೆ. ಕರ್ನಾಟಕದ ಧಾರ್ಮಿಕ ರಂಗದಲ್ಲಿ ಹತ್ತನೆಯ ಶತಮಾನದ ಈಚೆಗೆ ಲಾಕುಳಶೈವರು ಮಹತ್ವದ ಪಾತ್ರವನ್ನು ವಹಿಸಿದಂತೆ ತಿಳಿಯುತ್ತದೆ. ೧೧–೧೨ನೆಯ ಶತಮಾನಗಳ ಕನ್ನಡ ಶಿಲಾಲೇಖಗಳಲ್ಲಿ ಅವರ ಬಗೆಗೆ ಪ್ರಮುಖವಾದ ಉಲ್ಲೇಖಗಳು ದೊರೆಯುತ್ತವೆ ಅವರು ಆಗ ಶೈವ ದೇವಾಲಯಗಳ, ಮಠಗಳ ಸ್ಥಾನಾಚಾರ್ಯರೂ, ರಾಜಗುರುಗಳೂ ಆಗಿ, ತಮ್ಮ ತಪೋನಿಷ್ಠೆಯಿಂದ, ವಿದ್ವತ್ತೆಯಿಂದ ಪ್ರಭಾವ ಬೀರುತ್ತಿದ್ದರು. ಬಸವಣ್ಣನವರ ಧಾರ್ಮಿಕ ಕ್ರಾಂತಿಯ ಅನಂತರ ಅವರ ಪ್ರಭಾವ ಕಂಡು ಬರುವುದಿಲ್ಲ ಅವರು ಕೆಚ್ಚಿನ ಶಿವೋಪಾಸಕರೂ, ನೈಷ್ಠಿಕರೂ ಆಗಿದ್ದರು. ಸಾಂಪ್ರದಾಯಿಕ ವೀರಶೈವ ಧರ್ಮದೊಂದಿಗೆ ಅವರು ಸಮರಸವಾಗಿ ಬಾಳಿರಬೇಕು. ಬಸವಣ್ಣನವರ ಶರಣಮಾರ್ಗದ ಸುಧಾರಕ ಪಂಥವು ತಲೆಯೆತ್ತಿದ ಮೇಲೆ ಲಾಕುಳಶೈವರು ಒಂದು ಸ್ವತಂತ್ರ ಶಕ್ತಿಯಾಗಿ ಉಳಿದು ಬರಲಿಲ್ಲ. ಅವರಲ್ಲಿ ಅನೇಕರು ಈ ಸುಧಾರಕ ಪಂಥದಲ್ಲಿ ಮತಾಂತರ ಪಡೆದಿರಬೇಕು.

ಒಂದು ಕಾಲಕ್ಕೆ ಕರ್ನಾಟಕದಲ್ಲಿ ಹೆಚ್ಚಿನ ಪ್ರಭಾವ ಬೀರಿ ಮುಂದೆ ಲುಪ್ತವಾಗಿ ಹೋದ ಈ ಲಾಕುಳಶೈವ ಪಂಥದ ಬಗೆಗೆ ಜಿಜ್ಞಾಸುಗಳಿಗೆ ಸಹಜವಾದ ಕುತೂಹಲವುಂಟಾಗುತ್ತದೆ. ಲಾಕುಳಶೈವರು ಯಾರು ? ಆ ಹೆಸರು ಬಂದುದು ಹೇಗೆ ? ಅವರ ಆಚಾರ ವಿಚಾರಗಳೇನು ? ಅಂದಿನ ಕರ್ನಾಟಕದಲ್ಲಿ ಅವರ ಸ್ಥಾನಮಾನಗಳೇನು ? ಅವರು ಲುಪ್ತವಾದುದು ಹೇಗೆ ?— ಮುಂತಾದ ಪ್ರಶ್ನೆಗಳನ್ನು ಕುರಿತ ಚರ್ಚೆ ಈ ಪುಸ್ತಿಕೆಯ ವಿಷಯವಾಗಿದೆ.

ವೇದಕಾಲದಿಂದಲೂ ನಡೆದುಬಂದ ಶಿವಾರಾಧನೆ, ಭಕ್ತಿಪ್ರಧಾನವಾದ ಆಗಮಾಚಾರ, ಪಾಶುಪತ ತತ್ತ್ವಜ್ಞಾನ ಇವುಗಳ ಹಿನ್ನೆಲೆಯಲ್ಲಿ ಮುಖ್ಯ ವಿಷಯವನ್ನು ಇಲ್ಲಿ ಚರ್ಚಿಸಲಾಗಿದೆ. ವರ್ಣಾಶ್ರಮ ಧರ್ಮವು "ಬಹುವಿತ್ತ ಕ್ರಿಯಾನ್ವಿತವಾಗಿ ಕ್ಲೇಶಾಯಸ ಸಮನ್ವಿತವಾಗಿ ವಿಶೇಷ ಫಲ ಕೊಡದೆ ಹೋದುದರಿಂದ" ಶ್ರದ್ಧೆ ಅಥವಾ ಭಕ್ತಿಪ್ರಧಾನವಾದ ಮಾರ್ಗವೊಂದು ಹುಟ್ಟಿಕೊಂಡು ಬೆಳೆದು ಬಂದ ವಿಚಾರ; ಯುಗಯುಗಕ್ಕೆ ತಕ್ಕಂತೆ ಬದಲಾಗುತ್ತ ಬಂದ ಧರ್ಮದ ಸ್ವರೂಪ; ಕಲಿಯುಗಕ್ಕೆಂದು ಹೇಳಲಾದ ಆಗಮ ಮಾರ್ಗಗಳಲ್ಲಿ ಮುಖ್ಯ ಪಾಶುಪತಾಚಾರ, ಶೈವಾಗಮ ಇವುಗಳ ಪರಾಮರ್ಶೆ— ಈ ವಿಷಯಗಳನ್ನು ವಿವೇಚಿಸುತ್ತ ಲೇಖಕರು ಶೈವ ಧರ್ಮದ ಪರಿಳಿತಗಳನ್ನು ನಿರೂಪಿಸಿದ್ದಾರೆ.

ಉತ್ತರ ಹಿಂದುಸ್ತಾನದಲ್ಲಿ ಶಿವಾರಾಧಕರಾದ ಭಾರಶಿವರ ಆಳಿಕೆಯಲ್ಲಿ ಶೈವಧರ್ಮವು ಉತ್ಕರ್ಷ ಹೊಂದಿತ್ತು ಮುಂದೆ ಬಂದ ಕುಷಾಣರ ಬೆಂಬಲದಿಂದ ಬೌದ್ಧರು ಪ್ರಬಲರಾಗಿ ಈ ಧರ್ಮವು ಹಿಂದೆ ಬಿದ್ದಿತು. ಬಳಿಕ ವಾಕಾಟಕರು ಮತ್ತೆ ಶೈವಧರ್ಮವನ್ನು ಎತ್ತಿ ಹಿಡಿದರು. ಈ ಮಧ್ಯಂತರ ಕಾಲದಲ್ಲಿಯೇ "ಲಕುಲೀಶ" ಗುರುವಿದ್ದನೆಂದು ತಿಳಿಯುತ್ತಿದೆ. ಮುಂದೆ ಈ ಲಕುಲೀಶನನ್ನು ಶಿವನ ಅವತಾರವೆಂದು ಭಾವಿಸಲಾಗಿದೆ. ಈ ಹೆಸರಿಗೂ ಲಾಕುಳಾಗಮಕ್ಕೂ ಅನ್ಯೋನ್ಯ ಸಂಬಂಧವು ವ್ಯಕ್ತವಾಗುತ್ತದೆ. ಕರ್ನಾಟಕದಲ್ಲಿ ಲಾಕುಳಾಗಮದ ಪ್ರಚಾರದ ಅವಶೇಷಗಳು ಶಿಲ್ಪದಲ್ಲಿ ಉಳಿದುಬಂದಿವೆ ಮಹಾಕೂಟ, ಐಹೊಳಿ, ಪಟ್ಟದಕಲ್ಲು ಇತ್ಯಾದಿ ಸ್ಥಳಗಳಲ್ಲಿ ಆ ಕುರುಹುಗಳನ್ನು ಈಗಲೂ ಕಾಣಬಹುದು.

ಪ್ರಾಚೀನ ಕಾಲದಲ್ಲಿ ದೇವಾಲಯಗಳು ಮಹಾಸಂಸ್ಥೆಗಳಾಗಿದ್ದು ಅವು ಧಾರ್ಮಿಕ ಹಾಗೂ ಶೈಕ್ಷಣಿಕ ಕೇಂದ್ರಗಳೂ ಆಗಿದ್ದವು. ಲಾಕುಳ ಗುರುಗಳು ಅಲ್ಲಿಯ ಸ್ಥಾನಾಚಾರ್ಯರಾಗಿದ್ದರು. ದೇವಾಲಯಗಳ ಆಡಳಿತ, ಅಲ್ಲಿನ ಧರ್ಮ-ವಿದ್ಯಾ ಸಂಸ್ಥೆಗಳ ವ್ಯವಸ್ಥೆ, ದತ್ತಿಗಳ ಸ್ವೀಕಾರ ಮತ್ತು ಅವುಗಳ ಉತ್ಪನ್ನದ ವಿನಿಯೋಗ ಇವುಗಳ ಅಧಿಕಾರವು ಈ ಸ್ಥಾನಾಚಾರ್ಯರಿಗೆ ಇರುತ್ತಿತ್ತು.

ಈ ಸ್ಥಾನಾಚಾರ್ಯರ ವರ್ಣನೆಗಳಲ್ಲಿ ಅನೇಕ ಕಡೆಗಳಲ್ಲಿ ಲಾಕುಳ ಕಾಳಾಮುಖ ಎರಡೂ ವಿಶೇಷಣಗಳು ಜೋಡಾಗಿ ಶಾಸನಗಳಲ್ಲಿ ಬಂದಿವೆ.

ಇವೆರಡೂ ಸಂಪ್ರದಾಯಗಳಲ್ಲಿ ವಿಶೇಷ ಭೇದವಿಲ್ಲವೆಂದು ಲೇಖಕರು ಮತ ಗ್ರಂಥಗಳ ಆಧಾರಗಳೊಂದಿಗೆ ಹೇಳುತ್ತಾರೆ. ಈ ಸಂಪ್ರದಾಯವನ್ನು ಲಾಕುಳ ಸಿದ್ಧಾಂತ, ಲಾಕುಳಾಗಮ ಸಮಯ, ಎಕ್ಕೋಟಿ ಸಮಯ ಇತ್ಯಾದಿ ಪರ್ಯಾಯ ನಾಮಗಳಿಂದಲೂ ಕರೆಯಲಾಗಿದೆ. ಲಾಕುಳ ಸಿದ್ಧಾಂತಿಗಳಲ್ಲಿ ಕಾಳಾಮುಖರೂ, ಕಾಳಾಮುಖರಲ್ಲದವರೂ ಇದ್ದಾರೆ. ಈ ಲಾಕುಳಶೈವಕ್ಕೂ ನಿಜಗುಣಶಿವಯೋಗಿಗಳು ಹೇಳಿದ ಶುದ್ಧಶೈವಕ್ಕೂ ತಾತ್ತ್ವಿಕ ಭೇದವು ವಿಶೇಷವಿಲ್ಲದೆ ಆಚಾರ ಮಾರ್ಗದಲ್ಲಿ ಮಾತ್ರ ಸ್ವಲ್ಪ ವ್ಯತ್ಯಾಸವಿದ್ದಿರಬಹುದೆಂದು ಲೇಖಕರು ಅಭಿಪ್ರಾಯಪಡುತ್ತಾರೆ. ಶುದ್ಧ ಶೈವದಲ್ಲಿ ವೈದಿಕಾಚಾರ ತಾಂತ್ರಿಕಾಚಾರಗಳ ಸಮನ್ವಯವಿದ್ದರೆ, ಲಾಕುಳ ಶೈವವು ಕೇವಲ ತಾಂತ್ರಿಕವಾದುದಿರಬಹುದು. ಇವರು ಕೇವಲ ತಾಂತ್ರಿಕಾಚಾರದವರಾಗಿದ್ದರೂ ಶೈವಪುರಾಣಗಳನ್ನು ಮನ್ನಿಸುವವರಾಗಿದ್ದು ವೈದಿಕ ವಾಙ್ಮಯ ಪರಂಪರೆಯನ್ನೂ ಆತ್ಮೀಯತೆಯಿಂದ ಹೇಳಿ ಕೊಂಡಿದ್ದಾರೆ

ಕರ್ನಾಟಕದಲ್ಲಿ ಲಾಕುಳ ಸಂಪ್ರದಾಯದ ಗುರುಪರಂಪರೆ ಹನ್ನೆರಡನೆಯ ಶತಕದಲ್ಲಿ ಪ್ರಭಾವಶಾಲಿಯಾಗಿತ್ತು. ಮುಂದೆ ಇದರ ಇಳಿಗಾಲ ಆರಂಭವಾಗಿದೆ ಐದಾರು ಶತಮಾನ ಕಾಲ ಕಾಣಿಸಿಕೊಂಡು, ಕೆಲಕಾಲ ದೇವಾಲಯದ ಆಡಳಿತ ಧರ್ಮಾಧಿಕಾರಗಳನ್ನು ನಡೆಯಿಸಿ ಪ್ರಬಲವಾಗಿದ್ದ ಈ ಸಂಪ್ರದಾಯವು ಈಗ ಕಾಣುತ್ತಲೇ ಇಲ್ಲವಲ್ಲ ಎಂಬುದಕ್ಕೂ ಲೇಖಕರು ಉತ್ತರ ಕೊಡಲು ಇಲ್ಲಿ ಪ್ರಯತ್ನಿಸಿದ್ದಾರೆ. "ಇವರು ಈಗಿನ ಜೀರ್ರು ಅಥವಾ ಗೊರ್ರು ಎಂಬ ಪೂಜಾರಿಕೆಯುಳ್ಳವರ ಪೂರ್ವಜರಾಗಿದ್ದು ಈಗಿನ ಗುರುವರ್ಗದಲ್ಲಿ ಅಡಗಿದರೆ"ಂಬ ದಿವಂಗತ ಚೆನ್ನಮಲ್ಲಪ್ಪನವರ ಅಭಿಪ್ರಾಯಕ್ಕೂ, "ಇವರು ಆರಾಧ್ಯ ಕುಲದವರಾಗಿರಬೇಕೆ"ಂಬ ಶ್ರೀ.ಡಿ.ಎಲ್. ನರಸಿಂಹಾಚಾರ್ಯರ ವಾದಕ್ಕೂ ಐತಿಹಾಸಿಕ ಆಧಾರ ಸಾಲದೆಂದು ಹೇಳಿ, ಈಗಿನ ಜಂಗಮರ ಮತ್ತು ಹಿಂದಿನ ಕರ್ನಾಟಕ ಲಾಕುಳ ಗುರುಗಳ ಆಚಾರ-ನಿಯಮಗಳಲ್ಲಿ ಅನೇಕ ಸಾಮ್ಯಗಳಿವೆಯೆಂದು ತೋರಿಸಿ, ಲಾಕುಳರು ಇಂದಿನ ಜಂಗಮರಾಗಿ ಮಾರ್ಪಟ್ಟರೆಂಬ ಅಭಿಪ್ರಾಯಕ್ಕೆ ಲೇಖಕರು ಬಂದಿದ್ದಾರೆ.

ಧಾರ್ಮಿಕ ವಾಙ್ಮಯದ ಅನೇಕ ಉಲ್ಲೇಖಗಳಿಂದ ತಾತ್ತ್ವಿಕ ವಿಚಾರ-ವಿಕಾಸಗಳನ್ನು ತಿಳಿಸಿ, ಭಾರತದಲ್ಲಿಯ ಶಿವಾಲಯಗಳ ವೈಪುಲ್ಯ

ವನ್ನು ವಿವರಿಸಿ, ಕರ್ನಾಟಕದಲ್ಲಿಯ ಶೈವದೇವಾಲಯಗಳನ್ನು ಲೇಖಕರು ವಿಸ್ತೃತವಾಗಿ ನಿರ್ದೇಶಿಸಿದ್ದಾರೆ. ಅಲ್ಲದೆ, ಆ ಕಾಲದ ಶಿಲಾಶಾಸನಗಳ ಸಾಮಗ್ರಿಯನ್ನು ಧಾರಾಳವಾಗಿ ಬಳಸಿಕೊಂಡಿದ್ದಾರೆ. ಹೀಗೆ ಗ್ರಂಥಗಳು, ಶಿಲ್ಪ ಮತ್ತು ಶಿಲಾಶಾಸನಗಳಿಂದ ವಿಪುಲ ವಿಷಯಗಳನ್ನು ಸಂಗ್ರಹಿಸಿದ ಈ ಲೇಖಕರ ವಿವೇಚನೆ ಅಭ್ಯಾಸಿಗಳಿಗೆ ಉಪಯುಕ್ತವಾಗಿದೆ ಅವರ ಕೆಲವು ನಿರ್ಣಯಗಳು ಭಿನ್ನಾಭಿಪ್ರಾಯಗಳಿಗೆ ಎಡೆಗೊಡಬಹುದು; ಕೆಲವು ಅಭಿಪ್ರಾಯಗಳು ಕೇವಲ ಆನುಷಂಗಿಕವಾಗಿ ಬಂದು ನಿರ್ಧಾರದ ರೂಪವನ್ನು ತಳೆಯದೆ ಉಳಿದಿರಬಹುದು ಕೆಲವೊಂದು ಅಭಿಪ್ರಾಯಗಳನ್ನು ಕುರಿತು ಮನಗಾಣಿಸುವುದಕ್ಕೆ, ಅವುಗಳ ಹಿಂದಿರುವ ಆಧಾರಗಳು ಸಮಗ್ರವೆಂದು ಇಲ್ಲವೆ ಬಲವತ್ತರವೆಂದು ಹೇಳಲು ಬರಲಿಕ್ಕಿಲ್ಲ ಆದರೆ ಒಟ್ಟಿನಲ್ಲಿ ವಿಷಯ ನಿರೂಪಣೆಯು ವಿಚಾರಪ್ರಚೋದಕವಾಗಿರುವುದೇನೋ ನಿಜ. ಆ ದೃಷ್ಟಿಯಿಂದ ವಾಚಕರು ಇಲ್ಲಿಯ ಅಭಿಪ್ರಾಯಗಳನ್ನು ಪರಿಶೀಲಿಸಬೇಕಾಗುತ್ತದೆ.

ವ್ಯಾಸಂಗಪೂರ್ಣವಾದ ಹಾಗೂ ವಿಚಾರಪ್ರಚೋದಕವಾದ ಈ ಪುಸ್ತಿಕೆಯನ್ನು ಪ್ರಕಟಿಸಲು ನೆರವಾದ ಶ್ರೀಮಾನ್ ಕಪಟರಾಳ ಕೃಷ್ಣರಾಯರ ಉಪಕಾರವನ್ನು ಸಂಸ್ಥೆಯ ಪರವಾಗಿ ನೆನೆಯುವುದು ನಮ್ಮ ಸಂತೋಷದ ಕರ್ತವ್ಯವಾಗಿದೆ. ಈ ಪುಸ್ತಕದ ಮುದ್ರಣದ ವಿಷಯದಲ್ಲಿ ಸಹಕರಿಸಿದ ಸರಸ್ವತಿ ಪ್ರೆಸ್ಸಿನವರಿಗೂ ನಾವು ಆಭಾರಿಯಾಗಿದೇವೆ.

ಧಾರವಾಡ.
೧೦-೪-೧೯೫೫

**ಸ. ಸ. ಮಾಳವಾಡ**
ಡಾಯರೆಕ್ಟರ, ಕನ್ನಡ ಸಂಶೋಧನ ಸಂಸ್ಥೆ



# ಅನುಕ್ರಮಣಿಕೆ

# ಒಪ್ಪೋಲೆ

| ಪುಟ | ಸಾಲು | ಇದ್ದುದು | ಇರಬೇಕಾದುದು |
|---|---|---|---|
| ೪ | ೨೭ | ಸರ್ವಗ್ರಂಥ | ಸರ್ವಮಾನ್ಯಗ್ರಂಥ |
| ೫ | ೫ | ಗೂ | ಗ್ರ್ಯೂ |
| ೫ | ೨೨ | ಹಾಗೆಯೆ ಇಂತಹ | ಹಾಗೆಯೆ ತಂತ್ರ ಗ ಂಥಗಳ |
| ೫ | ೨೬ | ವಾಜಯು | ವಾಙ್ಮಯು |
| ೬ | ೨೦ | ಸಪ | ಸಪ್ತ |
| ೧೧ | ೨೨ | ಗಳನ್ನಾಗಲಿ | ಗಳಿಗನುಸಾರವಾಗಿ |
| ೧೭ | ಕೊನೆ | ನೆಯು | ೬ನೆಯು |
| ೨೪ | ೭ | ಸುಮಾರು ಕಾಲ | ಸುಮಾರು ಇದೇ ಕಾಲ |
| ೨೯ | ೯ | ಕ್ರಿ ಶ. | ಕ್ರಿ. ಶ ೧೦ನೆಯ |
| ೩೧ | ೧೦ | ಮತ್ತು ಮಯೂರ | ಮತ್ತಮಯೂರ |
| ೩೨ | ೧೩ | ,, | ,, |
| ೩೬ | ೧೮ | ಪೊಗಳ್ದುರೆ | ಪೊಗಳ್ದುಂ |
| ೪೨ | ೨೫ | ಗೋತ್ರತ್ರಾನಿ | ಗೊತ್ರತ್ರಾಸಿ |
| ೫೦ | ೨೫ | ಅಧಿಕ್ಕಾರ | ಅಧಿಕಾರ |
| ೫೪ | ೬ | ನಿದ್ದೋಡಿಸಿ | ಸೊದ್ದೋಡಿಸಿ |
| ೫೮ | ೨೬ | ಮಾದನೂರಿನ | ಮುದನೂರಿನ |
| ೬೦ | ೧೯ | ಮಿದ್ಯ | ದಿವ್ಯ |
| ೬೧ | ೮ | ಭೈದಸೀಘ್ರಕ ವಿಳಾಸ | ಭೈರಕವಿಳಾಸ |
| ೬೫ | ೨೫ | ಸಾಧನ ಧನದಿಂದ | ಸಾಧನದಿಂದ |
| ೬೭ | ೨೦ | ಚಾರಣ | ಜಾರಣ |
| ೭೪ | ೧೨ | ವಿರಾಜಾಹೋಮ | ವಿರಜಾಹೋಮ |
| ೭೫ | ೧೪ | ದೇವಮುತೇ | ದೇವಮುಚ್ಯತೇ |
| ೭೫ | ೨೧ | ಮಧಿಷ್ಮಿತ್ಯೇಕೋ | ಮಧಿಷ್ಮಿತ್ಯೇಕೋ ರೂಪಾಣಿ |
| ೭೭ | ೨೨ | ಯೋಶ್ವರ | ಯೋಶ್ವವ |
| ೭೮ | ೨೮ | ಹೇಳಿರುವದಿಲ್ಲ | ಹೇಳಿರುತ್ತಾನೆ. |
| ೮೦ | ೨೦ | ಲಾಕುಳಶೈವರ | ಲಾಕುಳಶೈವರು |
| ೮೦ | ೨೩ | ಸೋಮೇಶ್ವರ | ಸೋಮೇಶ್ವರನ |
| ೮೧ | ೧ | ಗೋತ್ರತ್ರಾನ | ಗೋತ್ರತ್ರಾಸಿ |
| ೮೧ | ೧೦ | ನಿಷ್ಠರ | ನಿಷ್ಠುರ |

| | | | |
|---|---|---|---|
| ೮೧ | ೨೧ | ದರ್ಶಿ ಷ್ಟ | ದ್ವಿಷ್ಟಿ ದರ್ಶಿಷ್ಟ |
| ೮೨ | ೧೭ | ತಾರ್ತಿಕ | ತಾರ್ಕಿಕ |
| ೮೨ | ೨೦ | ಚರ್ಕವರ್ತಿ | ಚಕ್ರವರ್ತಿ |
| ೮೨ | ಕೊನೆ | ತಾರ್ತಿಕ | ತಾರ್ಕಿಕ |
| ೮೪ | ೭ | ನೈಯಾಯಿಕ | ನೈಯಾಯಿಕರ |
| ೮೪ | ೮ | ಕರ್ತೃವಾದ | ಕರ್ತೃವಾದ |
| ೮೫ | ೨೨ | ಪ್ರಯಾಯುಕಲ | ಪ್ರಲಯಾಕಲ |
| ೮೬ | ೧ | ಕೋಟಿ ಕೋಟಿಗಳು | ಕೋಟಿಗಳು |
| ೮೬ | ೨೦ | lenet | tenet |
| ೧೦೬ | ೧೬ | ಸದರ್ಶನ | ಸುದರ್ಶನ |
| ೧೧೦ | ೧೩ | ಗೊ  ್ರ | ಗೊರು್ರ |
| ೧೧೩ | ೨೪ | ರಲ್ಲವೆಂಮ | ರಲ್ಲವೆಂದು |
| ೧೧೪ | ೨೫ | ಪಕ್ಷದಲ್ಲಿ ಮಾಧವ | ಪಕ್ಷದಲ್ಲಿ ಅವನ ಶಿ<br>ನಾದ ಮಾಧವ |
| ೧೧೭ | ೨ | ಸಿಂಹವರ್ಷೆಯು | ಸಿಂಹಪರ್ಷೆಯು |
| ೧೧೭ | ೧೩ | ಮುನಿಪೋತಂ | ಮುನಿಪೋತ್ತಂಸಂ |
| ೧೧೮ | ೫ | ಪರಂಪರೆಯೂ | ಅನಂತರ, ಪುನಃ |
| ೧೧೯ | ೨೨ | ಸ್ತ್ಯೋತ್ತ | ಸ್ತ್ಯೋತ್ತಮ |
| ೧೨೦ | ೮ | ನೊಳಂಬರ | ನೊಳಂಬರು |
| ೧೨೨ | ೯ | ಕಮ್ಮ | ಕಮ್ಮೆ |
| ೧೨೬ | ೧೩ | ವೀತಪ್ಪೊಡೆಯು | ವೀರಪ್ಪೊಡೆಯು |
| ೧೨೭ | ೨೦ | ಹಳಿಯ | ಹಳ್ಳಿಯ |
| ೧೩೧ | ೧೩ | ಪೂರ್ವದಲ್ಲಿ | ಪೂರ್ವದ |
| ೧೩೯ | ೪ | ಮಹೇಶರಾಗ್ರ | ಮಹೇಶ್ವರಾಗ್ರ |
| ೧೪೦ | ೨೦ | ಗುರುಗಳು | ಗುರುಗಳ |
| ೧೪೩ | ೧೧ | ಲಾಕುಳರಲ್ಲದ | ಲಾಕುಳರ |
| ೧೪೩ | ೧೯ | ಕುಮಾರದೇವ | ಕುಮಾರದೇವನ |
| ೧೪೩ | ೨೭ | ಲೋಕೋತ್ತಮರುಮಮ್ಮ | ಲೋಕೋತ್ತಮರ<br>ಮಪ್ಪ |
| ೧೪೮ | ೯ | ನೈಹ್ಠಿಕ | ನೈಷ್ಠಿಕ |

ಶ್ರೀಃ

# ಕರ್ನಾಟಕ ಲಾಕುಳಶೈವರ ಇತಿಹಾಸ



## ಒಂದನೆಯ ಪ್ರಕರಣ

ಋಗ್ವೇದದಲ್ಲಿ ರುದ್ರ, ಪಶುಪತಿ ಶಬ್ದಗಳು ಬಂದಿವೆ. ಯಜುರ್ವೇದದ ಶತರುದ್ರೀಯದಲ್ಲಿ ರುದ್ರನಿಗೆ ಕಪರ್ದಿ, ಶರ್ವ, ಶಂಭು, ಶಿವ, ಕೃತ್ತಿವಾಸ ಎಂದೂ, ಅಥರ್ವಣವೇದದಲ್ಲಿ ರುದ್ರನಿಗೆ ಶಿವ, ಸರ್ವೇಶ್ವರ ಎಂದೂ ಹೆಸರುಗಳಿವೆ ಶ್ವೇತಾಶ್ವೇತರೋಪನಿಷತ್ತಿನಲ್ಲಿ ಶಿವನಿಗೆ ಮಹೇಶ್ವರ ಎಂದು ಹೆಸರಿದ್ದರೆ ಆಶ್ವಲಾಯನ ಗೃಹ್ಯಸೂತ್ರದಲ್ಲಿ ಹರ, ಮೃಡ, ಶಿವ, ಭೀಮ, ಶಂಕರ ಎಂಬ ಪ್ರಯೋಗಗಳಿವೆ. ಅಥರ್ವಶೀರ್ಷೋಪನಿಷತ್ತಿನಲ್ಲಿ ರುದ್ರನಿಗೆ ಮಹೇಶ್ವರ, ಈಶಾನ, ಭಗವಾನ್, ಮಹಾದೇವ ಎಂದು ಪರ್ಯಾಯ ಶಬ್ದಗಳಿವೆ.

ಪುರಾಣಾದಿಗಳಲ್ಲಿ ಗಿರೀಶ, ನೀಲಕಂಠ, ಕಪರ್ದಿ, ವೃಷಭವಾಹನ, ಭವ, ಉಗ್ರ, ಶಂಭು, ಚಂದ್ರಶೇಖರ, ಪಶುಪತಿ, ಶಿವ, ಕೃತ್ತಿವಾಸ, ಪಿನಾಕಿ, ಕಪಾಲಭೃತ್, ಶೂಲಿ, ವಾಮದೇವ, ಗಂಗಾಧರ, ತ್ರಿಲೋಚನ, ತ್ರ್ಯಂಬಕ, ಪಂಚಮುಖ, ಅಷ್ಟಮೂರ್ತಿ, ಅಹಿರ್ಬುಧ್ನಿ, ಭಸ್ಮಧಾರಿ, ರುಂಡಮಾಲಾಧರ, ಸ್ಮಶಾನವಾಸಿ ಮುಂತಾದ ಹೆಸರುಗಳಿಂದ ರುದ್ರನನ್ನು ಕರೆಯಲಾಗಿದೆ.

ಈ ರೀತಿಯಾಗಿ ಋಗ್ವೇದದಿಂದ ಇಂದಿನವರೆಗೂ ಒಂದೇ ರುದ್ರ-ಶಿವ ದೇವತೆಗೆ ಅನೇಕ ಹೆಸರುಗಳಿಂದ ಕರೆಯಲಾಗಿದೆ. ಈ ಶಬ್ದಗಳು ರೌದ್ರ, ಶಾಂತ ಮುಂತಾದ ಗುಣವಾಚಕಗಳು ಕೆಲವಾಗಿದ್ದರೆ ಕಥಾ ಸೂಚಕ ಶಬ್ದಗಳೂ ಕೆಲವಿವೆ. ಘೋರರೂಪಗಳೂ ಉಂಟು, ಶಾಂತ ರೂಪಗಳೂ ಉಂಟು. ಆದರೆ ಎಲ್ಲ ಶಬ್ದಗಳು ಮುಖ್ಯಾರ್ಥದಲ್ಲಿ ಪರಮಾತ್ಮನ ಹೆಸರುಗಳಾಗಿವೆ ಅದರಂತೆ ವಾಚ್ಯಾರ್ಥಗಳಾದ ಪ್ರತೀಕಗಳಲ್ಲೂ ಅನೇಕ ಬಗೆಯ ಭೇದಗಳು ಕಂಡುಬರುತ್ತವೆ.

ಋಗ್ವೇದದಿಂದ ಇಂದಿನವರೆಗೆ ರುದ್ರ–ಶಿವನಿಗೆ ವಾಙ್ಮಯದ ಪರೆಯ ಆಧಾರ ದೊರೆಯುತ್ತದೆ. ಪುರಾತನ ಅವಶೇಷಗಳ (archaeol ಆಧಾರವು ಕ್ರಮವಾಗಿಲ್ಲ. ಸಿಂಧೂತೀರದಲ್ಲಿ ದೊರೆತ ಪುರಾತನ ಅ ಗಳಿಗೆ ವಾಙ್ಮಯದ ಪರಂಪರೆ ಇಲ್ಲ. ಸಂಶೋಧಕರಿಗೆ ಇದೊಂದು ತೊ ಮತ್ತು ಜಟಿಲ ಸಮಸ್ಯೆ. ಈ ದೀರ್ಘಕಾಲಾವಧಿಯಲ್ಲಿ ಈ ಶ ಉತ್ಪತ್ತಿಯನ್ನು ವಾಚಕಾರ್ಥ, ಲಾಕ್ಷಣಿಕಾರ್ಥ, ಯೋಗಾರೂಢ ಮುಂತಾದವುಗಳನ್ನು ಕಂಡುಹಿಡಿಯುವುದು, ಅದು ಕೂಡ ಕ್ರಮಬದ್ಧ ವಿಕಾಸವನ್ನು ಸಂಬಂಧಿಸುವುದು, ಅಸಾಧ್ಯವಾದ–ನಮ್ಮಂಥವರ ಯೋ ಮೀರಿದ— ಮಾತು. ದಿಗ್ದರ್ಶನಕ್ಕಾಗಿ ಒಂದೆರಡು ಮಾತುಗಳನ್ನು ಬೇಕಾಯಿತಷ್ಟೆ. ಸದ್ಯಕ್ಕೆ ಒಟ್ಟಾಗಿ, ಮುಖ್ಯಾರ್ಥವಾದ ಪರಮ ವಾಚಕ ಶಬ್ದಗಳೆಂದು ಇಟ್ಟುಕೊಳ್ಳಲು ಯಾವ ಅಭ್ಯಂತರವಿಲ್ಲ.

---

## ಎರಡನೆಯ ಪ್ರಕರಣ

### ಆಗಮಗಳ ಸ್ವರೂಪ

ಆಗಮೋ ನಾಮ, ಆಮಹೇಶ್ವರಾದ್ ಗುರುಪಾರಂಪರ್ಯಾಗ ಶಾಸ್ತ್ರಂ। ಆಗಮೋಽಲೌಕಿಕಾದಿವ್ಯವಹಾರಹೇತುರಾಚಕ್ಷಿತಃ ಸ್ಮೃತ ಪಾಶುಪತ ಸೂತ್ರದ ಕೌಂಡಿನ್ಯ ಭಾಷ್ಯದಲ್ಲಿಯ ಅವತರಣಿಕೆಯಿದು. ಅ ಆಗಮಕ್ಕೆ ತಂತ್ರ ಎಂದೂ ಕರೆಯಲಾಗಿದೆ.

ಹಿಂದು ಜನರಲ್ಲಿ ಧಾರ್ಮಿಕ ವಾಙ್ಮಯವನ್ನು ಹೇಳುವಾಗ "ನಿ ಮಾಗಮ" ವೆಂದೂ "ಶ್ರುತಿಸ್ಮೃತಿ"ಗಳೆಂದೂ ಸಾಮಾನ್ಯವಾಗಿ ಕರೆಯು ರೂಢಿಯಿದೆ. ನಿಗಮಗಳೆಂದರೆ ವೇದಗಳ ರಾಶಿ, ಅಥವಾ ಶ್ರುತಿಯು. ಇ ಸ್ವತಃ ಪ್ರಾಮಾಣ್ಯ ಗ್ರಂಥಗಳು. ಶ್ರುತಿಗಳು ಯುಕ್ತಿಗಿಂತ ಪ್ರಬಲವೆಂ ಗಣಿಸಲ್ಪಟ್ಟಿವೆ. ಆಗಮ ಅಥವಾ ಸ್ಮೃತಿಗಳು ಪೂಜ್ಯಗಳಾಗಿದ್ದರ ಪರತಃ ಪ್ರಮಾಣಗ್ರಂಥಗಳು. ಶ್ರುತಿಗಳಿಗೆ ಅನುಕೂಲವಿದ್ದರೆ ಮಾ ಸ್ಮೃತಿಗಳನ್ನು ಸ್ವೀಕರಿಸುತ್ತಾರೆ. ಶ್ರುತಿಗಳಿಗೆ ಪ್ರತಿಕೂಲವಾಗಿದ್ದಾ ಇವನ್ನು ಪ್ರಮಾಣಗಳೆಂದು ಭಾವಿಸುವುದಿಲ್ಲ. ಎರಡನೇ ಬಗೆಯಿಂ ಹೇಳುವುದಾದರೆ ಶ್ರುತಿಗಳು ಅಪೌರುಷೇಯ. ಪುರುಷಕೃತವಲ್ಲ; ಪರಂಪ

ಯಿಂದ ಬಂದವುಗಳು. ಸ್ಮೃತಿಗಳು ಹಾಗಲ್ಲ. ಇವು ಪುರುಷರಿಂದ ರಚಿಸಲ್ಪಟ್ಟವುಗಳು. ರಚಿಸುವವರಲ್ಲಿ ದೋಷವಿದ್ದರೆ ಇವು ಸದೋಷ ವಾಗಿರಬಹುದು. ಆದುದರಿಂದ ಇವುಗಳಿಗೆ ಕಡಿಮೆ ತರದ ಪ್ರಾಮಾಣ್ಯ ಬುದ್ಧಿ ಇರುವುದು. ಮನ್ವಾದಿ ಸ್ಮೃತಿಗಳು ಈ ವರ್ಗಕ್ಕೆ ಸೇರಿದವುಗಳು. ಅಷ್ಟೇಕೆ, ಭಗವದ್ಗೀತೆಯು ಕೂಡ ಸ್ಮೃತಿಯೆಂದೇ ಪೂರ್ವಾಚಾರ್ಯರಿಂದ ಪರಿಗಣಿಸಲ್ಪಟ್ಟಿದೆ. ಇದರಂತೆ ಎಷ್ಟೋ ತರದ ಸ್ಮೃತಿಗ್ರಂಥಗಳುಂಟು. ಆಗಮ ಅಥವಾ ತಂತ್ರಗ್ರಂಥಗಳಾದರೂ, ಪ್ರಾಮಾಣ್ಯ ದೃಷ್ಟಿಯಿಂದ ಸ್ಮೃತಿಗಳಷ್ಟೇ ಯೋಗ್ಯತೆಯುಳ್ಳವುಗಳು. ಶಾರದಾತಿಲಕದ ವ್ಯಾಖ್ಯಾನದಲ್ಲಿ ರಾಘವಭಟ್ಟನು ಈ ಕೆಳಗಿನಂತೆ ಬರೆದಿರುವನು:

"ತತ್ರಸರ್ವಾಸು ಶ್ರುತಿಷು ಕಾಂಡತ್ರಯಂ ಕರ್ಮೋಪಾಸನಾ ಬ್ರಹ್ಮ ಭೇದೇನ। ತತ್ರ ಕರ್ಮಕಾಂಡಂ ಜೈಮಿನಿಪ್ರಭೃತಿಭಿಃ ಸಮ್ಯಕ್ತಮಾವಿವೃತಮ್। ಇದಮುಪಾಸನಾಕಾಂಡಂ ನಾರದಾದಿಭಿಃ ಬ್ರಹ್ಮಕಾಂಡಂ ಭಗವದ್ವ್ಯಾಸಾದಿಭಿರಪಿ। ಶ್ರುತಿಮೂಲಕತಾऽಸ್ಯ ಪ್ರತ್ಯಕ್ಷೋಪಲಬ್ಧಶ್ರುತಿಮೂಲ-ಕತಾ ಅಪ್ರತ್ಯಕ್ಷೋಪಲಬ್ಧಶ್ರುತಿಮೂಲಕತಾ ಚ। ರಾಮಪೂರ್ವೋತ್ತರ-ತಾಪನೀಯ, ನೃಸಿಂಹಪೂರ್ವೋತ್ತರತಾಪನೀಯ, ಸೌರಾಷ್ಟಾಕ್ಷರ, ಶೈವ ಪಂಚಾಕ್ಷರಾತ್ಮಿಕಾ ತು ಸಾಕ್ಷಾತ್ ಶ್ರುತಿರೂಪಲಭ್ಯತ ಏವ। ತತ್ರಕಾಂಡೇ ಸರ್ವೋಪ್ಯಧಿಕಾರೋ ಮುಮುಕ್ಷೋರಪಿ ತತ್ವಜ್ಞಾನ ಪರ್ಯಂತಂ ಸ್ವಚಿತ್ತ ಶುದ್ಧ್ಯರ್ಥಂ ಪ್ರತ್ಯವಾಯಪರಿಹಾರಾರ್ಥಂ ಚ ಕರ್ಮಕಣ್ಡೇऽಧಿಕಾರ ಸಂಭವಾತ್। ತದ್ವದ್ ಉಪಾಸನಾಕಾಂಡೇऽಪಿ। ಯತಃ ಸಾಕಾರೋಪಾಸನಾತಃ ಸ್ವರ್ಗಾದಿಬಹುಫಲಂ ಭವತಿ ಕ್ರಮತೋ ಮುಕ್ತಿಶ್ಚ। ಕರ್ಮಕಾಂಡಾತ್ತು ಸ್ವರ್ಗಾದಿಕಂ ಬಹುತರವ್ಯವಸಾಯೇನ ಭವತಿ। ಬ್ರಹ್ಮಕಾಂಡಾನ್ಮುಕ್ತಿರಪಿ ಆದರನೈರಂತರ್ಯ ದೀರ್ಘಕಾಲಾಭ್ಯಾಸಸಾಧ್ಯಾನೇಕೇಷು ಜನ್ಮಸು ತಾದೃಶೇಷು ಏವ ಗತೇಷು ಭವತಿ।; ಅನೇಕಜನ್ಮ ಸಂಸಿದ್ಧಸ್ತತೋ ಯಾತಿ ಪರಾಂ ಗತಿಂ" ಇತಿ ವಚನಾತ್। ಅತ ಏತದುಪಾಸನಾಕಾಂಡಮೇವಾಗಮಶಾಸ್ತ್ರಾತ್ಮಕಂ ಗರೀಯ ಇತಿ ಸಿದ್ಧಮ್॥ (ಪಾನು ೨ ಪ್ರಪಂಚಸಾರ ಭಾಗ I )" ಈ ದೀರ್ಘವಾದ ಅವತರಣಿಕೆಯಿಂದ ರಾಘವ ಭಟ್ಟನು ಉಪಾಸನಾಕಾಂಡಕ್ಕೆ ಸೇರಿದ ಗ್ರಂಥಗಳ ಸಮೂಹಕ್ಕೆ "ಶ್ರುತ್ಯಾಗಮಾವಪಿ ವದತಃ" ಎಂದು ಆಗಮವೆಂದು ಕರೆದಿರುವನು.

ಕರ್ಮಕಾಂಡವು ಸ್ಥೂಲ ಶರೀರಕ್ಕೆ ಸಂಬಂಧಿಸಿದ್ದು, ಬ್ರಹ್ಮಕಾಂಡವು ಬುದ್ಧಿಗೆ ಸಂಬಂಧಪಟ್ಟದ್ದು, ಉಪಾಸನಾಕಾಂಡವು ಭಾವನೆಗೆ ಸಂಬಂಧಿ

ಸಿದ್ದೆಂದು ಸ್ಥೂಲವಾಗಿ ಕರೆಯುಬಹುದು. ಈ ಮೂರು ಕಾಂಡಗಳ ಉಪಯೋಗವು ಇಹಪರ ಶ್ರೇಯಸ್ಸು ಸಂಪಾದನೆಗಾಗಿ. ಬ್ರಹ್ಮಕಾಂಡವಾದ ತತ್ವನಿಶ್ಚಯಗಳಲ್ಲಿ ವಿಚಾರವೈಚಿತ್ರ್ಯಕ್ಕನುಗುಣವಾಗಿ ಭಿನ್ನ ಭಿನ್ನ ತತ್ವ ನಿಶ್ಚಯಗಳ ಪ್ರತಿಪಾದನೆಯಾದಂತೆ, ಉಪಾಸನಾಕಾಂಡವಾದ ಸಾಧನ ಗ್ರಂಥಗಳು ಅನೇಕ ರೀತಿಯಿಂದ ಭಿನ್ನಭಿನ್ನವಾಗಿರುವುದು ಸಹಜವಿದೆ. ಭಾವನೆಗೆ ಸಂಬಂಧಪಟ್ಟ ಈ ಸಾಧನಮಾರ್ಗವು ಭಕ್ತಿಪಂಥಕ್ಕೆ ಸೇರಿದ್ದು. ಬೇರೆ ಬೇರೆ ತತ್ವಜ್ಞಾನಗಳು ಹೆಚ್ಚಿದಂತೆ ತದನುಗುಣವಾಗಿ ಸಾಧನ ಗ್ರಂಥ ಗಳು ಹೆಚ್ಚುವುದು ಸಹಜವಾದದ್ದು. ಅಂತೆಯೇ ಜೈನ–ಬೌದ್ಧ–ಪಾಶುಪತ, ವೈಷ್ಣವ, ಸೌರ, ಗಾಣಪತ್ಯ, ಶಾಕ್ತ ಮುಂತಾದ ಸಾಂಪ್ರದಾಯಿಕ ತಂತ್ರಗ್ರಂಥಗಳು ಹುಟ್ಟಿವೆ. ಪರಸ್ಪರ ಭಿನ್ನ, ಅನೇಕ ವಿಧವಾದ ಧಾರ್ಮಿಕಾ ಚಾರಗಳು ಬಳಕೆಯಲ್ಲಿ ಬಂದಿವೆ. ಆದುದರಿಂದ "ತಂತ್ರ" ಶಬ್ದವು ವ್ಯಾಪಕಾರ್ಥದಲ್ಲಿ ಶಾಸ್ತ್ರ, ಸಿದ್ಧಾಂತ, ಅನುಷ್ಠಾನ, ವಿಜ್ಞಾನ ವಿಷಯಕವಾದ ಗ್ರಂಥಗಳೆಂದು ಕರೆಯಲ್ಪಟ್ಟಿದೆ. ಶಂಕರಾಚಾರ್ಯರು "ಸಾಂಖ್ಯಶಾಸ್ತ್ರ"ಕ್ಕೆ ತಂತ್ರ ಎಂದಿರುವರು. 'ಸ್ಮೃತಿಶ್ಚ ತಂತ್ರಾಖ್ಯಾ ಪರಮರ್ಷಿಪ್ರಣೀತಾ' ಎಂದು (೨-೧-೧) ಮಹಾಭಾರತದಲ್ಲೂ ನ್ಯಾಯ, ಧರ್ಮಶಾಸ್ತ್ರ, ಯೋಗ ಶಾಸ್ತ್ರ ಮುಂತಾದವುಗಳಿಗೆ ತಂತ್ರ ಎಂದು ಪ್ರಯೋಗವಾಗಿದೆ. ವಾಚಸ್ಪತಿ ಮಿಶ್ರನು ತತ್ವವೈಶಾರದಿ ಎಂಬ ಗ್ರಂಥದಲ್ಲಿ "ಆಗಚ್ಛಂತಿ ಬುದ್ಧಿಮಾರೋ ಹಂತಿ ಯಸ್ಮಾದ್ ಅಭ್ಯುದಯನಿಶ್ರೇಯಸೋಪಾಯಾಃ ಸ ಆಗಮಃ"(೧–೭) ಎಂದಿರುವನು. ಅಂದರೆ ಯಾವ ಶಾಸ್ತ್ರದಿಂದ ಭೋಗ ಮತ್ತು ಮೋಕ್ಷದ ಉಪಾಯಗಳು ಬುದ್ಧಿಯಲ್ಲಿ ಬರುತ್ತವೆಯೋ ಅದು ಆಗಮಶಾಸ್ತ್ರ. ಸಾಧನಭೂತ ಉಪಾಯಗಳನ್ನು ಆಗಮವು ಕಲ್ಪಿಸಿಕೊಡುತ್ತದೆ. ಜ್ಞಾನ ಕರ್ಮೋಪಾಸನಾಕಾಂಡತ್ರಯಗಳೆಂದು ವಿಂಗಡಿಸಿಹೇಳಿದಾಗ್ಯೂಅನ್ಯೋನ್ಯ ಸಂಬಂಧವುಳ್ಳವುಗಳಾಗಿರುವವು. ಜ್ಞಾನಕ್ಕೆ ಕರ್ಮಭಕ್ತಿಗಳು ಆವಶ್ಯಕ; ಅದರಂತೆ ಭಕ್ತಿಗಾದರೂ ಜ್ಞಾನಕರ್ಮಗಳು ಬೇಕೆಬೇಕು. ಒಂದು ಪ್ರಾಧಾನ್ಯವಾಗಿದ್ದು, ಉಳಿದವು ಆನುಷಂಗಿಕಗಳಾಗಿಯೂ ಪೋಷಕ ಗಳಾಗಿಯೂ ಇರುವವು ಇವೆಲ್ಲವುಗಳ ಸಮನ್ವಯವು ಭಗವದ್ಗೀತೆಯಲ್ಲಿ ಮಾಡಲಾಗಿದೆ. ಆದುದರಿಂದ ಅದು ಸರ್ವಗ್ರಂಥವಾಗಿದೆ ಇದಲ್ಲದೆ ಜ್ಞಾನ, ಕರ್ಮ, ಭಕ್ತಿ ಎಂಬ ಶಬ್ದಗಳಾದರೂ ಬೇರೆ ಬೇರೆ ವ್ಯಾಪಕಾರ್ಥ ದಲ್ಲಿ ಬಳಕೆಯಲ್ಲಿ ಬಂದಿವೆ. ಉದಾಹರಣೆಗಾಗಿ, ಕರ್ಮಕಾಂಡದಲ್ಲಿ ಶ್ರೌತ-ಸ್ಮಾರ್ತಕರ್ಮಗಳು ನಿರ್ದೇಶಿಸಲ್ಪಟ್ಟರೂ, ಭಕ್ತಿಮಾರ್ಗದಲ್ಲಿ

ಪೂಜಾದಿ ಷೋಡಶೋಪಚಾರಾದಿಗಳು ಕರ್ಮವೆನಿಸಿಕೊಳ್ಳುವವು. ಜೀವನೋಪಾಯಗಳಾದ ಲೌಕಿಕ ವ್ಯಾಪಾರಗಳು ಕರ್ಮಗಳೇಯಾಗಿರುವವು. ಯಾವ ಕರ್ಮವಾದರೂ ಭಗವತ್ ಪ್ರೀತ್ಯರ್ಥವಾಗಿ ನಡೆಯಿಸಬೇಕೆಂಬ ಉಚ್ಚ ಭಾವನೆಯು ಹಿಂದು ಸಂಸ್ಕೃತಿಯ ತಳಹದಿಯಾಗಿದೆ. ಭಕ್ತಿ-ಪಂಥದಲ್ಲಿಯಾದರೂ, ಯಾವ ದೇವತೆಯ ಉಪಾಸಕರಾಗಿದ್ದಾಗೂ ಮುಖ್ಯವಾಗಿ ಆ ದೇವತೆಯೇ ಸೃಷ್ಟಿಗೆ ಮೂಲವೆಂಬ ಭಾವನೆಯಿರುವುದು. ಜ್ಞಾನಕಾಂಡದಲ್ಲಂತೂ ಈ ವಿಷಯವನ್ನು ಹೇಳುವ ಕಾರಣವೇ ಇಲ್ಲ. ಅಂತೆಯೇ ಜ್ಞಾನಮಾರ್ಗದ ವೇದಾಂತ ಸೂತ್ರಗಳಿಗೆ ಭಾಷ್ಯಕಾರರಾದ ಅನೇಕ ಆಚಾರ್ಯರು ತಂತ್ರಗ್ರಂಥಗಳನ್ನು ಸಾಧನೆಗಾಗಿ ಬರೆದಿರುವರು. ಶಂಕರಾಚಾರ್ಯರ 'ಪ್ರಪಂಚಸಾರ,' ರಾಮಾನುಜಾಚಾರ್ಯರ 'ಪಾಂಚರಾತ್ರವಿವೇಚನೆ' ಮತ್ತು ಮಧ್ವಾಚಾರ್ಯರ 'ತಂತ್ರಸಾರ' ಇದಕ್ಕೆ ನಿದರ್ಶನವಾಗಿವೆ. ಅದರಂತೆ ಶೈವ, ಪಾಶುಪತ, ಲಾಕುಳ, ಶಾಕ್ತ ಮುಂತಾದ ಸಾಂಪ್ರದಾಯಿಕರ ತಂತ್ರಗ್ರಂಥಗಳು ರಚಿಸಲ್ಪಟ್ಟಿವೆ. ಈ ತಂತ್ರಗ್ರಂಥಗಳು ಶಿವನು ಪಾರ್ವತಿಗೆಯಾಗಲಿ, ವಿಷ್ಣು ಬ್ರಹ್ಮನಿಗೆಯಾಗಲಿ ಹೇಳಿದಂತೆ, ಇನ್ನಿತರ ದೇವತೆಗಳು ಹೇಳಿದವುಗಳಂತೆ ಪ್ರಾರಂಭವಾದರೂ ಮನುಷ್ಯರಿಂದ ರಚಿಸಲ್ಪಟ್ಟವುಗಳೆಂಬುದರಲ್ಲಿ ಸಂದೇಹವಿಲ್ಲ. ಮಹಾನುಭಾವಪಂಥದ ಮೂಲಪುರುಷನಾದ ಚಕ್ರಧರನು 'ಸೂತ್ರಪಾಠ' ಎಂಬ ಗ್ರಂಥದಲ್ಲಿ ಒಳ್ಳೇ ಸರಸವಾದ ನೈಜವಾದ ಉಪಪತ್ತಿಯನ್ನು ಹೇಳಿರುವನು. 'ಆಗಮಃ ಸಿದ್ಧಕೃತಃ' ಎಂದಿರುವನು. ಅಂದರೆ ಆಗಮಗಳು ಸಿದ್ಧರಿಂದ ರಚಿಸಲ್ಪಟ್ಟವುಗಳು. ಐತಿಹಾಸಿಕ ದೃಷ್ಟಿಯಿಂದಲೂ ಈ ಮಾತು ನಿಜವೆಂಬಂತೆ ಕಾಣುವುದು. ಸಿದ್ಧಪುರುಷರ ಸಂಖ್ಯೆಯು ಇಂತಿಷ್ಟೆಂದು ಹೇಳುವುದು ಹೇಗೆ ಅಸಾಧ್ಯವೋ, ಹಾಗೆಯೇ ಇಂತಹ ಕಾಲದಲ್ಲಿ ರಚಿಸಲ್ಪಟ್ಟವುಗಳೆಂದು ಹೇಳುವುದೂ ಕಷ್ಟ. ವೇದೋಪನಿಷತ್ತುಗಳ ಕಾಲದಿಂದ ಇಂದಿನವರಗೂ ಆಗಿರುವವು, ಆಗುತ್ತಲೇ ಇರುವವು. ನಾನಾ ಅಭಿಪ್ರಾಯದ ಸಿದ್ಧಪುರುಷರು ತಮ್ಮ ತಮ್ಮ ಅಭಿಪ್ರಾಯಾನುಸಾರವಾಗಿ ಕಾಲಕಾಲಕ್ಕೆ ತಕ್ಕಂತೆ ಗ್ರಂಥಗಳನ್ನು ಬರೆದಿರುವರು. ಈ ರೀತಿಯಾಗಿ ಸಂಸ್ಕೃತವಾಙ್ಮಯದಲ್ಲಿ ಈ ತಂತ್ರಗಳ ರಾಶಿಯೇ ಆಗಿರುವುದು. ಎಷ್ಟೋ ಗ್ರಂಥಗಳು ಲುಪ್ತವಾಗಿ ಹೋಗಿವೆ. ಜನರ ಆಚಾರವಿಚಾರಗಳಲ್ಲಿ ಪರಿವರ್ತನೆಯಾದಂತೆ, ಹಳೇ ಗ್ರಂಥಗಳಿಗೆ ಮನ್ನಣೆ ಇಲ್ಲದಂತಾಗಿ, ಕಾಲನ ದವಡೆಯಲ್ಲಡಗಿದವು. ಈ ತಂತ್ರಮಾರ್ಗದಲ್ಲಿ ಯಾವ ಕುಲ, ಜಾತಿ, ಪಂಥ, ಸ್ತ್ರೀ,

ಸಿದ್ಧವೆಂದು ಸ್ಥೂಲವಾಗಿ ಕರೆಯಬಹುದು. ಈ ಮೂರು ಕಾಂಡಗಳ ಉಪಯೋಗವು ಇಹಪರ ಶ್ರೇಯಸ್ಸು ಸಂಪಾದನೆಗಾಗಿ. ಬ್ರಹ್ಮಕಾಂಡವಾದ ತತ್ತ್ವನಿಶ್ಚಯಗಳಲ್ಲಿ ವಿಚಾರವೈಚಿತ್ರ್ಯಕ್ಕನುಗುಣವಾಗಿ ಭಿನ್ನ ಭಿನ್ನ ತತ್ತ್ವ ನಿಶ್ಚಯಗಳ ಪ್ರತಿಪಾದನೆಯಾದಂತೆ, ಉಪಾಸನಾಕಾಂಡವಾದ ಸಾಧನ ಗ್ರಂಥಗಳು ಅನೇಕ ರೀತಿಯಿಂದ ಭಿನ್ನಭಿನ್ನವಾಗಿರುವುದು ಸಹಜವಿದೆ. ಭಾವನೆಗೆ ಸಂಬಂಧಪಟ್ಟ ಈ ಸಾಧನಮಾರ್ಗವು ಭಕ್ತಿಪಂಥಕ್ಕೆ ಸೇರಿದ್ದು. ಬೇರೆ ಬೇರೆ ತತ್ತ್ವಜ್ಞಾನಗಳು ಹೆಚ್ಚಿದಂತೆ ತದನುಗುಣವಾಗಿ ಸಾಧನ ಗ್ರಂಥ ಗಳು ಹೆಚ್ಚುವುದು ಸಹಜವಾದದ್ದು. ಅಂತೆಯೇ ಜೈನ–ಬೌದ್ಧ–ಪಾಶುಪತ, ವೈಷ್ಣವ, ಸೌರ, ಗಾಣಪತ್ಯ, ಶಾಕ್ತ ಮುಂತಾದ ಸಾಂಪ್ರದಾಯಿಕ ತಂತ್ರಗ್ರಂಥಗಳು ಹುಟ್ಟಿವೆ. ಪರಸ್ಪರ ಭಿನ್ನ, ಅನೇಕ ವಿಧವಾದ ಧಾರ್ಮಿಕಾ ಚಾರಗಳು ಬಳಕೆಯಲ್ಲಿ ಬಂದಿವೆ. ಆದುದರಿಂದ "ತಂತ್ರ" ಶಬ್ದವು ವ್ಯಾಪಕಾರ್ಥದಲ್ಲಿ ಶಾಸ್ತ್ರ, ಸಿದ್ಧಾಂತ, ಅನುಷ್ಠಾನ, ವಿಜ್ಞಾನ ವಿಷಯಕವಾದ ಗ್ರಂಥಗಳೆಂದು ಕರೆಯಲ್ಪಟ್ಟಿದೆ ಶಂಕರಾಚಾರ್ಯರು "ಸಾಂಖ್ಯಶಾಸ್ತ್ರ"ಕ್ಕೆ ತಂತ್ರ ಎಂದಿರುವರು. 'ಸ್ಮೃತಿಶ್ಚ ತಂತ್ರಾಖ್ಯಾ ಪರಮರ್ಷಿಪ್ರಣೀತಾ' ಎಂದು (೨-೧-೧) ಮಹಾಭಾರತದಲ್ಲೂ ನ್ಯಾಯ, ಧರ್ಮಶಾಸ್ತ್ರ, ಯೋಗ ಶಾಸ್ತ್ರ ಮುಂತಾದವುಗಳಿಗೆ ತಂತ್ರ ಎಂದು ಪ್ರಯೋಗವಾಗಿದೆ. ವಾಚಸ್ಪತಿ ಮಿಶ್ರನು ತತ್ತ್ವವೈಶಾರದಿ ಎಂಬ ಗ್ರಂಥದಲ್ಲಿ "ಆಗಚ್ಛಂತಿ ಬುದ್ಧಿಮಾರೋ ಹಂತಿ ಯಸ್ಮಾದ್ ಅಭ್ಯುದಯನಿಶ್ರೇಯಸೋಪಾಯಾಃ ಸ ಆಗಮಃ"(೧–೭) ಎಂದಿರುವನು. ಅಂದರೆ ಯಾವ ಶಾಸ್ತ್ರದಿಂದ ಭೋಗ ಮತ್ತು ಮೋಕ್ಷದ ಉಪಾಯಗಳು ಬುದ್ಧಿಯಲ್ಲಿ ಬರುತ್ತವೆಯೋ ಅದು ಆಗಮಶಾಸ್ತ್ರ. ಸಾಧನಭೂತ ಉಪಾಯಗಳನ್ನು ಆಗಮವು ಕಲ್ಪಿಸಿಕೊಡುತ್ತದೆ. ಜ್ಞಾನ ಕರ್ಮೋಪಾಸನಾಕಾಂಡತ್ರಯಗಳೆಂದು ವಿಂಗಡಿಸಿಹೇಳಿದಾಗ್ಯೂಅನ್ಯೋನ್ಯ ಸಂಬಂಧವುಳ್ಳವುಗಳಾಗಿರುವವು. ಜ್ಞಾನಕ್ಕೆ ಕರ್ಮಭಕ್ತಿಗಳು ಆವಶ್ಯಕ; ಅದರಂತೆ ಭಕ್ತಿಗಾದರೂ ಜ್ಞಾನಕರ್ಮಗಳು ಬೇಕೆಬೇಕು. ಒಂದು ಪ್ರಾಧಾನ್ಯವಾಗಿದ್ದು, ಉಳಿದವು ಆನುಷಂಗಿಕಗಳಾಗಿಯೂ ಪೋಷಕ ಗಳಾಗಿಯೂ ಇರುವವು ಇವೆಲ್ಲವುಗಳ ಸಮನ್ವಯವು ಭಗವದ್ಗೀತೆಯಲ್ಲಿ ಮಾಡಲಾಗಿದೆ. ಆದುದರಿಂದ ಅದು ಸರ್ವಗ್ರಂಥವಾಗಿದೆ ಇದಲ್ಲದೆ ಜ್ಞಾನ, ಕರ್ಮ, ಭಕ್ತಿ ಎಂಬ ಶಬ್ದಗಳಾದರೂ ಬೇರೆ ಬೇರೆ ವ್ಯಾಪಕಾರ್ಥ ದಲ್ಲಿ ಬಳಕೆಯಲ್ಲಿ ಬಂದಿವೆ. ಉದಾಹರಣೆಗಾಗಿ, ಕರ್ಮಕಾಂಡದಲ್ಲಿ ಶ್ರೌತ-ಸ್ಮಾರ್ತಕರ್ಮಗಳು ನಿರ್ದೇಶಿಸಲ್ಪಟ್ಟರೂ, ಭಕ್ತಿಮಾರ್ಗದಲ್ಲಿ

ಪೂಜಾದಿ ಷೋಡಶೋಪಚಾರಾದಿಗಳು ಕರ್ಮವೆನಿಸಿಕೊಳ್ಳುವವು. ಜೀವನೋಪಾಯಗಳಾದ ಲೌಕಿಕ ವ್ಯಾಪಾರಗಳು ಕರ್ಮಗಳೇಯಾಗಿರುವವು. ಯಾವ ಕರ್ಮವಾದರೂ ಭಗವತ್ ಪ್ರೀತ್ಯರ್ಥವಾಗಿ ನಡೆಯಿಸಬೇಕೆಂಬ ಉಚ್ಚ ಭಾವನೆಯು ಹಿಂದು ಸಂಸ್ಕೃತಿಯ ತಳಹದಿಯಾಗಿದೆ. ಭಕ್ತಿ-ಪಂಥದಲ್ಲಿಯಾದರೂ, ಯಾವ ದೇವತೆಯ ಉಪಾಸಕರಾಗಿದ್ದಾಗೂ ಮುಖ್ಯವಾಗಿ ಆ ದೇವತೆಯೇ ಸೃಷ್ಟಿಗೆ ಮೂಲವೆಂಬ ಭಾವನೆಯಿರುವುದು. ಜ್ಞಾನಕಾಂಡದಲ್ಲಂತೂ ಈ ವಿಷಯವನ್ನು ಹೇಳುವ ಕಾರಣವೇ ಇಲ್ಲ. ಅಂತೆಯೇ ಜ್ಞಾನಮಾರ್ಗದ ವೇದಾಂತ ಸೂತ್ರಗಳಿಗೆ ಭಾಷ್ಯಕಾರರಾದ ಅನೇಕ ಆಚಾರ್ಯರು ತಂತ್ರಗ್ರಂಥಗಳನ್ನು ಸಾಧನೆಗಾಗಿ ಬರೆದಿರುವರು. ಶಂಕರಾಚಾರ್ಯರ 'ಪ್ರಪಂಚಸಾರ,' ರಾಮಾನುಜಾಚಾರ್ಯರ 'ಪಾಂಚರಾತ್ರವಿವೇಚನೆ' ಮತ್ತು ಮಧ್ವಾಚಾರ್ಯರ 'ತಂತ್ರಸಾರ' ಇದಕ್ಕೆ ನಿದರ್ಶನವಾಗಿವೆ. ಅದರಂತೆ ಶೈವ, ಪಾಶುಪತ, ಲಾಕುಳ, ಶಾಕ್ತ ಮುಂತಾದ ಸಾಂಪ್ರದಾಯಿಕರ ತಂತ್ರಗ್ರಂಥಗಳು ರಚಿಸಲ್ಪಟ್ಟಿವೆ. ಈ ತಂತ್ರಗ್ರಂಥಗಳು ಶಿವನು ಪಾರ್ವತಿಗೆಯಾಗಲಿ, ವಿಷ್ಣು ಬ್ರಹ್ಮನಿಗೆಯಾಗಲಿ ಹೇಳಿದಂತೆ, ಇನ್ನಿತರ ದೇವತೆಗಳು ಹೇಳಿದವುಗಳಂತೆ ಪ್ರಾರಂಭವಾದರೂ ಮನುಷ್ಯರಿಂದ ರಚಿಸಲ್ಪಟ್ಟವುಗಳೆಂಬುದರಲ್ಲಿ ಸಂದೇಹವಿಲ್ಲ ಮಹಾನುಭಾವಪಂಥದ ಮೂಲಪುರುಷನಾದ ಚಕ್ರಧರನು 'ಸೂತ್ರಪಾಠ' ಎಂಬ ಗ್ರಂಥದಲ್ಲಿ ಒಳ್ಳೇ ಸರಸವಾದ ಸೈಜವಾದ ಉಪಪತ್ತಿಯನ್ನು ಹೇಳಿರುವನು. 'ಆಗಮಃ ಸಿಧಕೃತಃ' ಎಂದಿರುವನು. ಅಂದರೆ ಆಗಮಗಳು ಸಿದ್ಧರಿಂದ ರಚಿಸಲ್ಪಟ್ಟವುಗಳು. ಐತಿಹಾಸಿಕ ದೃಷ್ಟಿಯಿಂದಲೂ ಈ ಮಾತು ನಿಜವೆಂಬಂತೆ ಕಾಣುವುದು. ಸಿದ್ಧಪುರುಷರ ಸಂಖ್ಯೆಯು ಇಂತಿಷ್ಟೆಂದು ಹೇಳುವುದು ಹೇಗೆ ಅಸಾಧ್ಯವೋ, ಹಾಗೆಯೇ ಇಂತಹ ಕಾಲದಲ್ಲಿ ರಚಿಸಲ್ಪಟ್ಟವುಗಳೆಂದು ಹೇಳುವುದೂ ಕಷ್ಟ. ವೇದೋಪನಿಷತ್ತುಗಳ ಕಾಲದಿಂದ ಇಂದಿನವರಗೂ ಆಗಿರುವವು, ಆಗುತ್ತಲೇ ಇರುವವು ನಾನಾ ಅಭಿಪ್ರಾಯದ ಸಿದ್ಧಪುರುಷರು ತಮ್ಮ ತಮ್ಮ ಅಭಿಪ್ರಾಯಾನುಸಾರವಾಗಿ ಕಾಲಕಾಲಕ್ಕೆ ತಕ್ಕಂತೆ ಗ್ರಂಥಗಳನ್ನು ಬರೆದಿರುವರು. ಈ ರೀತಿಯಾಗಿ ಸಂಸ್ಕೃತವಾಙ್ಮಯದಲ್ಲಿ ಈ ತಂತ್ರಗಳ ರಾಶಿಯೇ ಆಗಿರುವುದು ಎಷ್ಟೋ ಗ್ರಂಥಗಳು ಲುಪ್ತವಾಗಿ ಹೋಗಿವೆ. ಜನರ ಆಚಾರವಿಚಾರಗಳಲ್ಲಿ ಪರಿವರ್ತನೆಯಾದಂತೆ, ಹಳೇ ಗ್ರಂಥಗಳಿಗೆ ಮನ್ನಣೆ ಇಲ್ಲದಂತಾಗಿ, ಕಾಲನ ದವಡೆಯಲ್ಲಡಗಿದವು. ಈ ತಂತ್ರಮಾರ್ಗದಲ್ಲಿ ಯಾವ ಕುಲ, ಜಾತಿ, ಪಂಥ, ಸ್ತ್ರೀ,

ಶೂದ್ರರೆನ್ನದೆ ಎಲ್ಲರಿಗೂ ಅಧಿಕಾರವಿದೆ. ಅಂತೆಯೇ ಎಲ್ಲ ಜಾತಿಯ ಸಿದ್ಧಪುರುಷರು ಸಮಾಜದಲ್ಲಿ ಪೂಜ್ಯರಾಗಿ ಎಲ್ಲರಿಗೂ ವಂದನೀಯರಾಗಿರುವರು. ಇದಲ್ಲದೆ ಜೊತೆಗೆ ಒಂದು ಪಂಥದವರು ಇನ್ನೊಂದು ಪಂಥದವರ ಆಚಾರಗಳನ್ನು ಹೀಯಾಳಿಸತೊಡಗಿದರು. ತಮ್ಮದೇ ಶ್ರೇಷ್ಠ ಮಾರ್ಗವೆಂದು ಇನ್ನೊಂದನ್ನು ಹೀಯಾಳಿಸುವಾಗ, ಪೂರ್ಣಸಿದ್ಧರಲ್ಲದವರಲ್ಲಿ ದ್ವೇಷಾಸೂಯೆಗಳಿಗೆ ಆಸ್ಪದವಾಯಿತು. ಹಿಂದು ಸಮಾಜದ ಸಾಂಸ್ಕೃತಿಕ ಇತಿಹಾಸವು ಪೂರ್ಣವಾಗಬೇಕಾದರೆ, ಬರೇ ತತ್ವಜ್ಞಾನದ ಇತಿಹಾಸವಷ್ಟೇ ಸಾಲದು; ಈ ತಂತ್ರಮಾರ್ಗದ ಇತಿಹಾಸವು ಅತ್ಯಾವಶ್ಯಕ. ಹಿಂದು ಸಮಾಜದ ಅಂಗೋಪಾಂಗಗಳಾದ ಅನೇಕ ಜಾತಿಪಂಥಗಳು ಈ ತಾಂತ್ರಿಕಾಚಾರಗಳ ಮೇಲೆ ನಿಂತಿವೆ ಕಲಿಯುಗದಲ್ಲಿ ಆಗಮಗಳೇ ಮುಖ್ಯವಾಗಿವೆ.

> "ಕೃತೇ ಶ್ರುತ್ಯುಕ್ತ ಆಚಾರಸ್ತ್ರೇತಾಯಾಂ ಸ್ಮೃತಿಸಂಭವಃ।
> ದ್ವಾಪರೇ ತು ಪುರಾಣೋಕ್ತಃ ಕಲಾವಾಗಮಸಮ್ಮತಃ॥"
>
> (ಕುಲಾರ್ಣವತಂತ್ರ)
>
> "ವಿನಾ ಹ್ಯಾಗಮಮಾರ್ಗೇಣ ಕಲೌ ನಾಸ್ತಿ ಗತಿಃ ಪ್ರಿಯೇ।"
>
> (ಮಹಾನಿರ್ವಾಣತಂತ್ರ)

ಈ ಶ್ಲೋಕಗಳು ಧಾರ್ಮಿಕ ಭಾಷೆಯಲ್ಲಿದ್ದರೂ ಕಾಲಕಾಲಕ್ಕೆ ಉಂಟಾದ ಆಚಾರಗಳ ಪರಿವರ್ತನೆಯನ್ನು ಸೂಚಿಸುತ್ತವೆ.

ವಾರಾಹಿತಂತ್ರಾನುಸಾರವಾಗಿ ಆಗಮದ ಲಕ್ಷಣಗಳು ಈ ಕೆಳಗಿನಂತೆ ಹೇಳಲಾಗಿವೆ:

> "ಸೃಷ್ಟಿಶ್ಚ ಪ್ರಲಯಶ್ಚೈವ ದೇವತಾನಾಂ ಯಥಾರ್ಚನಂ।
> ಸಾಧನಂ ಚೈವ ಸರ್ವೇಷಾಂ ಪುರಶ್ಚರಣಮೇವ ಚ॥
> ಷಟ್‌ಕರ್ಮಸಾಧನಂ ಚೈವ ಧ್ಯಾನಯೋಗಶ್ಚತುರ್ವಿಧಃ।
> ಸಪ್ತಭಿರ್ಲಕ್ಷಣೈರ್ಯುಕ್ತಮಾಗಮಂ ತದ್ವಿದುರ್ಬುಧಃ॥

ಇಲ್ಲಿ ಸೃಷ್ಟಿ, ಪ್ರಲಯ, ದೇವತಾರ್ಚನ, ಸರ್ವಸಾಧನ, ಪುರಶ್ಚರಣ ವಿಧಿ, ಷಟ್‌ಕರ್ಮ (ಅಂದರೆ ಶಾಂತಿ, ವಶೀಕರಣ, ಸ್ತಂಭನ, ವಿದ್ವೇಷಣ, ಉಚ್ಚಾಟನ, ಮಾರಣ, ಇವು ಷಟ್‌ಕರ್ಮಗಳು), ಧ್ಯಾನ, ಯೋಗ ಇವೆಲ್ಲವುಗಳು ಆಗಮಶಾಸ್ತ್ರದ ಲಕ್ಷಣಗಳು. ಆಗಮ ಶಾಸ್ತ್ರಗಳು ಮುಖ್ಯವಾಗಿ ಉಪಾಸನೆಗಾಗಿ ಹುಟ್ಟಿ ಬೆಳೆದಿದ್ದರೂ, ಅವುಗಳಲ್ಲಿ ಅನೇಕ ವಿಷಯಗಳ ಪ್ರತಿ

ಪಾದನೆ ಇರುವುದು. ಜ್ಞಾನ, ಕ್ರಿಯಾ, ಚರ್ಯಾ ಮತ್ತು ಯೋಗವೆಂದು, ನಾಲ್ಕುಪಾದಗಳಿಂದ ಕೂಡಿರುವುದಂತೂ ಪ್ರಸಿದ್ಧವಿದೆ. ಹೊಂಬಳದ ಶಾಸನ ದಲ್ಲಿ ವಾಮಶಕ್ತಿಯು ಆಗಮಸ್ಥಿತ ವಿದ್ಯಾವಳಿಯನ್ನು ಬಲ್ಲವನಾಗಿದ್ದನೆಂದು ಹೇಳಿದೆ. ಅದು ಈ ರೀತಿ:

"ವ್ರತದೀಕ್ಷಾವಿಧಿ ಕುಂಡಮಂಡಳವಿಧಾನಂ ಲಿಂಗಪೀಠಕ್ರಮಂ।
ಪ್ರತಿಷ್ಠಾಧ್ವಶೋಧನ ಶೋಷಣ ಭುವನಕೋಶಂ ವಾಸ್ತು
ಭೂದೇವಸಂ॥

ಸ್ಮೃತಿ ಭೂಭೇದಪರೀಕ್ಷೆ ದೇವನಿವಹಪ್ರಾಸಾದಮೆಂಬಾಗಮ।
ಸ್ಥಿತವಿದ್ಯಾವಳಿ ವಾಮಶಕ್ತಿಮುನಿಯಿಂ ವಿಖ್ಯಾತಮಾಯ್ತುರ್ವಿ
ಯೊಳ್"

ಇವೆಲ್ಲ ಆಗಮವಿದ್ಯೆಗಳು. ನಿಜಗುಣ ಶಿವಯೋಗಿಯು ಆಗಮ ಗಳನ್ನೇ ಆಧಾರವಾಗಿಟ್ಟುಕೊಂಡು, 'ವಿವೇಕಚಿಂತಾಮಣಿ'ಯನ್ನು ರಚಿಸಿ ರುವನು. ಆಗಮಶಾಸ್ತ್ರದ ಕನ್ನಡ ಜ್ಞಾನಕೋಶವೆಂದು ಅದನ್ನು ಕರೆದರೆ ಅತಿಶಯೋಕ್ತಿಯಾಗಲಾರದು. ಇದರಲ್ಲಿ ಜ್ಞಾನಕಾಂಡಕ್ಕೆ ಸಂಬಂಧಪಟ್ಟ ವಿಷಯಗಳಲ್ಲದೆ, ಶೈವ, ವೀರಶೈವರ ನಿತ್ಯನೈಮಿತ್ತಿಕಾಚರಣೆಯು, ದೀಕ್ಷೆ ಮುಂತಾದ ವಿಷಯಗಳು, ಭೂಗೋಲ, ಖಗೋಲ, ಜ್ಯೋತಿಷ, ನೃತ್ಯ, ವಾದ್ಯ, ಸಂಗೀತ ಮುಂತಾದ ಅನೇಕ ವಿಷಯಗಳನ್ನು ಸಂಗ್ರಹಿಸ ಲಾಗಿದೆ. ಮಂತ್ರ ತಂತ್ರಗಳಂತೂ ಸರಿಯೆ. ಶೈವಾಗಮದಲ್ಲಿಯ ಇಷ್ಟೊಂದು ವಿಷಯಗಳನ್ನು ಸಂಗ್ರಹವಾಗಿ ಹೇಳಿದ ಗ್ರಂಥಗಳು ಕನ್ನಡದಲ್ಲೇಕೆ, ಬೇರೆ ಯಾವ ದೇಶಿ ಭಾಷೆಗಳಲ್ಲಿಲ್ಲ. ಆಗಮಿಕ ಯೋಗವಂತೂ ಎಲ್ಲ ತಂತ್ರಗಳ ತಳಹದಿ, ಅದುವೆ ಕುಂಡಲಿನೀಯೋಗವು. ಈ ಯೋಗವು ಎಲ್ಲ ತಂತ್ರ ಗಳಲ್ಲಿ ಸಾಮಾನ್ಯವಾದದ್ದು. ದೇಹದಲ್ಲಿಯ ಷಟ್-ಚಕ್ರಗಳು,— ಇಡಾ, ಪಿಂಗಳಾ, ಸುಷುಮ್ನಾ ಆದಿ ನಾಡಿಗಳು, ಈ ನಾಡಿ ಮತ್ತು ಚಕ್ರಗಳಲ್ಲಿ ಅಕ್ಷರಗಳ ವರ್ಗೀಕರಣ, ಪರಮಾತ್ಮನ ಧ್ಯೇಯರೂಪಗಳು, ಧ್ಯಾನಧಾರಣಾ ಸಮಾಧಿ ಮುಂತಾದ ವಿಷಯಗಳು ಎಲ್ಲ ತಾಂತ್ರಿಕ ಗ್ರಂಥಗಳ ಸಾಮಾನ್ಯ ವಾದ ವಿಷಯಗಳು. ಲಕ್ಷ್ಮಣಾಚಾರ್ಯನು 'ಶಾರದಾತಿಲಕ' ದಲ್ಲಿ ತಂತ್ರ ಗ್ರಂಥಗಳ ಉದ್ದೇಶವನ್ನು ಈ ಕೆಳಗಿನಂತೆ ಹೇಳಿರುವನು:

"ಸಾರಂ ವಕ್ಷ್ಯಾಮಿ ತಂತ್ರಾಣಾಂ ಶಾರದಾತಿಲಕಂ ಶುಭಮ್।
ಧರ್ಮಾರ್ಥಕಾಮಮೋಕ್ಷಾಣಾಂ ಪ್ರಾಪ್ತೇಃ ಪ್ರಥಮಕಾರಣಂ॥

ಶಬ್ದಾರ್ಥಸೃಷ್ಟಿಭಿರ್ಮುನಿಭಿಶ್ಛಂದೋಭಿರ್ದೇವತೈಃ ಸಹ।
ವಿಧಿಶ್ಚ ಯಂತ್ರಮಂತ್ರಾಣಾಂ ತಂತ್ರೇಽಸ್ಮಿನ್ನಭಿಧೀಯತೆ ॥ ೫ ॥
(ಶಾರದಾತಿಲಕ)

## ತಂತ್ರಗಳ ಮೂಲತತ್ತ್ವ

ತಂತ್ರಮಾರ್ಗದ ಮೂಲತತ್ತ್ವವು ಪುಂ, ಸ್ತ್ರೀ ಶಕ್ತಿರೂಪವು. ಪರಮೇಶ್ವರನು ಮತ್ತು ಆತನ ಶಕ್ತಿಯು – ಈ ಎರಡು ತತ್ತ್ವಗಳು ಎಲ್ಲ ತತ್ತ್ವಗಳ ಮೂಲವು.

ಸಚ್ಚಿದಾನಂದ ವಿಭವಾತ್ ಸಕಲಾತ್ ಪರಮೇಶ್ವರಾತ್।
ಆಸೀಚ್ಛಕ್ತಿಸ್ತತೋ ನಾದೋ ನಾದಾದ್ ಬಿಂದುಸಂಭವಾತ್॥
(ಶಾರದಾತಿಲಕ)

ಶಿವ ಶಕ್ತಿ, ವಿಷ್ಣು ಲಕ್ಷ್ಮಿ, ಪುರುಷ ಪ್ರಕೃತಿಯಿಂದ ನಾದ ಬಿಂದು ಹುಟ್ಟುವವು ಈ ಪರಬಿಂದುವೇ ಶಬ್ದಬ್ರಹ್ಮವೆನಿಸಿಕೊಳ್ಳುವುದು. ಈ ಶಬ್ದಬ್ರಹ್ಮದಿಂದ ಇಚ್ಛಾ, ಕ್ರಿಯಾ, ಜ್ಞಾನಶಕ್ತಿಗಳು ಪ್ರಾದುರ್ಭೂತವಾಗುವವು. ಈ ಶಬ್ದಬ್ರಹ್ಮವೆನಿಸುವ ಚೈತನ್ಯವೇ ದೇಹದಲ್ಲಿಯ ಕುಂಡಲಿನೀಶಕ್ತಿ ಎನಿಸಿಕೊಳ್ಳುವುದು. ಈ ಪರಬಿಂದುವಿನಿಂದ ಮುಂದೆ ಮಹತ್, ಅಹಂಕಾರ, ಜ್ಞಾನೇಂದ್ರಿಯ ಪಂಚಕ, ಕರ್ಮೇಂದ್ರಿಯ ಪಂಚಕ, ತನ್ಮಾತ್ರೆಗಳು, ಪಂಚಮಹಾಭೂತಗಳು, ಅವುಗಳ ಅಧಿದೈವತಗಳು ಪ್ರಕಟವಾಗುವವು. ಆಕಾಶ, ವಾಯು, ತೇಜ, ಅಪ್, ಪೃಥ್ವಿಗಳಲ್ಲಿಯ ಶಕ್ತಿಗಳೇ ಕ್ರಮವಾಗಿ ಶಾಂತ್ಯಾತೀತ, ಶಾಂತಿ, ವಿದ್ಯಾ, ಪ್ರತಿಷ್ಠಾ, ನಿವೃತ್ತಿ ಕಲೆಗಳೆನ್ನಿಸಿಕೊಳ್ಳುವವು. ಇಚ್ಛಾ, ಕ್ರಿಯಾ, ಜ್ಞಾನ ಶಕ್ತಿಗಳೇ ಅಕಾರ, ಉಕಾರ, ಮಕಾರವೆನಿಸಿ ಓಂಕಾರವೆಂದು ಕರೆಯಲ್ಪಡುವವು. ಈ ಶಕ್ತಿತ್ರಯಗಳೇ ಸತ್ವ, ರಜ, ತಮವೆಂದು ಗುಣತ್ರಯಗಳು ಅ, ಉ, ಮ, ನಾದ, ಬಿಂದು, ಕಲೆ ಅಥವಾ ಘೋಷ, ಶಾಂತ, ಶಾಂತ್ಯಾತೀತಗಳಿಂದ ಪರಮಾತ್ಮ ವಾಚಕ ಮಂತ್ರವಾಗುವುದು. ವಾಚ್ಯವಾದ ಮಂತ್ರಮೂರ್ತಿ ಏರ್ಪಡುವುದು. ಇದೇ ಧ್ವನಿತತ್ತ್ವವು ಪ್ರಾಣಿಗಳ ದೇಹದಲ್ಲಿ ಪರಾ, ಪಶ್ಯಂತಿ, ಮಧ್ಯಮಾ, ವೈಖರೀ ಎಂದು ನಾಲ್ಕು ಬಗೆಯಾಗಿರುವುದು. ಪರೆಯು ಶಬ್ದಬ್ರಹ್ಮವು. ಅದುವೇ ಕುಂಡಲಿನೀಶಕ್ತಿ. ಇದುವೆ ಭಾಷೆಯಲ್ಲಿ

ಪ್ರಕಟವಾಗುವುದು. ಶಾರದಾತಿಲಕದ ವ್ಯಾಖ್ಯಾನಕಾರನಾದ ರಾಘವ ಭಟ್ಟನು ಈ ಕೆಳಗಿನಂತೆ ಹೇಳುವನು—

" ಕುಂಡಲ್ಯಾ ಶಬ್ದಾರ್ಥರೂಪಂ ಪರಾ, ಪಶ್ಯಂತಿ. ಮಧ್ಯಮಾ, ವೈಖರೀ ರೂಪತ್ವೇನ ಶಬ್ದಜನಕತ್ವಾತ್, ಕಾರ್ಯಕಾರಣೋಪಚಾರಾತ್, ಶಬ್ದರೂಪವಿಷಯತ್ವಾತ್, ಅರ್ಥರೂಪಸ್ವಭಾವೇನ ಚರಮ್, ಪೃಥಿವ್ಯಾಂಶಾಧಿಕ್ಯಾತ್ ಕಾರ್ಯಕಾರಣೋಪಚಾರಾತ್ ಅಚರಮ್ ಏವಂ ಭೂತಂ ಗಚ್ಛತೀತಿ ಜಗದ್ ವಿನಶ್ವರಂ ಶರೀರಂ ವ್ಯಾಪ್ತಂ —

" ಸರವಃ ಶ್ರುತಿಸಂಪನ್ನೈಃ ಶಬ್ದಬ್ರಹ್ಮೇತಿ ಕಥ್ಯತೇ "

(ಶಾರದಾ ತಿಲಕ)

ಪರೆಯು ಚೈತನ್ಯಾಂತರ್ಗತವಾದದ್ದು, ಸೂಕ್ಷ್ಮವು ಪಂಚಾಶತ್ ವರ್ಣರೂಪವು ಪಶ್ಯಂತಿ, ಶಬ್ದಾರ್ಥರೂಪವಾದದ್ದು ಮಧ್ಯಮಾ, ವಾಕ್ಯರೂಪವಾದದ್ದೇ ವೈಖರಿಯು ಇದೇ ಜಗತ್ತೇ ಶಬ್ದಬ್ರಹ್ಮವು.—

" ಶಬ್ದಬ್ರಹ್ಮ ತಂ ಪ್ರಾಹು ಸರ್ವಾಗಮವಿಶಾರದಃ ।
ಶಬ್ದಬ್ರಹ್ಮೇತಿ ಶಬ್ದಾರ್ಥಂ ಶಬ್ದಮಿತ್ಯಪರೇ ಜಗುಃ ॥
..................................................
ಚೈತನ್ಯಂ ಸರ್ವಭೂತಾನಾಂ ಶಬ್ದಬ್ರಹ್ಮೇತಿ ಮೇ ಮತಿಃ " ॥ ೧೪ ॥

(ಶಾರದಾತಿಲಕ)

ಆಗಮ ಗ್ರಂಥಗಳಲ್ಲಿ ಶಕ್ತಿಯೆಂದರೆ —

" ಸಾಪ್ರಸೂತೇ ಕುಂಡಲಿನೀ ಶಬ್ದಬ್ರಹ್ಮಮಯೀ ವಿಭುಃ ।
ಶಕ್ತಿಂ ತತೋ ಧ್ವನಿಸ್ತಸ್ಮಾನ್ನಾದಸ್ತಸ್ಮಾನ್ನಿರೋಧಿಕಾ ॥
ತತೋಽರ್ಧೇಂದುಸ್ತತೋ ಬಿಂದುಸ್ತಸ್ಮಾದಾಸೀತ್ಪರಾ ತತಃ ।
ಪಶ್ಯಂತಿ ಮಧ್ಯಮಾವಾಚಿ ವೈಖರೀ ಶಬ್ದಜನ್ಮಭೂಃ॥
ಇಚ್ಛಾಜ್ಞಾನಕ್ರಿಯಾತ್ಮಾಽಸೌ ತೇಜೋರೂಪಾ ಗುಣಾತ್ಮಿಕಾ ।
ಕ್ರಮೇಣಾನೇನ ಸೃಜತಿ ಕುಂಡಲಿ ವರ್ಣಮಾಲಿಕಾಮ್ ॥ "

(ಶಾರದಾತಿಲಕ)

ಈ ಶಾಸ್ತ್ರದಲ್ಲಿ ಶಬ್ದದ ಮೂಲಕಾರಣಾವಸ್ಥೆಯೇ ಶಕ್ತಿಯೆನಿಸಿಕೊಳ್ಳುವುದು. ಅದೇ ಶಕ್ತಿಯಿಂದ ಧ್ವನಿಯು. ಈ ಮೂಲಧ್ವನಿಯು

ಅವಸ್ಥಾಂತರಗಳೂ ಅವುಗಳ ಸ್ಥಾನಗಳೂ ಈ ಕೆಳಗಿನಂತೆ ತಂತ್ರಶಾಸ್ತ್ರ ಗಳಲ್ಲಿ ಹೇಳಲ್ಪಟ್ಟಿವೆ:

"ತತ್ರ ಸತ್ವಪ್ರವಿಷ್ಟಾ ಚಿಚ್ಛಕ್ತಿವಾಚ್ಯಾ ಪರಮಾಕಾಶಾವಸ್ಥಾ, ಸೈವ ಸತ್ವಪ್ರವಿಷ್ಟಾ ರಜೋಽನುವಿದ್ಧಾ ಸತಿ ಧ್ವನಿಶಬ್ದವಾಚ್ಯಾ ಅಕ್ಷರಾ ವಸ್ಥಾ, ಸೈವ ತಮೋಽನುವಿದ್ಧಾ ನಾದಶಬ್ದವಾಚ್ಯಾ, ಸೈವ ತಮಃಪ್ರಾಚು ರ್ಯಾನ್ನಿರೋಧಿಕಾಶಬ್ದವಾಚ್ಯಾ, ಸೈವ ಸತ್ವಪ್ರಾಚುರ್ಯಾದರ್ಧೇಂದು ಶಬ್ದವಾಚ್ಯಾ, ತದುಭಯಸಂಯೋಗಾದ್ ಬಿಂದುಶಬ್ದವಾಚ್ಯಾ, ಬಿಂದು ಸ್ಥಾನಾಂತರಗತಃ ಪರಾದ್ಯಾಖ್ಯೋಭವತಿ, ಪರಾ ಮೂಲೇ, ಪಶ್ಯಂತಿ ಸ್ವಾಧಿ ಷ್ಠಾನೇ, ಮಧ್ಯಮಾ ಹೃದಯೇ, ವೈಖರೀ ಮುಖೇ. ।"

ಇದು ಕ್ರಮವು. ಈ ವೈಖರೀಯಿಂದ ಅನೇಕ ಮಂತ್ರಗಳು, ಮಾತೃಕಾನ್ಯಾಸ, ತತ್ವನ್ಯಾಸಾದಿಗಳು ಏರ್ಪಟ್ಟಿವೆ.

**ಪೂಜೆಯ ಸ್ಥಾನಗಳು:** ಪೂಜೆಗಾಗಿ ಮಂತ್ರಗಳ ವಿಧಾನಗಳು. ವಾಯುವೀಯ ಸಂಹಿತೆಯಲ್ಲಿ ಪೂಜಾ ಸ್ಥಾನಗಳನ್ನು ಹೇಳಲಾಗಿದೆ—

"ಪೂಜಾಂ ಚ ಮಹತೀಂ ಕುರ್ಯಾದ್ದೇವಮಾವಾಹ್ಯ ಪೂರ್ವವತ್।
ಅಲಬ್ಧೇ ಸ್ಥಾಪಿತೇ ಲಿಂಗೇ ಶಿವಸ್ಥಾನೇ ಜಲೇಽಥವಾ।
ವನ್ಹೌ ರವೌ ತಥಾ ವ್ಯೋಮ್ನಿ ಭಗವಂತಂ ಶಿವಮ್ ಯಜೇತ್ ॥
(ಅಧ್ಯಾಯ ೨೮, ಶ್ಲೋಕ ೭೦)

ಮಧ್ವಾಚಾರ್ಯರು ತಂತ್ರಸಾರದಲ್ಲಿ —

"ಪೂಜಾಶ್ಚ ಭಗವಾನ್ನಿತ್ಯಂ ಚಕ್ರಾಬ್ಜಾದಿಕ ಮಂಡಲೆ ।
ಹೃದಯೇ ವಾಚಲೇ ವಾಪಿ ಜಲೇ ವಾ ಕೇವಲೇ ಸ್ಥಲೇ ॥
(ಶ್ಲೋ. ೪೯ ಅಧ್ಯಾಯ ೧)

ಅಂತೂ ಚಕ್ರಾಬ್ಜ, ಭದ್ರಕ ಮುಂತಾದ ತತ್ತದ್ದೇವತಾ ಯಂತ್ರ ಗಳು, ಅಗ್ನಿ, ಸೂರ್ಯ, ಬಾಣ, ಶಾಲಿಗ್ರಾಮ, ದೇವಾಲಯದಲ್ಲಿ ಸ್ಥಿರ ಪ್ರತಿಮೆ, ಅಥವಾ ಸಂನ್ಯಾಸಿ, ಗುರ್ವಾದಿ ಚಲಪ್ರತಿಮೆ, ಭೂಮಿಯಲ್ಲಿ ಮಾಡಲ್ಪಟ್ಟ ಮಂಡಲ, ಸ್ಥಂಡಿಲ ಇವೆಲ್ಲವುಗಳು ಪೂಜೆಯ ಸ್ಥಾನಗಳು.

ಅದೇ ವಾಯುವೀಯ ಸಂಹಿತೆಯ ೨೫ನೆಯ ಅಧ್ಯಾಯದಲ್ಲಿ "ಜಗತೋ ವಾಗರ್ಥಾತ್ಮಕತಾ" ಎಂದೂ, ಶಬ್ದ ಮತ್ತು ಅರ್ಥ ಎರಡು

ಪ್ರಕೃತಿಯ ಪರಿಣಾಮಗಳೆಂದೂ ಹೇಳುತ್ತ, ಷಡಧ್ವರೂಪಗಳನ್ನು ಹೇಳ ಲಾಗಿದೆ ಅವು ಮಂತ್ರಾಧ್ವ, ಪದಾಧ್ವ, ವರ್ಣಾಧ್ವ, ಭುವನಾಧ್ವ, ತತ್ವಾಧ್ವ, ಕಲಾಧ್ವ. ಕ್ರಮವಾಗಿ ಶಬ್ದಾಧ್ವ ಮತ್ತು ಅರ್ಥಾಧ್ವಗಳ ವ್ಯಾಪ್ಯ ವ್ಯಾಪಿಕಾಭಾವ ಸಂಬಂಧವನ್ನೂ ಹೇಳಲಾಗಿದೆ ಅನಂತರ ಶಿವನ ಪಂಚ ಮೂರ್ತಿಗಳನ್ನು, ಪಂಚತತ್ವಗಳನ್ನು ವಿಸ್ತರಿಸುತ್ತ, ಸಾಂಖ್ಯದ ೨೪ ತತ್ವ ಗಳು ಹೇಳಿವೆ. ಪುರುಷಚಿಹ್ನ ಶಿವನದು, ಸ್ತ್ರೀಚಿಹ್ನವೆಲ್ಲವು ದೇವಿಯದು. ಶಕ್ತಿಯು ಶಿವನ ಸಮಾನ ಧರ್ಮಿಣಿಯೆಂದೂ, ಈ ಶಕ್ತಿಯು ಪ್ರಕ್ಷುಬ್ಧ ವಾದಾಗ ನಾದವು ಉತ್ಪನ್ನವಾಗುವುದೆಂದೂ, ಅದರಿಂದ ಬಿಂದು, ಆ ಬಿಂದುವಿನಿಂದ ಮಹೇಶ್ವರ, ಮಹೇಶ್ವರನಿಂದ ವಿದ್ಯೆ, ಈ ವಿದ್ಯೆಯೆ ವಾಣಿಯ ಸ್ವಾಮಿನಿ, ಶಿವನು ಸಾಕ್ಷಾತ್ ವಾಗೀಶ ಎನಿಸಿಕೊಳ್ಳುತ್ತಾನೆ. ಅದುವೆ ವರ್ಣಗಳ ರೂಪದಿಂದ ಮಾತೃಕಾಶಕ್ತಿಯಾಗಿ. ಅನಂತನ ಸಮಾವೇಶದಿಂದ ಮಾಯಾ ಎಂಬ ಶಕ್ತಿಯು ಕಾಲವನ್ನು ಸೃಷ್ಟಿಸುತ್ತದೆ.

ಅನಂತರ ನಿಯತಿ, ಕಲಾ, ವಿದ್ಯಾ, ಇವುಗಳ ಸೃಷ್ಟಿ. ಕಲೆಯಿಂದ ರಾಗ ಮತ್ತು ಪುರುಷ, ಮಾಯಾಶಕ್ತಿಯಿಂದ ತ್ರಿಗುಣ ಸ್ವರೂಪವಾದ ಅವ್ಯಕ್ತ ತತ್ವದ ಉತ್ಪತ್ತಿ. ಮೂರು ಗುಣಗಳು, ಆ ಗುಣಗಳ ಅಧಿದೇವತೆ ಗಳು, ಅನಂತರ ಮಹತ್ತತ್ವ, ಅನಂತರ ಬ್ರಹ್ಮಾಂಡವು.

ವಾಯವೀಯ ಸಂಹಿತೆಯಲ್ಲಿ —

" ಯಥಾ ನ ಜಾಯತೇ ಪುತ್ರಃ ಪಿತರಂ ಮಾತರಂ ವಿನಾ ॥ ೩೭ ॥
ತಥಾ ಭವಂ ಭವಾನೀಂ ಚ ವಿನಾ ನೈತತ್ ಚರಾಚರಮ್ ।
ಸ್ತ್ರೀಪುಂಸಪ್ರಭವಂ ವಿಶ್ವಂ ಸ್ತ್ರೀಪುಂಸಾತ್ಮಕಮೇವ ಚ ॥ ೩೮ ॥

ಎಂದು ಹೇಳಿದೆ. ವಾಚ್ಯವಾಚಕದಲ್ಲಿ ಐಕ್ಯವನ್ನಾಗಲಿ, ವ್ಯಾಪ್ಯವ್ಯಾಪಕ ಭಾವವನ್ನಾಗಲಿ ತಮ್ಮ ತಮ್ಮ ಮತಪ್ರಕ್ರಿಯೆಗಳನ್ನಾಗಲಿ ಹೇಳುತ್ತ ಶಿವನಿಗೆ ಓಂಕಾರವೆಂಬ ಏಕಾಕ್ಷರ ದೇವ ಎನ್ನುತ್ತಾರೆ. (೭ ನೆಯ ಅಧ್ಯಾಯ ೨೫ ನೆಯ ಶ್ಲೋಕ—ವಾಯವೀಯ ಸಂಹಿತೆ). ಅಕಾರವು ಋಗ್ವೇದ, ಉಕಾರವು ಯಜುರ್ವೇದ, ಮಕಾರವು ಸಾಮವೇದ, ನಾದವು ಅಥರ್ವಣಶ್ರುತಿಯೆಂದು ಅಥರ್ವಣ ವೇದಕ್ಕೆ ಪ್ರಾಧಾನ್ಯ ಕೊಡಲಾಗಿದೆ. ಈಶನಾದ ಶಿವನಿಗೇನೇ ನಾದವೆನ್ನಲಾಗಿದೆ. ಈ ರೀತಿ ಈಶನ ಮೂರು ಮಾತ್ರೆಗಳಿಂದ ಮೂರು ಪ್ರಕಾರದ ಜಗತ್ತು ಉಂಟಾಗಿ, ಅರ್ಧಮಾತ್ರೆಯಾದ ನಾದವು ಶಿವನನ್ನು

ಬೋಧಿಸುತ್ತದೆ (ಅಧ್ಯಾಯ ೭, ಶ್ಲೋಕ ೨೬ ರಿಂದ ೩೧). ಶಿವ ಶಕ್ತಿ ಇಬ್ಬರ ಪ್ರಸಾದವಾದರೆ ತತ್ಕಾಲ ಮುಕ್ತಿಯಾಗುವುದು. ಪ್ರಸಾದವು ಭಕ್ತಿಯಿಂದ ಉಂಟಾಗುತ್ತದೆ. ಅನೇಕ ಜನ್ಮಗಳಿಂದ ಶ್ರೌತಸ್ಮಾರ್ತ ಮಾರ್ಗದಲ್ಲಿ ಅನುವರ್ತಿಸಿ, ಸಿದ್ಧರಾದ, ವಿರಕ್ತರಾದ ಜ್ಞಾನಿಗಳಿಗೆ ಮಹೇಶ್ವರನು ಪ್ರಸನ್ನನಾಗುವನು. ಶಿವಧರ್ಮವು ಐದು ಬಗೆಯಾಗಿದೆ. ಜಪ, ತಪ, ಕರ್ಮ, ಧ್ಯಾನ, ಜ್ಞಾನಗಳೇ ಈ ಬಗೆಗಳು. ಈ ಶಿವಧರ್ಮದಲ್ಲಿ ಲಿಂಗ ಪೂಜಾದಿಗಳಿಗೆ ಕರ್ಮ ಎಂದು ಹೆಸರು. ಚಾಂದ್ರಾಯಣಾದಿ ವ್ರತಗಳಿಗೆ ತಪ, ಶಿವನ ಜಪ, ಶಿವನ ಧ್ಯಾನ, ಶಿವಾಗಮದ ಜ್ಞಾನ ಇವು ಸಾಧನಗಳು (೮ನೆಯ ಅಧ್ಯಾಯ, ೩೦ ರಿಂದ ೩೯ ಶ್ಲೋಕಗಳು). ಈ ವಾಯುವೀಯ ಸಂಹಿತೆಯಲ್ಲಿ ಹೇಳಿದ ಪಾಶುಪತ ಧರ್ಮಕ್ಕೂ, ವರ್ಣಾಶ್ರಮ ಧರ್ಮಕ್ಕೂ ಅಂತರವಾದದ್ದು ಭಕ್ತಿಯಾಚಾರ ಮೂಲಕವೆಂದು ಕಂಡುಬರುವುದು. ಉಪಮನ್ಯು ಕೃಷ್ಣನಿಗೆ ಹೇಳುವಾಗ ಅದೇ ಗ್ರಂಥದ ೧೦ ನೆಯ ಅಧ್ಯಾಯದಲ್ಲಿ ವರಾಹಕಲ್ಪದಲ್ಲಿ ಆಗಿಹೋದ ಅನೇಕ ಋಷಿಗಳನ್ನೂ ಯೋಗಾಚಾರ್ಯರನ್ನೂ ಹೇಳಲಾಗಿದೆ. ಪ್ರತ್ಯೇಕ ಯೋಗಾಚಾರ್ಯರ ನಾಲ್ವರು ಶಿಷ್ಯರುಗಳೆಂದು ಅವರ ಹೆಸರುಗಳನ್ನು ಕೊಡಲಾಗಿದೆ. ಅವರಲ್ಲಿ ಅಕ್ಷಪಾದ, ಕಣಾದ, ಉಲೂಕ ಮುಂತಾದ ನ್ಯಾಯ, ವೈಶೇಷಿಕ ದರ್ಶನಗಳ ಪ್ರವರ್ತಕರ ಹೆಸರುಗಳೂ ಇವೆ. ೧೧ ನೆಯ ಅಧ್ಯಾಯದಲ್ಲಿ ಅಲ್ಪಶಕ್ತಿ, ಅಲ್ಪಸತ್ವ, ಅಲ್ಪಬುದ್ಧಿ ಮತ್ತು ಅಶಿಕ್ಷಿತರಾದವರಿಗೆ ಮಹಾದೇವನು ಹೇಗೆ ವಶನಾಗುತ್ತಾನೆಂಬ ಪಾರ್ವತಿಯ ಪ್ರಶ್ನೆಗೆ ಈಶ್ವರನು ಈ ಕೆಳಗಿನಂತೆ ಹೇಳಿದ್ದಾನೆ. "ನನ್ನನ್ನು ವಶ ಮಾಡಿಕೊಳ್ಳಲು ಶ್ರದ್ಧೆಯೊಂದೇ ಉಪಾಯವು. ನಾಲ್ಕೂ ವರ್ಣದವರು ತಮ್ಮ ತಮ್ಮ ವರ್ಣಾಶ್ರಮದಂತೆ ನಡೆದುಕೊಂಡರೆ ಶ್ರದ್ಧೆಯು ಲಭಿಸುತ್ತದೆ. ವೇದಗಳಲ್ಲಿ ಪ್ರಸಿದ್ಧವಿದ್ದ ವರ್ಣಾಶ್ರಮ ಧರ್ಮವನ್ನು ಬ್ರಹ್ಮನು ನನ್ನ ಆಜ್ಞೆಯಿಂದ ಪೂರ್ವದಲ್ಲಿ ಪ್ರಸಿದ್ಧಿಸಿದನು. ಆದರೆ ಆ ಪೈತಾಮಹ ಧರ್ಮವು ಪುಷ್ಕಳ ದ್ರವ್ಯ, ಪುಷ್ಕಳ ಕ್ರಿಯೆಯುಳ್ಳದ್ದಾಗಿ, ಅದರಿಂದ ವಿಶೇಷ ಫಲ ದೊರೆಯುವುದಿಲ್ಲ. ಕ್ಲೇಶದಿಂದ ಕೂಡಿದ್ದಾಗಿದೆ"

ಸ ತು ಪೈತಾಮಹೋ ಧರ್ಮೋ ಬಹುವಿತ್ತಕ್ರಿಯಾನ್ವಿತಃ।
ನಾತ್ಯಂತಫಲಭೂಯಿಷ್ಠಃ ಕ್ಲೇಶಾಯಾಸಸಮನ್ವಿತಃ॥ ॥ ೧೯ ॥
ತೇನ ಧರ್ಮೇಣ ಮಹತಾ ಶ್ರದ್ಧಾಂ ಪ್ರಾಪ್ಯ ಸುದುರ್ಲಭಾಂ।

ವರ್ಣಿನೋ ಮೇ ಪ್ರಪದ್ಯಂತೇ ಮಾಮನನ್ಯಸಮಾಶ್ರಯಾಃ ॥ ೨೦ ॥
**ತೇಷಾಂ ಸುಖೇನ ಮಾರ್ಗೇಣ ಧರ್ಮಕಾಮಾರ್ಥಮುಕ್ತಯೇ ।**
ವರ್ಣಾಶ್ರಮಸಮಾಚಾರೋ ಮಯಾ ಭೂಯಃ
ಪ್ರಕಲ್ಪಿತಃ ॥ ೨೧ ॥

ತಸ್ಮಿನ್ಮುಕ್ತಿಮತಾಮೇವ ಮದೀಯಾನಾಂ ತು ವರ್ಣಿನಾಮ್ ।
ಅಧಿಕಾರೋ ನ ಚಾನ್ಯೇಷಾಮಿತ್ಯಾಜ್ಞಾ ನೈಷ್ಠಿಕೀ ಮಮ ॥ ೨೨ ॥
ಮದಾಜ್ಞಪ್ತೇನ ಮಾರ್ಗೇಣ ವರ್ಣಿನೋ ಮದುಪಾಶ್ರಯಾಃ ।
ಮಲಮಾಯಾದಿಪಾಶೇಭ್ಯೋ ವಿಮುಕ್ತಾ ಮತ್ಪ್ರಸಾದತಃ ॥೨೩॥
**ಪುರಂ ಮದೀಯಮಾಸಾದ್ಯ ಪುನರಾವೃತ್ತಿ** ದುರ್ಲಭಮ್ ।
ಪರಮಂ ಮಮ ಸಾಧರ್ಮ್ಯಂ ಪ್ರಾಪ್ಯ ನಿವೃತ್ತಿ ಮಾಪ್ನುಯುಃ ॥ ೨೪ ॥
**( ೧೧ ನೆಯ ಅಧ್ಯಾಯ, ವಾಯವೀಯ ಸಂಹಿತಾ)**

ಈ ಅವತರಣಿಕೆಯಲ್ಲಿಯ ವಿಚಾರಗಳಿಂದ ವರ್ಣಾಶ್ರಮ ಧರ್ಮವು ವೇದಗಳಲ್ಲಿ ಪೂರ್ವದಿಂದ ಇದ್ದುದಾಗಿಯೂ, ಪಾಶುಪತ ಭಕ್ತಿಯ ಮಾರ್ಗವು ಅನಂತರದ್ದೆಂದೂ, ವರ್ಣಾಶ್ರಮ ಧರ್ಮಕ್ಕೆ ಸಮಾನವಾದ ಶ್ರದ್ಧೆಯ ಅಥವಾ ಭಕ್ತಿಯಾಚಾರವು ಆ ಪೂರ್ವದ ವರ್ಣಾಶ್ರಮ ಧರ್ಮಕ್ಕಿಂತ ಮಿಗಿಲಾದದ್ದೆಂದೂ ಹೇಳಿರುವುದರಿಂದಲೂ, ಅಥರ್ವಣವೇದ ಪರಂಪರೆಯಿಂದಲೂ, ಕಣಾದ, ಅಕ್ಷಪಾದರ ಪರಂಪರೆಯಿಂದಲೂ, ಈ ಪಾಶುಪತ ಯೋಗವು ಭಕ್ತಿಗೆ ಮಹತ್ವ ಕೊಟ್ಟು ವರ್ಣಾಶ್ರಮಾಚಾರಕ್ಕಿಂತ ಕಿಂಚಿತ್ ಭಿನ್ನವಾದ ಆಚಾರವನ್ನು ಕಲ್ಪಿಸಿಕೊಂಡಿರುವುದು. ಈ ವಾಯವೀಯ ಸಂಹಿತೆಯು ಪುರಾಣದ ಭಾಗವಾದರೂ, ಇದು ಕೂಡ ತಾಂತ್ರಿಕ ವಿಷಯವನ್ನೇ ಪ್ರತಿಪಾದಿಸುತ್ತದೆ. ಯೋಗ ಮತ್ತು ಭಕ್ತಿಗನುಸರಿಸಿ ವರ್ಣಾಶ್ರಮ ಧರ್ಮಕ್ಕಿಂತ ವಿಭಿನ್ನಾಚಾರವನ್ನು ನೈಷ್ಠಿಕರಿಗೆ ಕಲ್ಪಿಸಿದ್ದು ಕಂಡುಬರುವುದು. ಏವಂಚ ಪೂರ್ವದ ಧಾರ್ಮಿಕಾಚಾರದಿಂದ ಅನಂತರ ಸಿಡಿದು ಈ ಪಾಶುಪತಾಚಾರವು ರೂಢಿಗೆ ಬಂದದ್ದೆಂದು ಇದರಿಂದ ವ್ಯಕ್ತವಾಗುತ್ತದೆ. ಈ ಭಕ್ತಿಪಂಥದಲ್ಲಿ—

ನ ಮೇ ಪ್ರಿಯಶ್ಚತುರ್ವೇದೀ ಮದ್ಭಕ್ತಃ ಶ್ವಪಚೋಽಪಿ ಪ್ರಿಯಃ ।
ತಸ್ಮೈ ದೇಯಂ ತತೋ ಗ್ರಾಹ್ಯಂ ಸ ಪೂಜ್ಯೋ ಯಥಾಹ್ಯಹಂ॥೨೧॥
**(ಅದೇ ಗ್ರಂಥ)**

"ಜ್ಞಾನ, ಕ್ರಿಯಾ, ಚರ್ಯಾ, ಯೋಗ ಈ ನಾಲ್ಕು ಪಾದಗಳುಳ್ಳ ನನ್ನ ಧರ್ಮದಲ್ಲಿ ಪಶು, ಪಾಶ, ಪಶುಪತಿಯ ಜ್ಞಾನವೇ ಜ್ಞಾನವೆನಿಸಿಕೊಳ್ಳುವುದು. ಗುರುವಿನಿಂದ ಷಡಧ್ವಕ್ರಿಯೆ ಮಾಡಿಸಿಕೊಳ್ಳುವುದೇ ಕ್ರಿಯಾ, ನಾನು ಹೇಳಿದ ವರ್ಣಾಶ್ರಮಾಚರಣ, ನನ್ನ ಪೂಜೆಗೇನೆ ಚರ್ಯಾ, ನಾನು ಹೇಳಿದ ಮಾರ್ಗದಿಂದ ನನ್ನಲ್ಲಿ ಮನಸ್ಸನ್ನಿಟ್ಟು, ಎಲ್ಲ ವ್ಯಾಪಾರವನ್ನು ಬಿಟ್ಟು ಆಚರಿಸುವುದೇ ಯೋಗವು. ಈ ಯೋಗವನ್ನು ಬಲ್ಲವನು ಪತಿತನಾದಾಗ್ಯೂಮುಕ್ತಿಯನ್ನು ಹೊಂದುತ್ತಾನೆ. ಪ್ರಥಮದಲ್ಲಿ ಕರ್ಮಯಜ್ಞ ಎಂದರೆ ಹೊರಗಣ ಪೂಜೆ ಮಾಡಿ, ಅನಂತರ ಜ್ಞಾನಯೋಗದಲ್ಲಿ ರತನಾಗಬೇಕು. ಇದೇ ಅಂತರ್ಯಜ್ಞವು. ನನ್ನ ಪೂಜೆಯೇ ಕರ್ಮ ಎನಿಸಿಕೊಳ್ಳುವುದು. ಯಜ್ಞಯಾಗಾದಿಗಳಲ್ಲಿ ಅನ್ಯದೇವತೆಗಳನ್ನು ಭಜಿಸಲಾಗದು. ಇಂಥ ಮಹಾತ್ಮರ ಎಂಟು ಲಕ್ಷಣಗಳುಂಟು. ನನ್ನ ಭಕ್ತರಲ್ಲಿ ವಾತ್ಸಲ್ಯ, ನನ್ನ ಪೂಜೆಗೆ ಅನುಮೋದಿಸುವುದು, ಸ್ವತಃ ಪೂಜಿಸುವುದು, ನನ್ನ ಸಲುವಾಗಿ ಅಂಗಚೇಷ್ಟೆಗಳನ್ನೂ, ನರ್ತನವನ್ನೂ ಮಾಡುವುದು, ಭಕ್ತಿಯಿಂದ ನನ್ನ ಕಥೆಯನ್ನು ಕೇಳುವುದು, ನನ್ನ ಸಲುವಾಗಿ ನೇತ್ರ ಮುಂತಾದ ಅಂಗಗಳನ್ನು ಉಪಯೋಗಿಸುವುದು, ನನ್ನ ಸ್ಮರಣೆ, ನನ್ನ ಸಲುವಾಗಿ ಉಪಜೀವಿಸುವುದು. ಈ ಎಂಟು ಲಕ್ಷಣಗಳು ಮ್ಲೇಛನಲ್ಲಿದ್ದರೂ ಅವನು ಬ್ರಾಹ್ಮಣ ಶ್ರೇಷ್ಠ, ಮುನಿ, ಶ್ರೀಮಾನ್, ಯತಿ, ಪಂಡಿತನೆಂದು ಕರೆಯಿಸಿಕೊಳ್ಳುವನು. ಚತುರ್ವೇದಗಳಲ್ಲಿ ವಿದ್ವಾಂಸನಾದಾಗ್ಯೂ ನನ್ನ ಭಕ್ತನಿಲ್ಲದಿದ್ದರೆ ಅವನು ನನಗೆ ಸೇರುವುದಿಲ್ಲ. ಇದಲ್ಲದೆ ಶಿವನಿಂದಕನ ಪ್ರಾಣವನ್ನು ತೆಗೆದುಬಿಟ್ಟರೆ ಪುನಃ ಜನ್ಮಕ್ಕೆ ಬರುವುದಿಲ್ಲ. ಶಿವನಿಂದಕನ ಪ್ರಾಣ ತೆಗೆಯಲು ಅಸಮರ್ಥನಾಗಿದ್ದರೆ, ತನ್ನ ಪ್ರಾಣವನ್ನು ಬಿಟ್ಟವನು ೨೧ ಕುಲ ಸಹ ಮುಕ್ತನಾಗುವನು. ಈ ಎಲ್ಲ ವಿಚಾರಗಳು ಶೈವ ಭಕ್ತಿಯಲ್ಲಿ ಬೆಳೆದುಬಂದದ್ದು ವಾಯವೀಯ ಸಂಹಿತೆಯಿಂದ ತಿಳಿದುಬರುತ್ತದೆ. ಭಕ್ತಿ ಪಂಥದ ಅತಿರೇಕವಿದು

## ಲಿಂಗಪ್ರಕರಣ

''ಶಿವೋ ವಾ ಪ್ರಣವೋಹ್ಯೇಷ ಪ್ರಣವೋ ವಾ ಶಿವಃ ಸ್ಮೃತಃ ।
ವಾಚ್ಯವಾಚಕಯೋರ್ಭೇದೋ ನಾತ್ಯಂತೇ ವಿದ್ಯತೇ ಯತಃ ॥

(ವಾ. ಸಂ. ಅ. ೨೭—ಶ್ಲೋಕ ೮೪)

ಆದುದರಿಂದ ಓಂಕಾರವು ಶಿವವಾಚಕವು.

" ಚಿಂತಯಾ ರಹಿತೋ ರುದ್ರೋ ವಾಚೋಽಯಂ ಮನಸಾ ಸಹ ।
ಅಪ್ರಾಪ್ಯ ಚ ನಿವರ್ತಂತೇ ವಾಚಸ್ತ್ವೇಕಾಕ್ಷರೇಣ ಸಹ ॥

(ನಾ. ಸಂ. ಅ. ೩೭-೪೭)

ಚಿಂತಾರಹಿತನಾದ ರುದ್ರನು ಅವನೇ. ಮನಸಾ ಸಹ ವಾಣಿಯು ತಿರುಗಿ ಬರುವುದು. ಏಕಾಕ್ಷರನು ಅವನೆ, ಶಿವನು.

" ಅವ್ಯಕ್ತಂ ಲಿಂಗಮಾಖ್ಯಾತಂ ತ್ರಿಗುಣ ಪ್ರಭಾವಾಪ್ಯವ್ಯಯಮ್ ।
ಅನಾದ್ಯನಂತಶ್ಚ ವಿಶ್ವಸ್ಯ ಯದುಪಾದಾನಕಾರಣಮ್ ॥ ೭ ॥
ತದೇವ ಮೂಲಪ್ರಕೃತಿರ್ಮಾಯಾ ಗಗನಾತ್ಮಿಕಾ ।
ತತ ಏವ ಸಮುತ್ಪನ್ನಂ ಜಗದೇತಚ್ಚರಾಚರಮ್ ॥ ೮ ॥

(ವಾ. ಸಂ.)

ಜಗತ್ತಿನ ಉತ್ಪತ್ತಿಗೆ ಉಪಾದಾನ ಕಾರಣವಾದ, ತ್ರಿಗುಣೋತ್ಪತ್ತಿ, ಮತ್ತು ನಾಶಕ್ಕೆ ಕಾರಣವಾದ ಅವ್ಯಕ್ತಕ್ಕೆ **ಲಿಂಗ**ವೆಂದು ಹೆಸರು.

" ಅತ ಏವ ಶಿವೋ ಲಿಂಗೀ ಲಿಂಗಮಾಜ್ಞಾಪಯೇದ್ಯತಃ " (೧೦) ಲಿಂಗಕ್ಕೆ ಶಿವನು ಆಜ್ಞಾಪಿಸುತ್ತಾನೆ. ಆದುದರಿಂದ ಶಿವನು ಲಿಂಗಿ ಎನಿಸಿಕೊಳ್ಳುವನು.

" ಲಿಂಗಂ ಚ ಶಿವಯೋರ್ದೇಹಸ್ತಾಭ್ಯಾಂ ಯಸ್ಮಾದ
ಧಿಷ್ಠಿತಮ್ " ॥ ೧೨ ॥

(ವಾ. ಸಂ.)

ಲಿಂಗವೆಂದರೆ ಶಿವ-ಪಾರ್ವತಿಯ ದೇಹವು. ಆದುದರಿಂದ ಲಿಂಗದಲ್ಲಿ ಶಿವನ ಅಧಿಷ್ಠಾನವಿದೆ. ಲಿಂಗದ ವೇದಿಯು ಪಾರ್ವತಿಯು, ಲಿಂಗ ಸಾಕ್ಷಾತ್ ಮಹೇಶ್ವರನು. ಲಿಂಗವೇದಿಯ ಪೂಜೆ ಶಿವಪಾರ್ವತಿಯ ಪೂಜೆ. ಪರಮಾತ್ಮಾ ಶಿವನ ಶ್ರೇಷ್ಠಶಕ್ತಿಯೇ ಲಿಂಗವು. ಶಕ್ತಿಯೆಂದರೆ ಆಜ್ಞಾ. ಈಯಾಜ್ಞೆಯಿಂದ ಲಿಂಗವು ಈ ಚರಾಚರ ಜಗತ್ತನ್ನು ಪ್ರಸವಿಸುತ್ತದೆ. ಮುಂದೆ ಇದೇ ವಾಯುವೀಯ ಸಂಹಿತೆಯಲ್ಲಿ ಪಂಚಮುಖ ಲಿಂಗದ ವರ್ಣನೆ ಇದೆ.

**ಮಹಾಭಾರತದಲ್ಲಿ** " ಪ್ರಾಣಿಗಳ ಪದ್ಮವಾಗಲಿ, ಚಕ್ರವಾಗಲಿ, ವಜ್ರಾಯುಧವಾಗಲಿ, ಇವು ಯಾವುವನ್ನೂ ಪ್ರಜೆಗಳು ತಮಗೆ ಲಿಂಗ

ವನ್ನಾಗಿ ಪಡೆದು ಹುಟ್ಟಿಲ್ಲ. ಪುರುಷರಿಗೂ, ಸ್ತ್ರೀಯರಿಗೂ, ಲಿಂಗವೂ ಭಗವೂ ಇವೆರಡೇ ಚಿಹ್ನಗಳಾಗಿವೆ. ಇದರಿಂದಲೇ ಲೋಕದ ಪ್ರಜೆಗಳೆಲ್ಲ ಆ ಮಹೇಶ್ವರನಿಂದ ಆದವೆಂದು ದೃಢೀಕರಿಸುತ್ತದೆ. ಸ್ತ್ರೀಯರೆಲ್ಲರೂ ಆ ಉಮಾದೇವಿಯ ಕಾರಣರೂಪದಿಂದ ಸೃಷ್ಟಿಸಲ್ಪಟ್ಟು, ಭಗಚಿಹ್ನವುಳ್ಳವರಾಗಿರುವರು. ಪುರುಷರೆಲ್ಲರೂ ಲಿಂಗದ ಗುರುತುಳ್ಳವರಾಗಿರುವರು. ಇದು ಎಲ್ಲರಿಗೂ ಪ್ರತ್ಯಕ್ಷವಾದುದು. ಈ ಕಾರಣದಿಂದ ಚರಾಚರ ಪ್ರಪಂಚದಲ್ಲಿ ಈಶ್ವರನನ್ನು ಬಿಟ್ಟು ಬೇರೆ ಕಾರಣ ವಸ್ತು ಉಂಟೆಂದಾಗಲಿ, ದೇವಿಯ ಚಿಹ್ನವಿಲ್ಲೆಂದಾಗಲಿ ಭಾವಿಸತಕ್ಕವನು ನಾಸ್ತಿಕನೆ. ಓ ದೇವೇಂದ್ರಾ, ಪುಲ್ಲಿಂಗವೆಲ್ಲ ಶಿವನೆಂದೂ, ಸ್ತ್ರೀಲಿಂಗವೆಲ್ಲ ಉಮಾದೇವಿಯೆಂದೂ ತಿಳಿಯಬೇಕು. ಚರಾಚರ ಪ್ರಪಂಚವೆಲ್ಲ ಈ ಎರಡು ಶರೀರಗಳಿಂದಲೇ ವ್ಯಾಪ್ತವಾಗಿರುವುದು. (ಮಹಾಭಾರತ, ಅನುಶಾಸನಪರ್ವ, ಅಧ್ಯಾಯ ೪೫೦-ಇಂದ್ರ ಉಪಮನ್ಯು ಸಂವಾದ) ಇದೇ ಗ್ರಂಥದಲ್ಲಿ "ಸಾಂಖ್ಯಯೋಗ ಸ್ವರೂಪಿ........ಅಥರ್ವ ಸ್ವರೂಪಿ"ಯೆಂದು ಶಿವನನ್ನು ಸ್ತುತಿಸಲಾಗಿದೆ.

**ಲಿಂಗಶಬ್ದದ ದಾರ್ಶನಿಕಾರ್ಥ** (ಅ) ಪಾತಂಜಲಯೋಗ (ಪಾದ ೧, ಸೂತ್ರ ೪೫)ದಲ್ಲಿ ಲಿಂಗಶಬ್ದದ ಪ್ರಯೋಗವಿದೆ. "ಸೂಕ್ಷ್ಮವಿಷಯತ್ವಂ ಚಾಲಿಂಗಪರ್ಯವಸಾನಮ್"ಎಂಬ ಸೂತ್ರ. ಅಂದರೆ ಪೃಥ್ವಿಯ ಪರಮಾಣುಗಳ ಸೂಕ್ಷ್ಮ ವಿಷಯವು ಗಂಧ ತನ್ಮಾತ್ರೆಯು. ಅದರಂತೆ ಜಲದ ಪರಮಾಣುಗಳ ಸೂಕ್ಷ್ಮ ವಿಷಯವು ರಸವು. ವಾಯುವಿನ ಪರಮಾಣುಗಳ ಸೂಕ್ಷ್ಮ ವಿಷಯವು ಸ್ಪರ್ಶತನ್ಮಾತ್ರೆಯು. ಆಕಾಶದ ತನ್ಮಾತ್ರೆ ಶಬ್ದವು ಸೂಕ್ಷ್ಮ ವಿಷಯವು. ಇವುಗಳಿಗಿಂತ ಸೂಕ್ಷ್ಮವಾದದ್ದು ಅಹಂಕಾರವು ಅಹಂಕಾರಕ್ಕಿಂತ ಸೂಕ್ಷ್ಮವಾದದ್ದು ಮಹತ್ತತ್ವ (ಲಿಂಗ)ವು ಮಹತ್ತತ್ವಕ್ಕಿಂತ ಸೂಕ್ಷ್ಮವು **ಅಲಿಂಗ**ವು (ಪ್ರಕೃತಿ ಅಥವಾ ಪ್ರಧಾನ). ಪ್ರಧಾನಕ್ಕಿಂತ ಸೂಕ್ಷ್ಮವಿಲ್ಲ. ಪುರುಷನು ಅಥವಾ ಆತ್ಮನು ಪ್ರಧಾನಕ್ಕಿಂತ ಸೂಕ್ಷ್ಮವಾಗಲಾರನು. ಯಾಕಂದರೆ ಪ್ರಧಾನವೇ ಮಹತ್ತತ್ವ ಮುಂತಾದವುಗಳಲ್ಲಿ ಪರಿಣಾಮಗೊಳ್ಳುತ್ತದೆ. ಪ್ರಧಾನವೇ ಸೃಷ್ಟಿಯ ಆದಿಯು, ಮತ್ತು ಸೂಕ್ಷ್ಮ ಉಪಾದಾನ ಕಾರಣವು,—ಪುರುಷನಲ್ಲ. ಒಟ್ಟಾರೆ, ಈ ದರ್ಶನದಲ್ಲಿ ಪ್ರಧಾನಕ್ಕೆ **ಅಲಿಂಗ**ವೆಂದೂ ಮಹತ್ತತ್ವ ಮುಂತಾದ ಸೂಕ್ಷ್ಮ ವಸ್ತುಗಳಿಗೆ **ಲಿಂಗ**ವೆಂದೂ ಹೇಳಲಾಗಿದೆ. ಆತ್ಮಕ್ಕೆ ಲಿಂಗವೆಂದಿಲ್ಲ

(ಬ) ಮಾಧ್ವಭಾಷ್ಯದಲ್ಲಿ "ಸರ್ವಗತತ್ವಾಧಿಕರಣ"ದ ಭಾಷ್ಯದಲ್ಲಿ 'ಲಿಂಗಾತ್ಮಕಾನಾಮ್ ಶಬ್ದಾನಾಮ್' ಎಂಬುದಕ್ಕೆ 'ಧರ್ಮವಿಶಿಷ್ಟ

ಧರ್ಮಿವಾಚಿನಾಮ್ ಇತ್ಯರ್ಥಃ ' — ಅಂದರೆ ಧರ್ಮವಿಶಿಷ್ಟ ಧರ್ಮಿ ವಾಚಕ ಶಬ್ದ.

(ಕ) ಮೀಮಾಂಸಕರು ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ ಇವುಗಳ ತಾತ್ಪರ್ಯ ನಿರ್ಣಯದ ಜ್ಞಾಪಕ ಹೇತುವಿಗೆ ಲಿಂಗವೆನ್ನುವರು. ' ಅಸಾಧಾರಣಧರ್ಮೋ ಲಿಂಗಮ್. '

(ಡ) ಸಾಂಖ್ಯಕಾರಿಕೆಯಲ್ಲಿ ವ್ಯಕ್ತಾವ್ಯಕ್ತಗಳನ್ನು ಹೇಳುವಾಗ, **ಲಿಂಗವು** ವ್ಯಕ್ತದ ಲಕ್ಷಣ. ಎಲ್ಲ ಗುಣಗಳಿಂದ ವಿಪರೀತವಾದದ್ದು ಅವ್ಯಕ್ತ ತತ್ವವು. ಪ್ರಕೃತಿಪುರುಷರ ಸಂಯೋಗದಿಂದ ಮಹತ್ತತ್ವಾದಿ **ಲಿಂಗವು** ಚೇತನವಿದ್ದಂತೆ ಕಾಣುತ್ತದೆ. ಅಂದರೆ ಮಹತ್ತತ್ವದಿಂದ ಸೂಕ್ಷ್ಮದವರೆಗೆ ಇರುವ ಕಾರ್ಯ ಸಮುದಾಯಕ್ಕೆ **ಲಿಂಗ**ವೆನ್ನಲಾಗಿದೆ, ಈ ದರ್ಶನದಲ್ಲಿ.

ಒಟ್ಟಾಗಿ ಲಿಂಗವೆಂದರೆ ಚಿಹ್ನ, ಲಕ್ಷಣ, ಅಸಾಧಾರಣ ಧರ್ಮ, ಜ್ಞಾಪಕಹೇತು ಮುಂತಾದ ಅರ್ಥಗಳಲ್ಲಿ ಉಪಯೋಗಿಸಿದಾಗ್ಯೂ ಮೂಲಾರ್ಥ ಚಿಹ್ನವೆಂದೇ ಕಾಣುವುದು.

(ಫ) ಮನುಸ್ಮೃತಿಯಲ್ಲಿ ಸಂನ್ಯಾಸ ಧರ್ಮವನ್ನು ಹೇಳುವಾಗ —
ದೂಷಿತೋಽಪಿ ಚರೇದ್ಧರ್ಮಂ ಯತ್ರ ತತ್ರಾಶ್ರಮೇ ರತಃ।
ಸಮಃ ಸರ್ವೇಷು ಭೂತೇಷು ನ ಲಿಂಗಂ ಧರ್ಮಕಾರಣಮ್ ॥
**(ಅಧ್ಯಾಯ ೬. ಶ್ಲೋಕ ೬೬)**

ಯಾವ ಆಶ್ರಮದಲ್ಲಿದ್ದರೂ, ಆಶ್ರಮವಿರುದ್ಧವಾದ ಕರ್ಮ ಮಾಡಿ ದೂಷಿತರಾದಾಗ್ಯೂ, ಎಲ್ಲ ಪ್ರಾಣಿಗಳ ವಿಷಯದಲ್ಲಿ ಸಮದರ್ಶಿಯಾಗಿ ಧರ್ಮವನ್ನು ಆಚರಿಸಬೇಕು. ಇಲ್ಲಿ ಲಿಂಗವೆಂದರೆ ಆಶ್ರಮೋಚಿತವಾದ ದಂಡಾದಿ ಚಿಹ್ನಗಳೆಂದೇ ಅರ್ಥವು. ಇದೇ ಅರ್ಥದಲ್ಲಿ ದಂಡಕಮಂಡಲಾದಿಗಳನ್ನು ಧಾರಣ ಮಾಡಿದ ಸಂನ್ಯಾಸಿಗಳಿಗೆ "ಲಿಂಗಿನಃ" ಎಂದು ಮಹಾಭಾರತದಲ್ಲೂ, ಪಾಶುಪತ, ಶೈವ, ಲಾಕುಳಾದಿ ಯತಿಮುನಿಗಳಿಗೂ ಪ್ರಯೋಗವಾಗಿದೆ. ಲಿಂಗಿನಃ ಎಂದರೆ ನೈಷ್ಠಿಕ ಮುನಿ ಮುಂತಾದವರು ಪಾಶುಪತ ಸೂತ್ರಗಳ ಪ್ರಥಮಾಧ್ಯಾಯದ ೭ನೆಯ

ಸೂತ್ರವು **"ಲಿಂಗಧಾರಿ"** ಎಂದಿದೆ. ಇದೇ ಸೂತ್ರವನ್ನು ಮಾಧವಾಚಾರ್ಯರು ತಮ್ಮ "ಸರ್ವದರ್ಶನ ಸಂಗ್ರಹ"ದಲ್ಲಿ ಉದ್ಧೃತ ಮಾಡಿರುವರು. ಪಾಶುಪತರಿಗೆ "ಲಿಂಗಧಾರಿ" ಎಂದುದನ್ನನುಲಕ್ಷಿಸಿ, ಪಾಶುಪತರಲ್ಲಿ, ಈಗಿನ ಲಿಂಗಾಯತರಲ್ಲಿದ್ದಂತೆ, ಲಿಂಗಧಾರಣೆಯಿದ್ದಿತೆಂದು ಕೆಲ ಆಧುನಿಕರು ಅರ್ಥಮಾಡಿಕೊಂಡಿರುವರು. ಆದರೆ ಇದು ಸರಿಯಲ್ಲ. ಮೂಲ ಪಾಶುಪತ ಸೂತ್ರದ ಕೌಂಡಿನ್ಯ ಭಾಷ್ಯದಲ್ಲಿ "ಭಸ್ಮಸ್ನಾನ, ಶಯನಾನುಷ್ಠಾನ ನಿರ್ಮಾಲ್ಯೈಕವಾದಿನಿಷ್ಪನ್ನಂ, ಸ್ವಶರೀರ ಲೀನಂ. ಪಾಶುಪತಮಿತಿ ಲೌಕಿಕಾದಿ ಜ್ಞಾನಜನಕಂ ತತ್। ಲೀಯನಾಲ್ಲಿಂಗನಾಚ್ಚ ಲಿಂಗಮ್। ತದ್ ಧಾರಯನ್ ಲಿಂಗಧಾರಿ ಭವತಿ। ದಂಡಧಾರಿವದಿತ್ಯರ್ಥಃ।" ಮನುಸ್ಮೃತಿಯಲ್ಲಿರುವ ಅರ್ಥವೆ ಇಲ್ಲೂ ಇದೆ. ಪಾಶುಪತ ಯೋಗಚಿಹ್ನ ಉಳ್ಳವನೇ **ಲಿಂಗಧಾರಿಯು** ಇಂಥವರೇ "ಲಿಂಗಿಗಳು" ಎಂದು ಕನ್ನಡ ಶಾಸನಗಳಲ್ಲಿ ಕಾಳಾಮುಖರು ಉಕ್ತರಾಗಿರುವರು. ಗೃಹಸ್ಥ, ಬ್ರಹ್ಮಚಾರಿ, ವಾನಪ್ರಸ್ಥ, ಸಂನ್ಯಾಸಾಶ್ರಮಗಳಿಗೆ ಬೇರೆ ಬೇರೆ ಚಿಹ್ನಗಳಿರುವಂತೆ ಪಾಶುಪತ ಯೋಗಿಗಳ ವಿಶಿಷ್ಟ ಸಾಂಪ್ರದಾಯಿಕ ಲಕ್ಷಣಗಳುಳ್ಳವರೇ ಲಿಂಗಿಗಳೆಂದರ್ಥವು.

(ಚ) ಸ್ವಚ್ಛಂದ ತಂತ್ರದಲ್ಲಿ---

ಯ ಏವಂ ಸತತಂ ಕುರ್ಯಾದ್ದೈಶಿಕೇ ಯಾಗತತ್ಪರಃ।
ಸ್ವಹಸ್ತೇ ಸ್ಥಂಡಿಲೇ ಲಿಂಗೇ ಮಂಡಲೇ ಚರುಕೇ ತಥಾ॥

(ಪಟಲ ೩, ಶ್ಲೋಕ ೩೧)

ಈ ಶ್ಲೋಕಕ್ಕೆ ಕ್ಷೇಮರಾಜನು ಅರ್ಥ ಮಾಡುವಾಗ 'ದೈಶಿಕ' ಶಬ್ದಕ್ಕೆ 'ಉಪದೇಶ ಪ್ರಯೋಜನ ಆಚಾರ್ಯಃ' ಎಂದೂ, "ಲಿಂಗಶಬ್ದೇನ ವಿದ್ವಾಂಸಃ ಸೃಷ್ಟಿ ಸಂಹಾರ ಕಾರಣಂ ಇತ್ಯಾದಿ ನಿರುಕ್ತೇಃ" ಎಂದು ನಿರುಕ್ತದ ಆಧಾರ ಕೊಟ್ಟು, "ಪ್ರಸ್ತಾವೋಚಿತ ಶಿಷ್ಯ ಚೈತನ್ಯೇ ಬಾಹ್ಯೇಽಪಿ ವಾ ಬಾಣಾದಿರೂಪೇ ಭಾಕ್ತೇ" ಎಂದೂ ಎಂದಿರುವನು. ಶಿಷ್ಯ ಚೈತನ್ಯ ಅಥವಾ ಬಾಣಾದಿ ರೂಪಕ್ಕೆ ಲಿಂಗವೆಂದಿರುವುದು ಮಹತ್ವದ್ದಾಗಿದೆ. ಲಿಂಗ ಶಬ್ದದ ಈ ಅರ್ಥವು ವೀರಶೈವರಲ್ಲಿ ಬಳಸಲಾಗಿದೆ ಎನ್ನಬಹುದು

(ಟ) ಹಠಯೋಗ ಪ್ರದೀಪಿಕೆಯಲ್ಲಿ--

ದಿವಾ ನ ಪೂಜಯೇಲ್ಲಿಂಗಂ ರಾತ್ರೌ ಚೈವ ನ ಪೂಜಯೇತ್।
ಸರ್ವದಾ ಪೂಜಯೇಲ್ಲಿಂಗಂ ದಿವಾರಾತ್ರಿ ನಿರೋಧತಃ॥

ಇಲ್ಲಿ ಲಿಂಗವೆಂದರೆ 'ಸರ್ವಕಾರಣಮಾತ್ಮಾನಂ' ಎಂದು ವ್ಯಾಖ್ಯಾನ ಮಾಡಲಾಗಿದೆ. ಸೂರ್ಯ, ಚಂದ್ರನಾಡಿಗಳನ್ನು ನಿರೋಧ- ಗೈದು ಪ್ರಾಣವು ಸುಷುಮ್ನಾಂತರ್ಗತವಾದಾಗ, ಪೂಜಯೇತ್ ಅಂದರೆ ಭಾವಯೇತ್ ಎನ್ನಲಾಗಿದೆ. ಕುಂಡಲಿನೀಯೋಗದಲ್ಲಿಯ ಅರ್ಥವಿದು. ಈ ಶ್ಲೋಕವು ಚೆನ್ನಬಸವಣ್ಣನವರ ವಚನದಲ್ಲಿ ಇದ್ದಕ್ಕಿದ್ದಂತೆ ಉದ್ಧೃತ ವಾದದ್ದು ಬಹಳೇ ಮಹತ್ವದ ಸಂಗತಿಯಾಗಿದೆ. ಸ್ವಚ್ಛಂದತಂತ್ರ, ಹಠಯೋಗ ಪ್ರದೀಪಿಕೆಯಲ್ಲಿಯ ಲಿಂಗಶಬ್ದಾರ್ಥಕ್ಕೂ, ವೀರಶೈವರಲ್ಲಿಯ ಅರ್ಥಕ್ಕೂ ಸರಿಯಾಗಿ ಹೊಂದಿಕೆಯಾಗುತ್ತದೆ. ಕಾಶ್ಮೀರ ಶೈವರಲ್ಲಿ ವೈದಿಕರು, ಆಗಮಿಕರು, ಯೋಗಮಾರ್ಗಾವಲಂಬಿಗಳು, ಎಂದು ಆಚಾರ ಮಾರ್ಗಕ್ಕನುಸಾರವಾಗಿ ಮೂರು ಪ್ರಭೇದಗಳುಂಟು. ಯೋಗ ಮಾರ್ಗದ ಪ್ರಭಾವವು ಕನ್ನಡ ವಚನಕಾರರ ಮೇಲೆ ಇದ್ದುದು ಕಂಡು ಬರುತ್ತದೆ.

## ಶೈವಧರ್ಮದ ಉತ್ಕರ್ಷಾಪಕರ್ಷ

ರಾಜಕೀಯ ದೃಷ್ಟಿಯಿಂದ ಶೈವಧರ್ಮದ ಉತ್ಕರ್ಷವು ಉತ್ತರ ಹಿಂದುಸ್ತಾನದಲ್ಲಿ ಭಾರಶಿವರ ಕಾಲದಿಂದ ಹೆಚ್ಚಳವನ್ನು ಪಡೆದಿದೆ. ಭಾರಶಿವರು ತಮ್ಮ ಸಾಮ್ರಾಜ್ಯದ ಅಧಿಷ್ಠಾನ ದೇವತೆಯೆಂದು ಶಿವನನ್ನೇ ಮುಖ್ಯವಾಗಿ ಅವಲಂಬಿಸಿರುವರು. ಇವರು ನಾಗವಂಶೀಯರು ಹತ್ತು ಅಶ್ವಮೇಧಗಳನ್ನು ಮಾಡಿದರು. ವಾರಣಾಸಿಯಲ್ಲಿ ಪರಕೀಯರಾದ ಕುಷಾಣರಿಂದ ಖಿಲವಾಗಿದ್ದ ಹಿಂದು ಸಂಸ್ಕೃತಿಯನ್ನು ಪುನರುದ್ಧಾರ ಮಾಡಿದರು. ಇವರಿಂದ ಹೊಸ ಪರಂಪರೆಯು ಪ್ರಾರಂಭವಾಯಿತು ಇವರ ಪ್ರಶಸ್ತಿಯು —

> "ಅಂಶಭಾರಸಂನಿವೇಶಿತ ಶಿವಲಿಂಗೋದ್ವಾಹನ ಶಿವಸುಪ್ರತಿಷ್ಠ ಸಮುತ್ಪಾದಿತ ರಾಜ್ಯವಂಶಾನಾಮ್ ಪರಾಕ್ರಮಾಧಿಗತ ಭಾಗೀ- ರಥ್ಯಮಲಜಲ ಮೂರ್ಧಾಭಿಷಿಕ್ತಾನಾಮ್ ದಶಾಶ್ವಮೇಧಾವಭೃತ ಸ್ನಾನಾನಾಮ್ ಭಾರಶಿವಾನಾಮ್."

ಇವರ ರಾಜಧಾನಿ ವಿದೇಶ. ವಾಯು ಪುರಾಣದಲ್ಲಿ ವೈದೇಶ-ನಾಗ- ರೆಂದು ಬಂದಿದೆ. ಇವರ ಹೆಸರಿನ ಕೊನೆಯಲ್ಲಿ ವೃಷ, ನಂದಿ ಎಂದು

ಬರುತ್ತದೆ. ಇವರ ನಾಣ್ಯಗಳ ಮೇಲೆ ವೃಷ, ನಂದಿ, ಶೇಷ, ತ್ರಿಶೂಲ ಗಳು ಪ್ರಾಮುಖ್ಯವಾಗಿವೆ. ಭೂತನಂದಿಯು ಪದ್ಮಾವತಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿದನು; ಅಲ್ಲಿ ಸ್ವರ್ಣಬಿಂದು ಎಂಬ ಪ್ರಸಿದ್ಧ ಶಿವಲಿಂಗವನ್ನು ಪ್ರತಿಷ್ಠಿಸಿದನು. (ಕಾಲ ಕಿ. ಪೂರ್ವ, ೨೦–೧೦). ನಂದಿಯ ಮುಖವುಳ್ಳ ಮನುಷ್ಯಾಕಾರದ ಪ್ರತಿಮೆಯೊಂದು ದೊರೆತಿದೆ. ಈ ನಾಗವಂಶೀಯ ಅರಸರು ಸುಮಾರು ಕ್ರಿ. ಪೂ. ೧೧೦ ರಿಂದ ಕ್ರಿ. ಶಕ ೭೮ ರ ವರೆಗೆ ಆಳಿದರು. ಪದ್ಮಾವತಿ ಮತ್ತು ಮಗಧ ದೇಶದಲ್ಲಿ ಕುಷಾಣರು ಕ್ರಿ. ಶ. ೭೦ ರಿಂದ ಕ್ರಿ. ಶ. ೧೮೦ ರ ವರೆಗೆ ಆಳಿದರು. ಕಾಶ್ಮೀರದಲ್ಲೂ ಕುಷಾಣರು ಆಳಿದ್ದು ನಮಗೆ ತಿಳಿದುಬರುತ್ತದೆ. ಆ ಕಾಲದಲ್ಲಿ ರೂಢವಾಗಿದ್ದ ಧರ್ಮವನ್ನು ತಳ್ಳಿ ಬೌದ್ಧ ಮತವನ್ನು ಜನರ ಮೇಲೆ ಹೇರತೊಡಗಿದರು, ಈ ಕುಷಾಣರು. ಇದಕ್ಕೆ ಇವರ ಕಾಲದ ಜೈನ, ಬೌದ್ಧರ ಸ್ಮಾರಕ ಕಟ್ಟಡಗಳ ಸಾಕ್ಷ್ಯವು ದೊರೆಯುತ್ತದೆ. ಆದರೆ ಸನಾತನ ಧರ್ಮದ ಗುರುತು, ಭೀಟಾದಲ್ಲಿಯ ಪಂಚಮುಖಲಿಂಗದ ವಿನಾ ಇನ್ನಾವುದೂ ದೊರೆಯುವುದಿಲ್ಲ ಇಲ್ಲಿ ದೊರೆತ ಶಾಸನವು ಕ್ರಿ. ಪೂ. ೨ನೆಯ ಶತಮಾನದ್ದು ಶಿವನು ಭಾರಶಿವರ ಅಧಿದೈವತವು. ವಾಕಾಟಕರ ಕಾಲದಲ್ಲೂ ಶಿವನು ಅಧಿದೈವತನಾಗಿದ್ದನು. ಶಿವ–ರುದ್ರನು ಸಂಹಾರ ಮಾಡುವವನು. ಶಿವನೇ ಅಧಿದೈವತನಾಗಿ ಉಳ್ಳ ಈ ಭಾರಶಿವರು, ಶಿವನ ತಾಂಡವನೃತ್ಯದ ಕಾರ್ಯವನ್ನು ಗಂಗಾತಟಾಕದಲ್ಲಿ ಮುಂದೆ ಸಾಗಿಸಿದರು. ಇವರ ಹೆಸರುಗಳೂ ಈ ಕಾರ್ಯಕ್ಕೆ ತಕ್ಕಂತಿವೆ. ವೀರಸೇನ, ಸ್ಕಂದನಾಗ, ದೇವನಾಗ, ಭವನಾಗ ಮುಂತಾದವುಗಳಾಗಿವೆ ಕುಷಾಣರು ಪರಕೀಯರಾಗಿದ್ದು, ಹಿಂದು ಜನರ ವಿರುದ್ಧವಾಗಿ, ರಾಜಕೀಯ ಧೋರಣೆಗಾಗಿ ಬೌದ್ಧರನ್ನು ಎತ್ತಿ ಹಿಡಿದರು. ಬೌದ್ಧಧರ್ಮವು ಕ್ರೂರರಾದ ಈ ಪರಕೀಯರ ಸಾಕುಮಗುವಾಯಿತು. ಕುಷಾಣರ ರಾಜ್ಯವು ಅಳಿದೊಡನೆ ಬೌದ್ಧ ಧರ್ಮದ ಬೇರುಗಳು ಸಡಿಲಾದವು ಬೌದ್ಧಧರ್ಮದ ಅಳಿಗಾಲಕ್ಕೆ ಇದೇ ಕಾರಣವೆಂದು ಪ್ರಸಿದ್ಧ ಇತಿಹಾಸ ಸಂಶೋಧಕರಾದ ಕೆ. ಪಿ ಜಯಸ್ವಾಲರು ತಮ್ಮ ಗ್ರಂಥದಲ್ಲಿ ಅಭಿಪ್ರಾಯವನ್ನು ವ್ಯಕ್ತಗೊಳಿಸಿರುವರು ಭಾರಶಿವರ ಕಾರ್ಯವನ್ನು ಮುಂದೆ ವಾಕಾಟಕರು ಕೈಕೊಂಡರು. ಇವರ ಸಾಮ್ರಾಜ್ಯಕಾಲವು ಕ್ರಿ ಶ. ೨೪೮–೫೫೮. ಇವರು ಬ್ರಾಹ್ಮಣರು. ಇವರ ನಾಣ್ಯಗಳ ಮೇಲೂ ನಂದಿಯ ಮೇಲೆ ಶಿವನು ಕೂತಿದ್ದ ಚಿತ್ರವಿದೆ. ಇವರೂ ಶಿವನ ಆರಾಧಕರು. ಮಹೇಶ್ವರನಿಗೆ

ರಾಜ್ಯಾರ್ಪಣ ಮಾಡಿದರು ಇವರು. ಈ ನವ ಜಾಗ್ರತಿಯಿಂದ ಕುಷಾಣರ ಸಾಮಾಜಿಕ ಅತ್ಯಾಚಾರಗಳಿಂದ ಹಿಂದುಗಳು ಬಿಡುಗಡೆ ಹೊಂದಿದರು ಮುಂದೆ ಸಮುದ್ರಗುಪ್ತನು ಸಂವರ್ಧನ, ಸಂರಕ್ಷಣ ಕಾರ್ಯವನ್ನು ಕೈಕೊಂಡನು ಸಂರಕ್ಷಣ ಕರ್ತೃವಾದ ವಿಷ್ಣುವನ್ನು ಆರಾಧಿಸತೊಡಗಿದನು (History of India 150-350 A D by K. P. Jayaswal). ಚತುರ್ಮುಖಲಿಂಗ (ನಾಚನಾದಲ್ಲಿ), ಏಕಮುಖಲಿಂಗ ಮುಂತಾಗಿ ಈ ಕಾಲದವುಗಳು ದೊರೆತಿವೆ. ಭೂಮರಾ ದೇವಾಲಯವು ಕ್ರಿ. ಶ ೫ನೇ ಶತಮಾನದ್ದು; ದೊಡ್ಡ ಲಿಂಗವಿದೆ.

ಗುಪ್ತವಂಶದ ಎರಡನೇ ವಿಕ್ರಮಾದಿತ್ಯನ ರಾಜ್ಯಾಡಳಿತದ ೬೧ನೆಯ ಗುಪ್ತಸಂವತ್ ಅಂದರೆ ಕ್ರಿ ಶ ೩೮೦ ನೆಯ ವರ್ಷದ ಶಿಲಾಲೇಖವೊಂದು ಮಥುರೆಯಲ್ಲಿ ದೊರೆತಿದೆ. ಅದರಲ್ಲಿ ಉದಿತಾಚಾರ್ಯನೆಂಬ ಪಾಶುಪತಾಚಾರ್ಯನು, ಗುರುಮಂದಿರದಲ್ಲಿ ಉಪಮಿತೇಶ್ವರ ಮತ್ತು ಕಪಿಲೇಶ್ವರ ನಾಮಕ ಶಿವಲಿಂಗಗಳನ್ನು ಸ್ಥಾಪಿಸಿದ ಸಂಗತಿಯಿದೆ. ಈ ಉದಿತಾಚಾರ್ಯನು ತಾನು " ಭಗವಾನ್ ಕುಶಿಕಾದ್ದಶಮೇನ ... ...." ಎಂದು ಹೇಳಿಕೊಂಡಿರುವನು. ಲಕುಲೀಶನು ಕುಶಿಕನ ಸಾಕ್ಷಾತ್ ಗುರುವು. ತಲೆಯೊಂದಕ್ಕೆ ಸರಾಸರಿ ೨೫ ವರ್ಷಗಳಂತೆ ಲೆಕ್ಕ ಮಾಡಿದರೆ ಲಕುಲೀಶನ ಕಾಲವು ಕ್ರಿ ಶ ೧೩೦ ರ ಸುಮಾರಕ್ಕೆ ಬರುವುದು. ಇದೇ ಕಾಲದಲ್ಲಿ ಕುಷಾಣ ಹುವಿಷ್ಕನ ನಾಣ್ಯಗಳ ಹಿಮ್ಮುಗ್ಗಲಲ್ಲಿದ್ದ ಲಗುಡಧಾರಿ ಶಿವನ ಮೂರ್ತಿಗಳು ಸಿಕ್ಕುತ್ತವೆ. ಇದರಿಂದ ಕುಷಾಣ ಮತ್ತು ಭಾರಶಿವರ ಕಾಲದಲ್ಲೇ ಲಕುಲೀಶನು ಆಗಿರುವನೆಂದು ತಿಳಿದುಬರುವುದು. ಈ ಲಕುಲೀಶನು ಶಿವನ ಅವತಾರವೆಂದು ಮುಂದಿನ ಕಾಲದಲ್ಲಿ ಗ್ರಹಿಸಲಾಗಿದೆ. ಲಕುಲೀಶನ ಕಾಯಾವರೋಹಣದ ಕಥೆಗಳನ್ನು ಹೇಳುವ ಪುರಾಣಗಳೆಲ್ಲವು ಕ್ರಿ ಶ ೨ನೆಯ ಶತಮಾನದ ಅನಂತರದವುಗಳೆಂದು ಇದರಿಂದ ಸ್ಪಷ್ಟವಾಗುತ್ತದೆ. ಲಕುಲೀಶನ ಹೆಸರಿಗೂ ಲಾಕುಳಾಗಮಕ್ಕೂ ಅನ್ಯೋನ್ಯ ಸಂಬಂಧವು ವ್ಯಕ್ತವಾಗುತ್ತದೆ ಈ "ಕುಲ" ಶಬ್ದದಲ್ಲಿ ಶಾಕ್ತರ ಶಕ್ತಿತತ್ವವು ಅಡಕವಾಗಿದೆ. ಶಕ್ತಿಯ ಮೂಲಕ ಶಿವನನ್ನು ಆರಾಧಿಸುವ ಕ್ರಮವು ಲಾಕುಲಾಗಮದಲ್ಲಿ ಇದ್ದಿರಬಹುದು. ಈ ಆಗಮವು ದೊರೆಯದ ವಿನಾ ಅದರ ಸ್ವರೂಪವೇನಿತ್ತೆಂಬುದು ನಿರ್ಣಯವಾಗಲಾರದು.

## ದೇವಾಲಯಗಳ ಪ್ರಾರಂಭ

ಜ್ಞಾನಕ್ಕೆ ಅಗಮ್ಯನಾದ ಸ್ಥೂಲಾಕಾರರಹಿತನಾದ ಪರಮಾತ್ಮನನ್ನು ತಿಳಿದುಕೊಳ್ಳಲಿಕ್ಕೆ ಪ್ರಯತ್ನಿಸಿದಂತೆ, ಸರ್ವವ್ಯಾಪಿಯಾದ ಪರವಸ್ತುವನ್ನು ವಿಶಿಷ್ಟ ಸ್ಥಳದಲ್ಲಿ ಅಡಕವಾದಂತೆ ಸಂಕೋಚಗೊಳಿಸಿ, ಆರಾಧಿಸುವ ಯತ್ನವನ್ನು ಜಗತ್ತಿನ ಎಲ್ಲ ಧರ್ಮದವರು ಮಾಡುತ್ತ ಬಂದಿರುವರು. ಮೊದಮೊದಲು ಸೃಷ್ಟಿಯಲ್ಲಿಯ ವಸ್ತುಗಳೇ ಆರಾಧ್ಯ ವಸ್ತುಗಳಾದವು. ಕಾಲ ಕಳೆದಂತೆ ಜನರ ಮನೋದೃಷ್ಟಿಯಲ್ಲಿ ಬದಲಾವಣೆಯಾದಂತೆ, ಆರಾಧಿಸುವ ರೀತಿ ನೀತಿಗಳಲ್ಲೂ ಬದಲಾವಣೆಯಾಗುತ್ತ ನಡೆಯಿತು. ಪೂರ್ವಕಾಲದಲ್ಲಿ ಬಯಲಲ್ಲಿ ಮಾಡುವ ಪೂಜೆಯು ಬದಲಾಗಿ ಕಟ್ಟಡಗಳಲ್ಲಿ ಸಾಂಕೇತಿಕ ವಸ್ತುಗಳ ಪೂಜೆಗೆ ಆರಂಭವಾಯಿತು. ಈ ಪೂಜೆಯ ಸ್ಥಳಗಳನ್ನು ಜನರು ತಾವು ಇರುವ ಮನೆಗಳಂತೆ ಕಲ್ಪಿಸಿಕೊಂಡರು. ಮುಂದೆ ಸಮ್ರಾಟರಿಗೆ ಶೋಭಿಸುವ ಅರಮನೆಗಳಂತೆ ಉನ್ನತವಾಗಿಯೂ, ಸುಂದರವಾಗಿಯೂ ಕಟ್ಟಿಸತೊಡಗಿದರು. ದೇಗುಲಗಳ ಹುಟ್ಟು ಬೆಳವಣಿಗೆಯ ಅಭ್ಯಾಸವು ಬಲು ಮನೋರಂಜಕವಾಗಿದೆ. ಅದರಲ್ಲೂ ನಮ್ಮ ಭಾರತದಲ್ಲಿಯ ದೇಗುಲಗಳ ಚರಿತ್ರೆಯು ಮನೋವೇಧಕವೂ, ಮಹತ್ವದ್ದೂ ಆಗಿದೆ. ಹಿಂದುಸ್ಥಾನದಲ್ಲಿಯ ದೇವಾಲಯದ ಕಟ್ಟಡಗಳನ್ನು ಮೂರು ವಿಭಾಗಗಳನ್ನಾಗಿ ಮಾಡಲಾಗಿದೆ. ಉತ್ತರ (ಇಂಡೋ-ಆರಿಯನ್), ದಕ್ಷಿಣ ( Deccan ) ಮತ್ತು ತಮಿಳು (Tamilian) ವಾಸ್ತುಶಿಲ್ಪಗಳೆಂದು ಕಟ್ಟಡಗಳ ರೀತಿಗನುಸರಿಸಿ ನಾಮಕರಣ ಮಾಡಲಾಗಿದೆ. ಒಂದರ ಪ್ರಭಾವವು ಇನ್ನೊಂದರ ಮೇಲೆ ಇದ್ದೇ ಇರುವುದು. ಸದ್ಯಕ್ಕೆ ಶಿವಾಲಯಗಳ ಇತಿಹಾಸವನ್ನಷ್ಟೆ ಸಿಂಹಾವಲೋಕನ ಪದ್ಧತಿಯಂತೆ ನೋಡಬೇಕಾಗಿದೆ.

## ಹಿಂದುಸ್ಥಾನದ ಬೇರೆ ಬೇರೆ ಭಾಗಗಳಲ್ಲಿ ಶಿವಾಲಯಗಳು

**ತಮಿಳು ನಾಡು:—** ತಮಿಳು ನಾಡಿನಲ್ಲಿ ಪ್ರಾಚೀನಕಾಲದ ಪದ್ಧತಿಯಂತೆ ಗಿಡ, ದಿಬ್ಬಗಳೇ ಪವಿತ್ರ ಸ್ಥಳಗಳೆಂದು ಗಣಿಸಲ್ಪಟ್ಟು ಆಯಾ ಸ್ಥಾನಗಳಲ್ಲಿ ದೇವರನ್ನು ಪೂಜಿಸುತ್ತಿದ್ದರು. ದೇವಾಲಯಗಳು ಇದ್ದಿರಲಿಲ್ಲ. ಅನಂತರ ಆ ಪವಿತ್ರ ಸ್ಥಳ ಅಥವಾ ಗಿಡಗಳ ಸುತ್ತಮುತ್ತ ಇಟ್ಟಿಗೆ

ಅಥವಾ ಕಟ್ಟಿಗೆಯ ದೇವಮನೆಗಳಾದವು. ದೇವಾಲಯಕ್ಕಾಗಿ ಉಪಯೋಗಿಸುವ ಸಾಧನಗಳು ನಾಶವಾಗುವಂಥವುಗಳಾಗಿದ್ದವು. ಆದುದರಿಂದ ಕ್ರಿ. ಶ. ೭ನೆಯ ಶತಕಕ್ಕಿಂತ ಪೂರ್ವದ ಕಟ್ಟಡಗಳು ಉಳಿದಿಲ್ಲ ಕಲ್ಲಿನಿಂದ ದೇಗುಲಗಳನ್ನು ಕಟ್ಟಿಸಲು ತೊಡಗಿದ ಶ್ರೇಯಸ್ಸು ಪಲ್ಲವರಿಗೆ ಸಲ್ಲುತ್ತದೆ. ಪಲ್ಲವ ಮಹೇಂದ್ರವರ್ಮನು (೬೧೦-೬೪೦) ಗುಡ್ಡಗಳನ್ನು ಕೊರೆದು ದೇವಾಲಯಗಳನ್ನು ಮಾಡಿಸಿದನು. ಅವನು ನಾಶವಾಗುವ ಸಾಧನ ಪದಾರ್ಥಗಳನ್ನು ತ್ಯಜಿಸಿ, ಕಲ್ಲಿನದೇವ-ಮನೆಯನ್ನು ಮಾಡಿಸಿದ ನೆಂದು, ಅವನ ಒಂದು ಶಾಸನದಿಂದ ತಿಳಿದುಬರುತ್ತದೆ. ಮುಂದೆ ವಿಜಯ ನಗರದ ಅಳಿಗಾಲದವರೆಗೆ, ಅಂದರೆ ಸಾವಿರ ವರ್ಷಗಳವರೆಗೆ ಕಟ್ಟಡಗಳ ರೀತಿಯಲ್ಲಿ ಪರಿವರ್ತನೆಯಾಗುತ್ತ ಬಂದಿದೆ. ಪಲ್ಲವರು, ಚೋಳರು ವಿಜಯನಗರದ ಅರಸರ ವಿಶಿಷ್ಟ ರೀತಿಗಳು ಗೋಚರವಾಗುತ್ತವೆ.

ತಮಿಳುನಾಡು ಶೈವಧರ್ಮದ ನೆಲೆವೀಡು. ಪೂರ್ವ ಕಾಲದಿಂದ ಇಂದಿನವರೆಗೆ ಶೈವಧರ್ಮವು ನಡೆದುಕೊಂಡು ಬಂದಿದೆ ಇಲ್ಲಿ. ತಿನ್ನವಲ್ಲಿ, ಮಧುರೆ, ತ್ರಿಚನಾಪಳ್ಳಿ, ತಂಜಾವೂರು, ದಕ್ಷಿಣ ಅರ್ಕಾಟು, ಚಿಂಗಲ್ಪೇಟೆ, ಉತ್ತರಅರ್ಕಾಟು, ಸೇಲಮ್, ಕೊಯಮುತ್ತೂರು — ಸ್ವಲ್ಪದರಲ್ಲಿ ಹೇಳುವುದಾದರೆ, ತಮಿಳು ನುಡಿ ಪ್ರಚಾರವಿದ್ದಲ್ಲೆಲ್ಲ— ಶೈವಧರ್ಮದ ಹೆಚ್ಚಳವಿದೆ. ಜನಸಾಮಾನ್ಯರಲ್ಲಿ ಹಿಂದಿನ ಕಾಲದ ಅರುವತ್ತುಮೂರು ಪುರಾತನರು ಪ್ರಸಿದ್ಧರಷ್ಟೇ. ಶಿವಭಕ್ತಿಯು ಪ್ರಾಚೀನ ಕಾಲದಿಂದ ಇದ್ದುದು ತೇವಾರದಿಂದ ತಿಳಿದುಬರುತ್ತದೆ. ಈ ನಾಡಿನಲ್ಲಿ ಶೈವಧರ್ಮವೂ ಶಿವಭಕ್ತಿಯೂ ಮೊದಲಿನಿಂದ ಇದ್ದರೂ ದೇವಾಲಯಗಳ ಆರಂಭವು ಕ್ರಿ. ಶ. ೭ನೆಯ ಶತಕದಲ್ಲಿ ಪಲ್ಲವರ ಕಾಲದಿಂದ ಎಂದು ಸ್ಪಷ್ಟವಾಗಿ ಕಂಡುಬರುವುದು

**ಕರ್ನಾಟಕ**— ದೇವಾಲಯಗಳು ತಮಿಳು ನಾಡಿನಲ್ಲಿ ಪಲ್ಲವರ ಕಾಲದಲ್ಲಿ ಪ್ರಾರಂಭವಾದಂತೆ, ಕನ್ನಡನಾಡಿನಲ್ಲಿ ಸುಮಾರು ಇದೇ ಕಾಲದಲ್ಲಿ ಆಳಿದ ಬಾದಾಮಿಯ ಚಾಲುಕ್ಯರ ಕಾಲದಿಂದ ಕಾಣಿಸಿಕೊಳ್ಳುತ್ತವೆ ಐಹೊಳೆ, ಪಟ್ಟದಕಲ್ಲು, ಬಾದಾಮಿಯಲ್ಲಿಯ ಕಟ್ಟಡಗಳು ಎಲ್ಲಕ್ಕಿಂತ ಪ್ರಾಚೀನವಾದವುಗಳೆಂದು ಪಂಡಿತರು ಅಭಿಪ್ರಾಯಪಡುತ್ತಾರೆ. ಕೀರ್ತಿವರ್ಮನಿಂದ ಬಾದಾಮಿಯಲ್ಲಿ ವೈಷ್ಣವ-ಗುಹೆಯು ಕೊರೆಯಿಸಲ್ಪಟ್ಟಿದೆ (578 A D ). ಮೇಗುಟಿಯ ದೇವಾಲಯವು ಪುಲಿಕೇಶಿಯ ಕಾಲದಲ್ಲಿ

ರವಿಕೀರ್ತಿಯೆಂಬವನಿಂದ ಕಟ್ಟಿಸಲಾಗಿದೆ. ಲಾಡಖಾನ ದೇವಾಲಯವು ಎಲ್ಲವುಗಳಿಗಿಂತ ಪುರಾತನವಾದದ್ದು. ಮಹಾಕೂಟೇಶ್ವರ ಮತ್ತು ಮಲ್ಲಿಕಾರ್ಜುನ ಗುಡಿಗಳಿಗೆ ಮಂಗಳೇಶನ ಕಾಲದಲ್ಲಿ ದುರ್ಲಭದೇವಿಯು ಕ್ರಿ. ಶ. ೬೦೧ ರಲ್ಲಿ ಕಿಸುವೊಳಲ್, ಕೆಂದೂರು, ನಂದಿಗ್ರಾಮ, ಐಹೊಳೆ ಈ ಗ್ರಾಮಗಳನ್ನು ಅರಸನ ಅಪ್ಪಣೆ ಪಡೆದು ದತ್ತಿಯಾಗಿ ಕೊಟ್ಟಿರುವಳು. ಮಾಲೆಗಿತ್ತಿಯ ಶಿವಾಲಯವು ಐಹೊಳೆಯಲ್ಲಿ ಬಹಳ ಹಳೆಯದು.

ಸುಮಾರು ಕಾಲದ್ದಾದ ಲಕುಲೀಶನ ಗುಡಿಯೊಂದಿದೆ. ಲಕುಲೀಶನು ಶಿವನ ಅವತಾರ. ಲಕುಲೀಶನ ಮೂರ್ತಿಯು ನಗ್ನವಾಗಿದೆ. ಪಟ್ಟದಕಲ್ಲಿನ ವಿರೂಪಾಕ್ಷ ಮತ್ತು ಮಲ್ಲಿಕಾರ್ಜುನ ಗುಡಿಗಳಲ್ಲಿಯೂ ಲಕುಲೀಶನ ನಿಂತ ಮೂರ್ತಿಗಳು ಗೋಡೆಗಳಲ್ಲಿವೆ. ಮಧ್ಯಪ್ರದೇಶ, ರಾಜಪುತಾನಾ, ಬಡೋದೆ ಜಿಲ್ಲೆಯ ಕಾರವಾನ್ ಎಂಬ ಸ್ಥಳಗಳಲ್ಲಿಯೂ. ಇದೇ ತರದ ಲಕುಲೀಶನ ಮೂರ್ತಿಗಳಿವೆ. ಐಹೊಳೆಯಲ್ಲಿ ಮಠವೊಂದಿದೆ, ಬಹುಶಃ ಅದು ಸ್ಥಾನಾಚಾರ್ಯನಿರುವ ಮಠವಾಗಿದ್ದಿರಬಹುದು. ಬಾದಾಮಿಯಲ್ಲಿ ಕುಷ್ಟರಾಜನ ಪ್ರತಿಮೆಯೊಂದಿದೆ. ಈ ಪ್ರತಿಮೆಯ ಕೊರಳಲ್ಲಿ ಹಾರ, ಕಂಕಣ ಜನಿವಾರಗಳಿವೆ, ಉಂಗುರುಗೂದಲುಗಳುಳ್ಳ ಜಟಾಮುಕುಟವಿದೆ; ಕೈಯಲ್ಲಿ ಜಪಮಾಲೆಯಿದೆ; ಪದ್ಮಾಸನದಲ್ಲಿದ್ದು ಒಂದು ಅಂಗೈಯನ್ನು ತೊಡೆಯ ಮೇಲೆ ಇಡಲಾಗಿದೆ. ಎಡಬಲದಲ್ಲಿ ಚೌರಿ ಬೀಸುತ್ತಿರುವವರು ನಿಂತಿರುವರು. ಪ್ರತಿಮೆಯು ಸಿಂಹಾಸನದ ಮೇಲೆ ಕುಳಿತಂತಿದೆ ರಾಜನಿಗೆ ಕುಷ್ಟರೋಗವಾಗಿ ಬಾದಾಮಿಗೆ ಬಂದ ನಂತರ ಗುಣವಾಯಿತೆಂದೂ, ಆದುದರಿಂದ ಇದನ್ನು ಕುಷ್ಟರಾಜನ ಮೂರ್ತಿಯೆಂದು ಕರೆಯಲಾಗುತ್ತಿದೆಂದೂ ಐತಿಹ್ಯವಿದೆ. ನಾನು ನೋಡಿದ ಒಂದೆರಡು ಪ್ರತಿಮೆಗಳ ವಿಷಯವಾಗಿ ಈ ಸಮಯದಲ್ಲಿ ಹೇಳಿದರೆ ಅನುಚಿತವಾಗಲಾರದು

(೧) ಮಹಾಕೂಟದ ಗರ್ಭಗುಡಿಯ ಬಾಗಿಲ ಮುಂದೆ ಒಂದು ಮೂರ್ತಿಯಿದೆ. ಪದ್ಮಾಸನದಲ್ಲಿದ್ದು ಕೈಮುಗಿದದ್ದಾಗಿದೆ ತಲೆಯಲ್ಲಿ ಜಡೆಯಿದ್ದು, ತಲೆಯ ಸುತ್ತು ರುದ್ರಾಕ್ಷಿಯ ಮಾಲೆಯನ್ನು ಕಟ್ಟಿದಂತಿದೆ. ಕೊರಳಲ್ಲಿ ರುದ್ರಾಕ್ಷಿಯ ಮಾಲೆ, ಎರಡೂ ತೋಳುಗಳಿಗೆ ರುದ್ರಾಕ್ಷಿಯ ಕಡಗಗಳು, ಎರಡೂ ಮುಂಗೈಯಲ್ಲಿ ರುದ್ರಾಕ್ಷಿಯ ಕಂಕಣ, ಯಜ್ಞೋ

ಪವೀತ ಮತ್ತು ಮೇಖಲೆಗಳೂ ಇದ್ದಂತೆ ಕಾಣುವುದು. ಇದರಂತೆ ಅಂಗಳ ದಲ್ಲಿ ಇನ್ನೊಂದು ಮೂರ್ತಿಯಿದೆ. ಇಂತಹ ಮೂರ್ತಿಗಳು ಒಟ್ಟು ನಾಲ್ಕು ಇವೆ ಅಲ್ಲಿ. ಇವೆಲ್ಲವು ಕಾಳಾಮುಖಯತಿಗಳ ಪ್ರತಿಮೆಗಳಾಗಿದ್ದಿರಬಹುದು. ಇನ್ನೊಂದು ಮೂರ್ತಿ ಮಾತ್ರ. ವಜ್ರಾಸನದಲ್ಲಿ ಕುಳಿತಂತಿದೆ. ಕೈಯಲ್ಲಿ ಕಪಾಲ ಪಾತ್ರೆಯಂತಿದೆ. ಇನ್ನೊಂದು ಕೈಯಲ್ಲಿ ಲಾಕುಳವಿದೆ ಇನ್ನೊಂದು ಇದೇ ತರದ ಮೂರ್ತಿ ಕಟ್ಟೆಯ ಮೇಲಿದೆ ಇವು ಬಹುಶಃ ಕಾಪಾಲಿಕರ ಮೂರ್ತಿಗಳಾಗಿದ್ದಿರಬಹುದು. ಕುಷ್ಠರಾಜನ ಪ್ರತಿಮೆಯೆಂದು ಕರೆ ಯಲ್ಪಡುವ ಪ್ರತಿಮೆಯಾದರೂ ಇದೇ ಜಾತಿಗೆ ಸೇರಿದ್ದೆಂದು ಊಹಿಸಿದರೆ ತಪ್ಪಾಗದು.

(೨) ಗಜೇಂದ್ರಗಡದ ಕಾಳಕಾಳೇಶ್ವರ ಗುಡಿಯಲ್ಲೂ ಇಂತಹ ಒಂದೆರಡು ಪ್ರತಿಮೆಗಳಿವೆ. ಪದ್ಮಾಸನದಲ್ಲಿ ಕುಳಿತಿದ್ದ, ಎರಡು ಕೈಗಳು ಜೋಡಿಸಿ ಮುಗಿದಿದ್ದ, ಸುಮಾರು ಒಂದುವರೆ ಅಡಿ ಎತ್ತರವಿದ್ದ ಪ್ರತಿಮೆ ಯೊಂದಿದೆ. ಕಪಾಲದ ಸುತ್ತಮುತ್ತ ರುದ್ರಾಕ್ಷಿ ಕಾಳುಗಳಂತೆ ತೋರುವ ಸರವನ್ನು ಸುತ್ತಿರುವುದು. ಕರ್ಣಕುಂಡಲಗಳಿವೆ. ಕೊರಳಲ್ಲಿ ಎರಡು ಹಾರಗಳಿವೆ. ಮೊದಲನೆಯ ಹಾರವು ಎದೆಯವರೆಗಿದ್ದು ನಟ್ಟನಡುವೆ ರುದ್ರಾಕ್ಷಿಯಿರುವುದು ಎರಡನೆಯ ಹಾರವು ಹೊಕ್ಕಳದವರೆಗಿದೆ. ಮುಂಗೈಯಲ್ಲಿ ಕಂಕಣ, ಸೊಂಕಕ್ಕೆ ಮೌಂಜಿಯಂತಿರುವ ಪಟ್ಟಿ. ಹಿಂಭಾಗದಲ್ಲಿ ಕೌಪೀನವಿದೆ. ತಲೆತುಂಬ ಹೆಣ್ಣುಮಕ್ಕಳಿಗಿರುವಂತೆ ಹಿಕ್ಕಿದ ಕೂದಲು ಹಿಂದಕ್ಕೆ ಇಳಿಬಿಡಲಾಗಿದೆ. ಉದ್ದನ್ನ ಜನಿವಾರವು ಕಾಣಿಸು ವುದು. ಗದ್ದುಗೆಯ ಕೆಳಭಾಗದಲ್ಲಿ ಬರೆಹವಿದೆ. ಅದು ಬಹುಶಃ ಹೆಸರು ಇದ್ದಿರಬಹುದು. ಇದೂ ಕಾಳಾಮುಖ ಮುನಿಯ ಪ್ರತಿಮೆಯಿದ್ದಿರ ಬಹುದೆಂದು ನಮ್ಮ ಊಹೆ

(೩) ಗೋಕಾಕದಲ್ಲಿ ತೂಗುಸೇತುವೆಯ ಸಮೀಪದಲ್ಲಿ ಸಣ್ಣ ದೊಂದು ಗುಡಿಯಿದೆ. ಗುಡಿಯ ದ್ವಾರದ ಮೇಲ್ಭಾಗದಲ್ಲಿ ಲಕುಲೀಶನ ಪ್ರತಿಮೆಯೊಂದಿದೆ. ಅದರ ಮಗ್ಗುಲಲ್ಲಿ ಕಾಲಲ್ಲಿ ಮೊಚ್ಚೆ ಹಾಕಿದ ಸೂರ್ಯಪ್ರತಿಮೆಯೂ, ಮೂರು ತಲೆಯುಳ್ಳ ಶಿವನ ಪ್ರತಿಮೆಯೂ ಇರು ವವು. ಡಂಬಳದಲ್ಲಿ ಪಂಚಲಿಂಗವಿದೆ. ಪಂಚಲಿಂಗದ ಉಲ್ಲೇಖವು ಬಳ್ಳಿ ಗಾಮೆಯ ದಕ್ಷಿಣಕೇದಾರೇಶ್ವರದ ಶಾಸನದಲ್ಲಿ ಬಂದಿದೆ ಮಲ್ಲಿಕಾರ್ಜುನ

ಮತ್ತು ಸಂಗಮೇಶ್ವರನ ಗುಡಿಗಳಲ್ಲಿದ್ದಂತೆ, ಎಲ್ಲೋರಾ ಅಥವಾ ಏಲಾಪೂರದ ಕೈಲಾಸದಲ್ಲೂ ಲಕುಲೀಶನ ಪ್ರತಿಮೆಯಿದೆ. ಕ್ರಿ. ಶ. ೬ ಅಥವಾ ೭ನೆಯ ಶತಮಾನದಿಂದ ಕ್ರಿ. ಶ. ೧೦ ನೆಯ ಶತಮಾನದವರೆಗೆ ಲಕುಲೀಶನ ಮೂರ್ತಿಗಳ ಪರಂಪರೆಯು ಕನ್ನಡನಾಡಿನಲ್ಲಿ ಇದ್ದುದು ಕಂಡು ಬರುತ್ತದೆ. ತ್ರಿಮುಖಲಿಂಗ, ಪಂಚಮುಖಲಿಂಗ, ಭೈರವನ ಮೂರ್ತಿಗಳಲ್ಲದೆ ಸಾಮಾನ್ಯ ಲಿಂಗಗಳಂತೂ ದೇಶದ ತುಂಬ ವ್ಯಾಪಿಸಿವೆ. ಪಾರ್ವತಿಯು ತೊಡೆಯಮೇಲಿದ್ದ ಮಲ್ಲಿಕಾರ್ಜುನನ ಸುಂದರ ಮೂರ್ತಿಯು ಕಲಬುರ್ಗಿ ಜಿಲ್ಲೆಯ ಜೇವರ್ಗಿ ತಾಲೂಕಿನ ಹಿಪ್ಪರಗಿ ಎಂಬ ಗ್ರಾಮದಲ್ಲಿದೆ. ಬಾದಾಮಿ ಚಾಳುಕ್ಯ ಕಾಲದಲ್ಲಿದ್ದ ದೇವಾಲಯಗಳನ್ನು ಕಟ್ಟಿಸುವ ಪರಂಪರೆಯು ರಾಷ್ಟ್ರಕೂಟರ ಕಾಲದಲ್ಲಿ ನಡೆದುಬಂದಂತೆ ತೋರಲಿಲ್ಲ. ಏಲಾಪುರದ ಕೈಲಾಸವನ್ನುಳಿದು ಹೇಳಿಕೊಳ್ಳುವಂತಹ ದೇವಾಲಯಗಳು ರಾಷ್ಟ್ರಕೂಟರ ಕಾಲದಲ್ಲಿ ಆಗಿಲ್ಲ. ದೇಶದಲ್ಲಿಯ ಎಲ್ಲ ಕಲ್ಲುಕುಟಿಗರನ್ನೂ ಕೆಲಸಗಾರರನ್ನೂ ಕೈಲಾಸವನ್ನು ಕಟ್ಟಿಸುವುದಕ್ಕಾಗಿ ಅಲ್ಲಿಗೆ ಕರೆದೊಯ್ದುದ್ದೇ ಇದಕ್ಕೆ ಕಾರಣವೆಂದು ತಜ್ಞರು ಅಭಿಪ್ರಾಯಪಡುತ್ತಾರೆ. ಈ ಊಹೆಯು ಎಷ್ಟರಮಟ್ಟಿಗೆ ನಿಜವೊ ಹೇಳಲು ಸಾಧ್ಯವಿಲ್ಲ. ಏನೇ ಇದ್ದರೂ ರಾಷ್ಟ್ರಕೂಟರ ಕಾಲದ ದೇವಾಲಯಗಳು ಇಲ್ಲ. ಸ್ವತಃ ಅದರ ರಾಜಧಾನಿಯಾದ ಮುಳಖೇಡದಲ್ಲೂ, ಅದರ ನೆರೆಹೊರೆಯಲ್ಲೂ ಪ್ರಾಚೀನ ಕಟ್ಟಡಗಳು ಒಂದಾದರೂ ಸಿಕ್ಕುವುದಿಲ್ಲ. ಎರಡನೇ ತೈಲಪನು ಪುನಃ ಚಾಳುಕ್ಯರಾಜ್ಯವನ್ನು ಸ್ಥಾಪಿಸಿದೊಡನೆ ದೇವಾಲಯಗಳನ್ನು ಕಟ್ಟಿಸಲು ನಾಡಿನಲ್ಲಿ ಹೊಸಹುರುಪು ಗೋಚರವಾಗುತ್ತದೆ. ಕಲಬುರ್ಗಿ ಜಿಲ್ಲೆಯ ವಡಗೇರಿ ಗ್ರಾಮದಲ್ಲಿ ತೈಲಪನ ಕಾಲದ ಸುಂದರವಾದ ಚಿಕ್ಕಕಟ್ಟಡವು ಕಾಣಿಸಿಕೊಳ್ಳುವುದು. ಇವನ ಕಾಲದಿಂದ ಪೂರ್ವದ ಕಟ್ಟಡಗಳ ದ್ರಾವಿಡ ಪದ್ಧತಿಯು ಹಿಂದಕ್ಕೆ ಬಿದ್ದು, ಹೊಸ ಪದ್ಧತಿಯು ಆರಂಭವಾಗಿ ಆರನೆಯ ವಿಕ್ರಮಾಂಕನ ಕಾಲದಲ್ಲಿ ಘನತೆಗೇರಿ, ಅನಂತರ ಕ್ಷೀಣವಾಗುತ್ತ ಹೊಯ್ಸಳರ ಕುಸುರಿನ ಕಟ್ಟಡಗಳು ಕಾಣುತ್ತವೆ

**ಗುಜರಾತ**— ಗುಜರಾತದ ಪ್ರಸಿದ್ಧ ಸೋಮನಾಥ ದೇವಾಲಯವು ವಲ್ಲಭೀಯ ಮೈತ್ರಿಕರ ಕಾಲದ್ದು. ಇವರು ಪರಮಮಾಹೇಶ್ವರರೆಂದು ಕರೆಯಿಸಿಕೊಳ್ಳುತ್ತಿದ್ದರು. ಕ್ರಿ. ಶ. ೬, ೭, ೮ ನೆಯ ಶತಕಗಳಲ್ಲಿ ಇವರು ಗುಜರಾತವನ್ನು ಆಳಿದರು. ಕ್ರಿ. ಶ. ೧೦೨೬ ರಲ್ಲಿ ಮಹಮ್ಮದ ಗಝನಿಯು

ಈ ಗುಡಿಯನ್ನು ಲೂಟಿ ಮಾಡಿದನು. ಸೋಲೋಂಕಿ ಮನೆತನದ ಭೀಮ ದೇವನು (೧೦೨೨-೧೦೬೪) ಪುನಃ ಇದನ್ನು ಕಟ್ಟಿಸಿದನು. ಪುನಃ ಉಧ್ವಸ್ತ ವಾಯಿತು. ಕ್ರಿ. ಶ. ೧೨ನೆಯ ಶತಕದಲ್ಲಿ ಕುಮಾರಪಾಲನಿಂದ ಮತ್ತೆ ಕಟ್ಟಿಸಲಾಯಿತು. ಈ ಸೋಲೋಂಕಿ ಅರಸರು ಅನೇಕ ಶಿವಾಲಯ ಗಳನ್ನು ಕಟ್ಟಿಸಿರುವರು. ಅನ್ಹಿಲಪುರವು ಇವರ ರಾಜಧಾನಿ. ಮೂಲ ರಾಜನು (೯೪೨ ೯೯೬) ಸೋಮನಾಥನ ಭಕ್ತನು; ಮೂಲೇಶ್ವರ,ತ್ರಿಪುರುಷ ಪ್ರಾಸಾದಗಳನ್ನು ಕಟ್ಟಿಸಿದನು ಸಿದ್ಧರಾಜನು (೧೦೯೪-೧೧೪೩) ಸಹಸ್ರ ಲಿಂಗ ಕೆರೆಯನ್ನು ಕಟ್ಟಿಸಿದನು; ಅದರ ನಟ್ಟನಡುವೆ ರುದ್ರೇಶ್ವರ ಎಂಬ ಲಿಂಗವನ್ನು ಪ್ರತಿಷ್ಠಿಸಿದನು. ಸಿದ್ಧಾಪುರದಲ್ಲಿ ಮೂಲ ರಾಜನಿಂದ ಕಟ್ಟಿಸಿದ ರುದ್ರ ಮಹಾ-ಆಲಯವನ್ನು ಈತನು ಜೀರ್ಣೋದ್ಧಾರ ಮಾಡಿ ದನು. ವಡನಗರ (ಈಗಿನ ಆನಂದಪುರ)ವು ನಾಗ ಬ್ರಾಹ್ಮಣರ ಆವಾಸವು. ಇವರು ಶೈವರು. ಕ್ರಿ. ಶ. ೧೧೫೧ ನೆಯ ವರ್ಷದ ಕುಮಾರಪಾಲನ ಶಾಸನವೊಂದಿದೆ. ಇವನು ಸಿದ್ಧರಾಜನ ನಂತರದಲ್ಲಿ ಆಳಿದನು. ಇವನು ಅನೇಕ ಶಿವಾಲಯಗಳನ್ನು ಕಟ್ಟಿಸಿರುವನು. ಅವುಗಳಲ್ಲಿ ಹಾಟಕೇಶ್ವರ ಎಂಬುದು ಬಲು ಪ್ರಸಿದ್ಧವಾದದ್ದು.

**ಅಬುಪರ್ವತ**— ಸ್ಕಂದ ಪುರಾಣದಲ್ಲಿ ವರ್ಣಿತವಾದ ಪ್ರಭಾಸ ಕ್ಷೇತ್ರವು ಇದು ಮೊದಲು ಮಾಳವದ ಪರಮಾರ ಅರಸರು ಇದನ್ನು ಆಳಿದರು ಕ್ರಿ ಶ ೧೦ ನೆಯ ಶತಕದ ಕೊನೆಯ ಭಾಗದಿಂದ ಕ್ರಿ. ಶ. ೧೩ ನೆಯ ಶತಕದ ಕೊನೆಯವರೆಗೆ ಆಳಿದ ಗುಜರಾತದ ಚಾಳುಕ್ಯರ ಮಾಂಡಳಿಕರು ಇವರು. ಅರ್ಬುದದ ಅಚಲೇಶ್ವರ ಗುಡಿಯು ಪ್ರಸಿದ್ಧ ವಾದದ್ದು. ಈ ಅಚಲೇಶ್ವರ ಗುಡಿಯಲ್ಲಿ ಪರಮಾರ ಯಶೋಧರನ ಕಾಲದ, ಕ್ರಿ. ಶ. ೧೧೫೧ ನೆಯ ವರ್ಷದ ಶಾಸನವಿದೆ ಕ್ರಿ. ಶ. ೧೩ ನೆಯ ಶತಕದ ಅವಧಿಯಲ್ಲಿ ಪ್ರಹ್ಲಾದನೆಂಬವನು ಅಚಲೇಶ್ವರದ ನಂದಿಗಾಗಿ ಹಿತ್ತಾಳಿಯ ಜೈನಮೂರ್ತಿಯನ್ನು ಕರಗಿಸಿದನು.

ಅರ್ಬುದದ ಶಾಸನದಲ್ಲಿ **ಕೇದಾರರಾಶಿಯ** ಹೆಸರು ಬಂದಿದೆ. ಕನಖಲ, ಮತ್ತು ಚಂಡಿಕಾಶ್ರಮಗಳ ಉಲ್ಲೇಖವಿದೆ ಇದರಲ್ಲಿ. ಕೇದಾರ ರಾಶಿಯು ವ್ರತಿಯು. ಇದರ ಕಾಲ ಕ್ರಿ. ಶ. ೧೨೦೮ ನೆಯ ವರ್ಷ; ಈ ಶಾಸನವು ಶಿವ ಮತ್ತು ಉಜ್ಜಯನೀಯ ಸ್ತುತಿಯಿಂದ ಪ್ರಾರಂಭ

ವಾಗಿದೆ. ಚಪಲ ಸಂತತಿಯು ಶೈವಗುರುಗಳ ಪೀಳಿಗೆಯನ್ನು ಎಂಟು ತಲೆಯವರೆಗೆ ಹೇಳಲಾಗಿದೆ. ಈ ಕೇದಾರರಾಶಿಯು ಚಂಡಿಕಾಶ್ರಮದ ಚಂಡೀಶನ ಭಕ್ತನು. ಊಜ್ಜಯನಿಯ ನೂತನ ಮಠದಿಂದ ಬಂದು, ಚಂಡಿಕಾಶ್ರಮದ ಮಠಪತಿಯಾದನು. ಈ ಕೇದಾರರಾಶಿಯು ಅನೇಕ ಗುಡಿಗಳನ್ನು ಕಟ್ಟಿಸಿರುವನು. ಅವನ ತಂಗಿಯು ಮೋಕ್ಷೇಶ್ವರವೆಂಬ ಶಿವಾಲಯವನ್ನು ಕಟ್ಟಿಸಿದಳು. ಕೇದಾರರಾಶಿಯು ಕನಖಲನಾಥ, ಅತುಲನಾಥ ಎಂಬ ಗುಡಿಗಳನ್ನು ಕಟ್ಟಿಸಿದನು. ಮೂರು ತಲೆಯುಳ್ಳ, ತೊಡೆಯಲ್ಲಿ ಶಿವೆಯುಳ್ಳ, ಅನೇಕ ಚೋಳುಗಳುಳ್ಳ ಶಿವನ ಮೂರ್ತಿಯು ಮತ್ತು ಭೈರವನ ಮೂರ್ತಿಯು ಪರಮಾರ ಅರಸರ ರಾಜಧಾನಿಯಾದ ಚಂದ್ರಾವತಿಯಲ್ಲಿವೆ.

**ಮೇವಾಡ**— ಮೇವಾಡದ ಏಕಲಿಂಗವಂತೂ ಈ ನಾಡಿನ ಮುಖ್ಯ ದೇವನು. ಕ್ರಿ. ಶ. ೯೭೧ ನೆಯ ನರವಾಹನದ ಶಾಸನದಲ್ಲಿ ಇದರ ಉಲ್ಲೇಖವಿದೆ. ಏಕಲಿಂಗನ ಭಕ್ತನಾದ **ಹಾರೀತರಾಶಿಯು** ಮೇವಾಡದ ಮೂಲಪುರುಷನಾದ ಬಪ್ಪನಿಗೆ ಬಂಗಾರದ ಕಂಕಣವನ್ನು ಕೊಟ್ಟನೆಂದು ಕಥೆಯಿದೆ. ಈಗಿನ ಗುಡಿಯು ಕ್ರಿ. ಶ. ೧೨೧೪ ನೆಯ ವರ್ಷದ್ದು. ಸುಮಾರು ಕ್ರಿ. ಶ. ೧೦ನೆಯ ಶತಕದಲ್ಲಿ ಪಶ್ಚಿಮಭಾರತದ ಗುಜರಾತದಿಂದ ರೇವೆಯವರೆಗೆ ಶಿವಧರ್ಮದ ಪ್ರಾಬಲ್ಯವಿದ್ದುದು ಕಂಡುಬರುತ್ತದೆ. ಕ್ರಿ. ಶ. ೭ನೆಯ ಶತಮಾನದ ವಲ್ಲಭಿಯರಸರ ಕಾಲದಲ್ಲೂ ಶೈವಧರ್ಮವು ಈ ನಾಡಿನಲ್ಲಿತ್ತೆಂದು ತಿಳಿದುಬರುವುದು.

**ಮಾಳವ**— ಮಾಳವದ ರಾಜಧಾನಿಯಾದ ಉಜ್ಜಯನಿ ಅಥವಾ ಅವಂತಿಯಲ್ಲಿ **ಮಹಾಕಾಲಶಿವನ** ಸ್ಥಾನವೆಂದು ಪ್ರಾಚೀನ ಕಾಲದಿಂದ ಪ್ರಸಿದ್ಧಿಯಿದೆ. ಸ್ಕಂದಪುರಾಣದ ಅವಂತಿ ಖಂಡದಲ್ಲಿ, ಅವಂತಿಕೇಶ್ವರ ಅಥವಾ ಮಹಾಕಾಲವನದ ವರ್ಣನೆಯಿದೆ. ಪ್ರಭಾಸ, ಪುಷ್ಕರ, ಕೇದಾರ, ಕಾಯಾವರೋಹಣ ಇವೇ ಮುಂತಾದ ಪ್ರಸಿದ್ಧ ತೀರ್ಥಗಳೂ, ಶೈವ ಕ್ಷೇತ್ರಗಳೂ ಇವೆ. ಮಹಾಕಾಲನ ಗುಡಿಯು ಸುಮಾರು ಕ್ರಿ ಶ. ೫ ನೆಯ ಶತಮಾನದಷ್ಟು ಪ್ರಾಚೀನವಾದದ್ದೆಂದು ಪಂಡಿತರು ಅಭಿಪ್ರಾಯ ಪಡುತ್ತಾರೆ. ಈ ಮಹಾಕಾಲನ ಗುಡಿಯು, ಗುಜರಾತದ ಸೋಮನಾಥನಷ್ಟೇ ಪ್ರಸಿದ್ಧವಿದೆ. ಕ್ರಿ. ಶ. ೧೦ ನೆಯ ಶತಮಾನದ ಮಧ್ಯದಲ್ಲಿ ಧನಿಕ

ನೆಂಬ ಪರಮಾರ ಅರಸನು ಮಹಾಕಾಲನ ದೇವಾಲಯದ ಸಮೀಪದಲ್ಲಿ ಧನೇಶ್ವರ ಎಂಬ ಶಿವಾಲಯವನ್ನು ಕಟ್ಟಿಸಿದನು. ಪರಮಾರ ಅರಸನಾದ ಭೋಜನು ಕ್ರಿ. ಶ. ೧೧ನೆಯ ಶತಮಾನದಲ್ಲಿ ಕೇದಾರೇಶ್ವರ, ರಾಮೇಶ್ವರ, ಸೋಮನಾಥ, ಕಾಲಾನಲರುದ್ರ ಮುಂತಾದ ಹೆಸರಿನ ಶಿವಾಲಯಗಳನ್ನು ಕಟ್ಟಿಸಿದನು. ಅವೆಲ್ಲ ತುರುಕರಿಂದ ಉಧ್ವಸ್ತವಾಗಿ ಹಾಳಾಗಿವೆ. ಮಾಳವ ದಲ್ಲಿ ಈಗಿರುವ ನೀಲಕಂಠೇಶ್ವರ, ಸಿದ್ಧೇಶ್ವರ ದೇಗುಲಗಳು ಉಳಿದು ಕೊಂಡಿವೆ. ಉದಯಾದಿತ್ಯನು ಕ್ರಿ. ಶ. ೧೦೫೯ ರಲ್ಲಿ ನೀಲಕಂಠೇಶ್ವರ ಗುಡಿಯನ್ನು ಗ್ವಾಲೀರದಲ್ಲಿ ಕಟ್ಟಿಸಿದನು ಇಂದೂರು ರಾಜ್ಯದ ನೇಮ ವಾರದಲ್ಲಿ ಸಿದ್ಧನಾಥ ಅಥವಾ ಸಿದ್ಧೇಶ್ವರನ ಗುಡಿಯಿದೆ. ಇದು ಕ್ರಿ. ಶ. ಶತಕದ ಈಚೆಯದಲ್ಲ. ಇದಲ್ಲದೆ ಭೂಪಾಲ ರಾಜ್ಯದಲ್ಲಿ ಭೋಜನಿಂದ ಕಟ್ಟಿಸಲ್ಪಟ್ಟ **ಭೋಜೇಶ್ವರ**ವೆಂಬ ಶಿವಾಲಯವಿದೆ. ಇದು ಸುಮಾರು ಕ್ರಿ. ಶ. ೧೦-೧೧ ನೆಯ ಶತಕದ್ದಾಗಿದೆ. ಇಂದೂರ ರಾಜ್ಯದ ಊನ್ ಎಂಬಲ್ಲಿ ಅನೇಕ ಶಿವಾಲಯಗಳಿವೆ. ಉತ್ತರ ಹಿಂದುಸ್ಥಾನದಲ್ಲಿ ಇಷ್ಟೊಂದು ಶಿವಾಲಯಗಳಿದ್ದುದು ಬಹಳ ಕಡಿಮೆಯೆಂದು ಹೇಳಲಾಗುತ್ತಿದೆ. ಮಹಾಕಾಲೇಶ್ವರ, ವಲ್ಲಾಳೇಶ್ವರ, ನೀಲಕಂಠೇಶ್ವರ, ಗುಪ್ತೇಶ್ವರ ಇವೆಲ್ಲವು ಸುಮಾರು ಕ್ರಿ. ಶ. ೧೧ ನೆಯ ಶತಕದವುಗಳಾಗಿವೆ. ಸ್ಕಂದಪುರಾಣದ ರೇವಾಖಂಡದಲ್ಲಿ ನರ್ಮದೆಯ ಮಾನ-ಧಾತಾ ಎಂಬ ನಡುಗಡ್ಡೆಯ ಸುತ್ತಮುತ್ತ ಅನೇಕ ಶಿವಾಲಯಗಳಿದ್ದು ಪವಿತ್ರ ಕ್ಷೇತ್ರಗಳಿವೆಯೆಂದು ವರ್ಣನೆಯಿದೆ. ಓಂಕಾರೇಶ್ವರ, ಅಮರೇಶ್ವರ ಮುಂತಾದ ಪ್ರಾಚೀನ ಲಿಂಗಮೂರ್ತಿಗಳಿವೆ ಇಲ್ಲಿ. ಪರಮಾರ ಅರಸರ ಶಾಸನಗಳಲ್ಲಿ ಇವುಗಳ ಉಲ್ಲೇಖವು ಬರುತ್ತದೆ. ಬೀರಖೇಡಿಯ ಸಿದ್ಧೇಶ್ವರ ಮಹಾದೇವನ ಗುಡಿಯು ಪ್ರಾಚೀನವಾದದ್ದು. ಅದರಂತೆ ಗೌರೀಸೋಮನಾಥನ ಗುಡಿಯು.

**ಬುಂದೇಲಖಂಡ ಮತ್ತು ಬಾಗೇಲಖಂಡ**— ಕ್ರಿ.ಶ. ೧೦, ೧೧, ೧೨, ನೆಯ ಶತಮಾನದಲ್ಲಿ ಆಳಿದ ಚಂದೇಲ ಅರಸರ ಕಾಲದಲ್ಲಿ ಬುಂದೇಲ ಖಂಡವು ಶಿವಧರ್ಮದ ಕೇಂದ್ರವಾಗಿತ್ತು. ಉತ್ತರ ಹಿಂದುಸ್ಥಾನದಲ್ಲಿ ಭುವನೇಶ್ವರ ಗುಡಿಗಳ ಸಮೂಹವು ಪ್ರಸಿದ್ಧವಿದ್ದಂತೆ ಈ ದೇಶದಲ್ಲಿ ಖಜರಾಹೊ ಶಿವಾಲಯಗಳ ಸಮೂಹವು ಪ್ರಸಿದ್ಧಿಯನ್ನು ಪಡೆದಿದೆ. ಧಂಗ ಎಂಬ ಅರಸನ ಕಾಲದಲ್ಲಿ (ಕ್ರಿ. ಶ. ೯೫೦–೧೦೦೦) ಕೀರ್ತಿ ಪಡೆದಿತ್ತು. ಈ ಧಂಗನು ಶಿವಭಕ್ತನು. ರುದ್ರನನ್ನು ಧೇನಿಸುತ್ತ

ಪ್ರಯಾಗದಲ್ಲಿ ಮರಣಹೊಂದಿದನೆಂದು ಶಾಸನದಲ್ಲಿ ಉಕ್ತವಾಗಿದೆ. ಈ ಧಂಗನ ತಂದೆಯು ಯಶೋವರ್ಮನು (ಕ್ರಿ. ಶ. ೯೩೦-೯೫೦). ಕ್ರಿ. ಶ. ೯೪೫ ರಲ್ಲಿ ಚತುರ್ಭುಜ ಗುಡಿಯನ್ನು ಕಟ್ಟಿಸಿದನು. ಈ ಸಮೂಹದಲ್ಲಿ ಎಲ್ಲವುಗಳಿಗಿಂತ ದೊಡ್ಡ ದೇವಾಲಯವು ಕಂಡಾರಿಯ ಮಹಾದೇವನ ಗುಡಿಯು. ಕ್ರಿ. ಶ. ೧೦ ನೆಯ ಶತಮಾನದಲ್ಲಿ ಕಟ್ಟಿಸಲ್ಪಟ್ಟಿದೆ ಎಂದು ನಂಬಲಾಗಿದೆ. ಅದರಂತೆ ವಿಶ್ವನಾಥ ದೇವಾಲಯವು ಧಂಗನ ಕಾಲದಲ್ಲಿ ಕಟ್ಟಲಾಗಿದೆ. ಮೃತಂಗ ಮಹಾದೇವನ ಗುಡಿಯೂ ದೊಡ್ಡದಾಗಿದೆ. ಇದಲ್ಲದೆ ನೀಲಕಂಠ, ಮಹಾದೇವ ಮತ್ತು ಕುಂವರ ಮಠಗಳನ್ನು ಕ್ರಿ. ಶ. ೧೦ ಅಥವಾ ೧೧ ನೆಯ ಶತಮಾನದಲ್ಲಿ ಕಟ್ಟಿಸಿರಬಹುದೆಂದು ತರ್ಕಿಸಲಾಗಿದೆ. ಕಾಳಂಜರ ದುರ್ಗವು ಚಂದೇಲ ಅರಸರ ಅಧೀನವಿದ್ದು ಶೈವ ಯತಿಗಳ ವಾಸಸ್ಥಳವಾಗಿತ್ತು. ಅಲ್ಲಿಯೂ ನೀಲಕಂಠನ ಲಿಂಗವಿದೆ. ಪರಮೂಲ ಅಥವಾ ಪರಮಾಡಿ (೧೧೬೫-೧೨೦೩) ಎಂಬವನಿಂದ ಮಹಾದ್ವಾರವು ಕಟ್ಟಿಸಲಾಗಿದೆ. ಮದನಸಾಗರ ಎಂಬ ಸರೋವರದ ಮೂಲೆಯಲ್ಲಿ ಬೆಟ್ಟದ ಮೇಲೆ ಮದನವರ್ಮನಿಂದ (೧೧೨೮-೧೧೬೫) ಕಟ್ಟಿಸಲ್ಪಟ್ಟಿದೆ. ಬುಂದೇಲಖಂಡದಲ್ಲಿ ಶೈವಧರ್ಮವು ಬಹಳ ಹಿಂದಿನ ಕಾಲದಿಂದ ಪ್ರಚಾರದಲ್ಲಿದ್ದಂತೆ ತೋರುವುದು. ಕ್ರಿ. ಶ. ೪, ೫ನೆಯ ಶತಮಾನದ ಗುಪ್ತವಂಶದ ಅರಸರ ಗುಡಿಗಳಿವೆ. ನಾಚನಾಕುಠಾರದಲ್ಲಿ, ಒಂದು ಗುಡಿಯಲ್ಲಿ ಚತುರ್ಮುಖ ಮಹಾದೇವನ ಲಿಂಗವಿದೆ. ಮಧ್ಯಯುಗದಲ್ಲಿ ಬಘೇಲಖಂಡದ ನಾಗೋಡರಾಜ್ಯವು ಶಿವಧರ್ಮದ ಕೇಂದ್ರವಾಗಿತ್ತು. ಭೂಮಾರದಲ್ಲಿ ಪ್ರಾಚೀನ ಶಿವಾಲಯವಿದೆ. ಇದು ಕ್ರಿ. ಶ. ೫ನೆಯ ಶತಮಾನದ್ದಿದ್ದಿರಬಹುದು. ದೊಡ್ಡ ಏಕ ಮುಖಲಿಂಗವಿದೆ. ಅದೇ ನಾಗೋಡ ರಾಜ್ಯದ ಶಂಕರಗಢ ಎಂಬ ಹಳ್ಳಿಯಲ್ಲಿ ಗುಪ್ತರ ಕಾಲದ ಮೂರ್ತಿಗಳೂ, ಒಂದು ಗುಡಿಯೂ ಇರುವವು ಇವೆಲ್ಲವು ಕ್ರಿ. ಶ. ೬ನೇ ಶತಕದವು ಆಗಿದ್ದಿರಬಹುದು. ಕ್ರಿ ಶ ೬, ೭ ಮತ್ತು ೧೧, ೧೨ ನೆಯ ಶತಮಾನದ ಶಿವ-ಪಾರ್ವತಿಯ ಮೂರ್ತಿಗಳು ಇಲ್ಲಿರುವವು. ಖೋಹ, ಮತ್ತು ಮಜಗಾವನ ಎಂಬ ಊರುಗಳಲ್ಲಿ ಅನೇಕ ಏಕಮುಖಲಿಂಗಗಳೂ, ಮಹಿಷಾಸುರಮರ್ದಿನಿವಿಗ್ರಹಗಳೂ ಇರುವವಲ್ಲದೆ, ಕೊರೆದ ಶಿವಲಿಂಗವೊಂದಿದೆ. ಈ ಲಿಂಗದ ಪಶ್ಚಿಮ ಭಾಗದಲ್ಲಿ ತ್ರಿನೇತ್ರವುಳ್ಳ, ಅರ್ಧಚಂದ್ರಾಂಕಿತ ಜಟಾಮುಕುಟವುಳ್ಳ ಶಿವನ ವಿಗ್ರಹವನ್ನು ಕೊರೆಯಲಾಗಿದೆ. ಪ್ರಾಚೀನ ಗುಪ್ತರ ಕಾಲದ ಉತ್ತಮವಾದ ಪ್ಲಾಸ್ಟಿಕ್ ಆರ್ಟದ

ಮಾದರಿಯಿದು. ಮಧ್ಯಭಾರತದ ಕೆಲಭಾಗದಲ್ಲಿ ಗುಪ್ತನರೇಶರ ಕಾಲದಲ್ಲಿ ಶಿವಧರ್ಮವು ದೃಢತರವಾಗಿತ್ತೆಂದು, ಶಿವಾಲಯ ಮತ್ತು ಕಲ್ಲುಕೆತ್ತನೆಗಳಿಂದ ತಿಳಿದುಬರುತ್ತದೆ. ಕ್ರಿ. ಶ. ೧೦ ನೆಯ ಶತಕದಲ್ಲಿ ಮತ್ತು ಅನಂತರದ ಕಾಲದಲ್ಲೂ ತ್ರಿಪುರಿಯ **ಹೈಯಹೈಯ** * ಅಥವಾ ಚೇದಿ ಅರಸರ ಆಳಿಕೆಯಲ್ಲಿ ಶಿವಧರ್ಮವು ಪ್ರಚಲಿತ ಧರ್ಮವಾಗಿತ್ತು. ದಾಹಲ ಪ್ರದೇಶವು ಅಂದರೆ ಈಗಿನ ಜಬ್ಬಲಪುರದ ಪ್ರಾಂತವು ತ್ರಿಪುರಿಯ**ಹೈಹೈಯರ*** ನಾಡಾಗಿತ್ತು. ಚೇದಿಯರಸರ ಕಾಲದಲ್ಲಿ ನಾಗೋಡ, ಪನ್ನಾ, ರೇವಾ ರಾಜ್ಯಗಳ ಭಾಗಗಳು ತ್ರಿಪುರಿ ರಾಜ್ಯದಲ್ಲಿ ಅಡಕವಾಗಿದ್ದವು. ಈ ಭಾಗದಲ್ಲಿ ಚೇದಿಯರಸರ ಕಾಲದ ಶಿವಾಲಯಗಳೂ, ಮಠಗಳೂ ಇವೆ. **ಮತ್ತ ಮಯೂರ ಸಂತತಿ**ಯ ಪ್ರಸಿದ್ಧ ಶೈವ ವ್ರತಿಗಳ ಪರಂಪರೆಯ ಮತ್ತು ಮಠಗಳ ಪ್ರಭಾವವು ಚೇದಿ ರಾಜ್ಯದಲ್ಲಿ ಯಥೇಷ್ಟವಾಗಿ ಕಂಡುಬರುತ್ತದೆ. ಚಂದ್ರೆಹಿ, ಗುರ್ಗಿ, ಭರತಪುರ, ಅಮರಕಂಟಕ, ಸೋಹಾಗಪುರ ಮುಂತಾದ ರೇವಾರಾಜ್ಯದ ಸ್ಥಳಗಳಲ್ಲಿ ಶಿವಾಲಯಗಳ ಅವಶೇಷಗಳು ಸಿಕ್ಕುತ್ತವೆ. ಕ್ರಿ. ಶ. ೧೦ ನೆಯ ಶತಮಾನದಲ್ಲಿ ಚಂದ್ರೆಹಿಯ ಶಿವಾಲಯವು ಕಟ್ಟಲ್ಪಟ್ಟಿದೆ. **ಪ್ರಬೋಧಶಿವನ** ಶಾಸನದಿಂದ ಗುರ್ಗಿಯ ಶಿವಾಲಯವು ಪ್ರಶಾಂತ ಶಿವನಿಂದ ಕಟ್ಟಿಸಲ್ಪಟ್ಟಿದೆ. ಇದೂ ಕ್ರಿ. ಶ. ೧೦ ನೆಯ ಶತಕದ ಮಧ್ಯದಲ್ಲಿ ಕಟ್ಟಿಸಲಾಗಿದೆ. ಚೇದಿ ದೇಶದಲ್ಲೂ ಸೋಹಗದ ವಿರಾಟೇಶ್ವರ, ಅಮರಕಂಟಕದ ಕರನ್ ಮಂದಿರ, ವೈಜನಾಥದಲ್ಲಿ ವೈದ್ಯನಾಥ, ಮಹಾದೇವ–ಇವೆಲ್ಲವು ರೇವಾರಾಜ್ಯದಲ್ಲಿವೆ. ಹೈಹೈಯ ವಂಶದ ಬಲಿಷ್ಠ ರಾಜನಾದ ಕರ್ಣರಾಜನು ಕ್ರಿ. ಶ. ೧೧ ನೆಯ ಶತಕದ ಉತ್ತರಾರ್ಧದಲ್ಲಿ ಕರಣಮಂದಿರವನ್ನು ಕಟ್ಟಿಸಿದನು. ಅಲ್ಹಣದೇವಿಯು ಗೌರೀಶಂಕರ ದೇವಾಲಯವನ್ನು ಕಟ್ಟಿಸಿದುದಲ್ಲದೆ, ಕ್ರಿ. ಶ. ೧೧ ನೆಯ ಶತಮಾನದಲ್ಲಿ ಮಠವನ್ನೂ ಕಟ್ಟಿಸಿರುವಳು.

**ಓಢ್ರದೇಶ**— ಓರಿಸಾಪ್ರಾಂತವು ಒಂದು ಕಾಲದಲ್ಲಿ ಶಿವಧರ್ಮದ ಕೇಂದ್ರವಾಗಿತ್ತು. ಪುರಿ ಜಿಲ್ಲೆಯಲ್ಲಿಯ ಭುವನೇಶ್ವರ, ಪರಶುರಾಮೇಶ್ವರಗಳು ಕ್ರಿ. ಶ. ೮ನೆಯ ಶತಮಾನದವು. ಮುಕ್ತೇಶ್ವರವು ಅನಂತರ ಕಾಲದ್ದು. ಲಿಂಗರಾಜ ಗುಡಿಯು ಕ್ರಿ. ಶ. ೧೦ನೆಯ ಶತಮಾನದ ಮಧ್ಯಕಾಲದ್ದಾಗಿದೆ. ಕ್ರಿ. ಶ. ೧೧ ನೆಯ ಶತಮಾನದ ಬ್ರಹ್ಮೇಶ್ವರ

* ಹೈಹಯ ?

೧೨ ನೆಯ ಶತಕದ ಮಹೇಶ್ವರ ಕ್ರಿ. ಶ. ೧೨೨೦ ನೆಯ ವರ್ಷದ ಚಾಟೇಶ್ವರ ಇವೆಲ್ಲವು ಪ್ರಸಿದ್ಧ ಶಿವಾಲಯುಗಳು. ಅದರಂತೆ ಕಟಕಜಿಲ್ಲೆಯುಗಂಧರಾಡಿಯ ದೇವಾಲಯುವು ಕ್ರಿ.ಶ. ೮ನೆಯ ಶತಕದ್ದು ಸಿದ್ಧೇಶ್ವರಗುಡಿಯು ಸುಮಾರು ಅದೇ ಕಾಲದ್ದಾಗಿದೆ ಕ್ರಿ.ಶ. ೯ನೆಯುಶತಕದ ಬಾಹುಧದಲ್ಲಿಯುರಾಮೇಶ್ವರ ಮುಂತಾದ ಮೂರು ಶಿವಾಲಯಗಳು ಕಲೆಯ ದೃಷ್ಟಿಯಿಂದ ಚೆನ್ನಾಗಿವೆ. ಮಯೂರಭಂಜ ಜಿಲ್ಲೆಯಲ್ಲಿಯ ನೀಲಕಂಠೇಶ್ವರ, ಚಂದ್ರಶೇಖರ ಗುಡಿಗಳ ಮೂಲಕವಾಗಿ ಖಚಿಂಗವು ಶಿವಧರ್ಮದ ಆಗರವಾಗಿದ್ದಿತು ಚಂದ್ರಶೇಖರ ಗುಡಿಯ ಕಾಲವು ಕ್ರಿ. ಶ. ೯೦೦. ಭಾಸ್ಕರೇಶ್ವರ ಗುಡಿಯು ಲಿಂಗರಾಜ ಗುಡಿಗಿಂತ ಹಿಂದಿನ ಕಾಲದ್ದು. ಗಂಜಾಮ ಜಿಲ್ಲೆಯ ಗೋಕರ್ಣೇಶ್ವರವು ಕಳಿಂಗದ ಗಂಗರಸರ ಮನೆದೇವತೆಯಾಗಿದ್ದಿತು. ವಜ್ರಹಸ್ತನು (ಕ್ರಿ. ಶ. ೧೦೩೮) ಪರಮ ಮಾಹೇಶ್ವರನೆಂದು ಹೇಳಿಕೊಂಡಿರುವನು.

ಮತ್ತು ಮಯೂರಮಠ, ಗೋಳಕೀಮಠಗಳು ಚೇದಿ ಪ್ರಾಂತದಲ್ಲಿ ಕ್ರಿ. ಶ ೧೦ ನೆಯ ಶತಮಾನದ ಪೂರ್ವಾರ್ಧದಲ್ಲಿ ಪ್ರಾರಂಭವಾಗಿ ಕ್ರಿ. ಶ. ೧೩ ನೆಯ ಶತಮಾನದವರೆಗ ತಮ್ಮ ತಮ್ಮ ಪರಂಪರೆಯನ್ನು ನಡೆಯಿಸಿಕೊಂಡು ಬಂದಿವೆ ಮಲಕಾಪುರದ ಶಾಸನದ ಪ್ರಕಾರ ಗೋಳಕೀಮಠದ ಶಿಷ್ಯಶಾಖೆಯು ಕ್ರಿ. ಶ. ೧೨೬೧ರ ವರೆಗೆ ಅವಿಚ್ಛಿನ್ನವಾಗಿ ನಡೆದುಬಂದಿದೆ. ಈ ಮಠದ ಪರಂಪರೆಯು ತಮಿಳು ಮತ್ತು ತೆಲಗು ದೇಶದಲ್ಲೂ ಕಂಡುಬರುತ್ತದೆ. ಈ ಮಲಕಾಪುರದ ಶಾಸನದ ವಿಷಯದಲ್ಲಿ ಕೊನೆಯ ಪ್ರಕರಣದಲ್ಲಿ ಚರ್ಚಿಸಲಾಗುವುದು.

ಶಿವಧರ್ಮ ಪ್ರಭಾವವು ಶಿವಾಲಯಗಳಿಂದ ತಿಳಿದುಬರುವುದು. ಎಷ್ಟೋ ಶತಕಗಳವರೆಗೆ ಶೈವಧರ್ಮದಷ್ಟು ಹೆಚ್ಚಳವು ಇನ್ನಾವ ಸಂಪ್ರದಾಯಕ್ಕೂ ಇದ್ದಿಲ್ಲ.

ಮುಖ್ಯ ಮುಖ್ಯ ಶಿವಾಲಯಗಳನ್ನು ನಿರ್ದೇಶ ಮಾಡುವುದಾದರೆ, ಕಾಠೇವಾಡದ ಸೋಮನಾಥ, ಅಬುವಿನಲ್ಲಿಯ ಅಚಲೇಶ್ವರ, ಉದಯಪುರದ ಏಕಲಿಂಗ, ಉಜ್ಜಯಿನಿಯ ಮಹಾಕಾಳ, ಭಿಲ್ಸೆಯ ಸಮೀಪವಿದ್ದ ಉದಯಪುರದ ನೀಲಕಂಠೇಶ್ವರ, ಮಧ್ಯಪ್ರಾಂತದ ನೀಮಾರಜಿಲ್ಲೆಯ

ಓಂಕಾರೇಶ್ವರ, ಖಜುಹಾರೋದಲ್ಲಿಯ ವಿಶ್ವನಾಥ ಮುಂತಾದವುಗಳು; ಸೋಹಾಗಪುರದ ವಿರಾಟೇಶ್ವರ, ಓರಿಸ್ಸಾ ಭುವನೇಶ್ವರದಲ್ಲಿಯ ಪರಶುರಾಮೇಶ್ವರ ಮುಂತಾದವುಗಳು; ಬಾದಾಮಿಯ ಸಂಗಮೇಶ್ವರ, ಎಲ್ಲೋರೆಯ ಕೈಲಾಸ, ಹಾನಗಲ್ಲಿನ ತಾರಕೇಶ್ವರ, ಬನವಾಸಿಯ ಮಧುಕೇಶ್ವರ, ಕಂಚಿಯ ರಾಜಸಿಂಹೇಶ್ವರ ಮುಂತಾದವುಗಳು. ಮಧ್ಯಯುಗದ ಐತಿಹಾಸಿಕ ಕಾಲದಲ್ಲಿ ಇಷ್ಟು ವಿಸ್ತೀರ್ಣವಾದ ಪ್ರದೇಶದಲ್ಲಿ ಶಿವಾಲಯಗಳಿದ್ದುದು ಶಿವಧರ್ಮದ ಹಬ್ಬುಗೆಯ ಸಾಕ್ಷಿಗಳಾಗಿವೆ. ಕ್ರಿ. ಶ. ೧೨ನೆಯ ಶತಮಾನದ ಕೊನೆಯವರೆಗೆ ಈ ಸ್ಥಿತಿಯಿದ್ದುದು ಕಂಡುಬರುವುದು. ಶಿವಸಮಯದ ಅವಾಂತರ ಭೇದಗಳನ್ನು ಈ ದೇವಾಲಯಗಳಿಂದ ಕಂಡುಕೊಳ್ಳುವುದು ಸದ್ಯಕ್ಕಂತೂ ಸಾಧ್ಯವಿಲ್ಲ.

**ಪ್ರಾಚೀನ ಪವಿತ್ರ ಕ್ಷೇತ್ರಗಳು**— ವಾಯುವೀಯ ಸಂಹಿತೆಯಲ್ಲಿ ಬಂದಿರುವ ಸಂಗತಿಯಿಂದಲೂ, ಇನ್ನಿತರ ಪುರಾಣಾದಿ ಗ್ರಂಥಗಳಿಂದಲೂ ಹಿಂದುಸ್ಥಾನದ ಪವಿತ್ರ ಕ್ಷೇತ್ರಗಳ ಕಲ್ಪನೆಯು ಪರಂಪರೆಯು ತಿಳಿದು ಬರುವುದು. ನಕುಲೀಶ್ವರಸ್ತುತಿ ಮಾಡುತ್ತ ಋಷಿಗಳು ವಾರಣಾಸಿಗೆ ಹೋಗುವಾಗ ಗಂಗಾತೀರ್ಥದಲ್ಲಿ ಸ್ನಾನಮಾಡಿದರೆಂದೂ, ವಾರಣಾಸಿಯಲ್ಲಿ ಅಮುಕ್ತೇಶ್ವರಲಿಂಗವನ್ನು ಪೂಜೆ ಮಾಡಿದರೆಂದೂ ವರ್ಣನೆಯಿದೆ. ಅಮುಕ್ತೇಶ್ವರ ಲಿಂಗದಲ್ಲಿ ಒಂದು ತೇಜವನ್ನು, ಮತ್ತು ಆ ತೇಜದಲ್ಲಿಯೇ ವೇದನಿಪುಣರಾದ ಪಾಶುಪತ ವ್ರತಿಗಳು ಲೀನವಾಗುವದನ್ನು ನೋಡಿದರಂತೆ. ಕನ್ನಡಶಾಸನಗಳಲ್ಲಿ ಕೊನೆಗೆ ಫಲಶ್ರುತಿಯನ್ನು ಹೇಳುವಾಗ ದೇವಾಲಯದ ಧರ್ಮದತ್ತಿಯನ್ನು ಅಳಿದವಂಗೆ ಗಂಗೆ, ಗಯೆ, ಕೇದಾರ, ಕುರುಕ್ಷೇತ್ರ, ವಾರಣಾಸಿ, ಶ್ರೀಪರ್ವತ, ಅರ್ಘ್ಯತೀರ್ಥಂಗಳಲ್ಲಿ, ಕೋಟಿ ಪಾರ್ವರಂ, ಕಪಿಲೆಯಂ, ಸ್ತ್ರೀಬಾಳರಂ, ಲಿಂಗಿಗಳಂ ಕೊಂದ ಪಾಪ ಬರುವುದೆಂದು ಹೇಳಲಾಗಿದೆ. ಇಂದಿಗೂ ಈ ಕ್ಷೇತ್ರಗಳು ಸಕಲ ಹಿಂದುಗಳಿಗೆ ಪವಿತ್ರ ಕ್ಷೇತ್ರಗಳಾಗಿವೆ. ಇದರಂತೆ ಗಂಗಾ-ಯಮುನಾ ಸಂಗಮವು ಪವಿತ್ರ ಕ್ಷೇತ್ರವೆಂದು ಗಣಿಸಲ್ಪಟ್ಟಿದೆ.

ಶಿವಧರ್ಮವು ಪ್ರಾಗೈತಿಹಾಸಿಕ ಕಾಲದಿಂದ ನಡೆದುಬಂದು, ಬೌದ್ಧ ಜೈನಧರ್ಮದ ಪ್ರಾಬಲ್ಯದಿಂದ ಕುಗ್ಗಿ, ಪುನಃ ಭಾರಶಿವ ವಾಕಾಟಕರ ಕಾಲದಲ್ಲಿ ತಲೆಯೆತ್ತಿದೆ—ಉತ್ತರಹಿಂದುಸ್ಥಾನದಲ್ಲಿ. ಅದರಂತೆ ದಕ್ಷಿಣ

ದಲ್ಲೂ ಆಂಧ್ರಭೃತ್ಯರ ಕಾಲದ ನಂತರದಲ್ಲಿ ಬೌದ್ಧರ ಪ್ರಾಬಲ್ಯವು ಕುಗ್ಗಿ, ತಮಿಳು ಶೈವ ನೈನಾರರಿಂದ ಶೈವಧರ್ಮವು ಬೆಳೆದಿದೆ. ಆದರೆ ಬೌದ್ಧ ಧರ್ಮವು ನಾಮಶೇಷವಾದಂತೆ ಜೈನಧರ್ಮವು ಆಗಿಲ್ಲ. ಜೈನ ಶೈವ ಧರ್ಮಗಳು ಮುಂದಿನ ಕಾಲದಲ್ಲಿ ಎಷ್ಟೋ ವರ್ಷಗಳವರೆಗೆ ಸಮವಾಗಿ ಬಾಳಿಕೊಂಡು ಬಂದಿವೆ. ಕ್ರಿ. ಶ. ೬-೭ ನೆಯ ಶತಮಾನದಿಂದ ಉತ್ತರ ದಲ್ಲೂ, ದಕ್ಷಿಣದಲ್ಲೂ, ಶಿವಾಲಯಗಳು ಕಂಡುಬರುವುದರಿಂದ ಶಿವ ಧರ್ಮವು ರಾಜಮನ್ನಣೆಯನ್ನು ಪಡೆದಿದೆಯೆಂದು ತಿಳಿಯುತ್ತದೆ. ತಮಿಳು ನಾಡಿನಲ್ಲಿ ಪಲ್ಲವರೂ, ಚೋಳರೂ ಇದನ್ನು ಎತ್ತಿಹಿಡಿದಂತೆ, ಕರ್ನಾಟಕ ದಲ್ಲಿ ಬಾದಾಮಿಯ ಚಾಲುಕ್ಯರೂ ಶಿವಧರ್ಮವನ್ನು ಪೋಷಿಸಿರುವರು. ಮುಂದಿನ ಕಾಲದಲ್ಲಿ—ಕ್ರಿ. ಶ. ೧೦, ೧೧, ೧೨ ನೆಯ ಶತಮಾನಗಳಲ್ಲಿ—ಉತ್ತರ ಮತ್ತು ದಕ್ಷಿಣ ಭಾರತಗಳಲ್ಲಿ ರಾಜಪುತಾನದಿಂದ ಓರಿಸ್ಸಾದವರೆಗೆ ಮತ್ತು ಗಂಗೆಯಿಂದ ಕಾವೇರಿಯವರೆಗೆ ಶಿವಧರ್ಮದ ಉತ್ಕರ್ಷವಾದದ್ದು ಕಂಡುಬರುವುದು. ಉತ್ತರದಲ್ಲಿ ಕ್ರಿ. ಶ. ೧೧ ನೆಯ ಶತಮಾನದಲ್ಲಿ ತುರುಕರ ದಾಳಿಯಿಂದ ದೇವಾಲಯಗಳು ಹಿಮ್ಮೆಟ್ಟಿವೆ. ಅದರಂತೆ ದಕ್ಷಿಣ ದಲ್ಲೂ ಮಲಿಕ್-ಕಾಫುರನ ದಾಳಿಯವರೆಗೆ ದೇವಾಲಯಗಳು ಕುಂದು ಕೊರತೆಗಳಿಲ್ಲದೆ ಸಾಗಿಬಂದಿವೆ ಮಹಮ್ಮದ್ ತೊಗಲಖನ ದಾಳಿಯ ನಂತರದಲ್ಲಿ ಸಂಪೂರ್ಣವಾಗಿ ನಿಂತುಹೋಗಿವೆ. ಸಾಮಾನ್ಯವಾಗಿ ಗುಜ ರಾತ, ಅರ್ಬುದಪರ್ವತ, ಮೇವಾಡ, ಮಾಳವ, ಬುಂದೇಲಖಂಡ, ಓಡಿಸಾ, ಕರ್ನಾಟಕ, ತಮಿಳುನಾಡು ಈ ಎಲ್ಲ ಪ್ರಾಂತಗಳಲ್ಲಿ ಸುಮಾರಾಗಿ ಒಂದೇ ಕಾಲದಲ್ಲಿ ದೇಗುಲಗಳು ಪ್ರಾರಂಭವಾದದ್ದೂ, ಒಂದೇ ಕಾಲದಲ್ಲಿ ಬೆಳೆದು ಬಂದದ್ದೂ, ತುರುಕರ ದಾಳಿಗನುಸರಿಸಿ ಇಳಿಮುಖವಾದದ್ದೂ ಶಿವಾಲಯ ಗಳ ಇತಿಹಾಸದಿಂದ ತಿಳಿದುಬರುವುದು. ದಕ್ಷಿಣದಲ್ಲಿ ವಿಜಯನಗರ ರಾಜ್ಯಸ್ಥಾಪನೆಯಿಂದ ಕೃಷ್ಣೆಯ ಕೆಳಭಾಗದಲ್ಲಿ ಈ ದೇವಾಲಯ ಸಂಸ್ಕೃ ತಿಯು ಉಳಿದುಕೊಂಡು ಬಂದಂತೆ, ಉತ್ತರ ಕರ್ನಾಟಕದಲ್ಲಾಗಲಿ, ಅಥವಾ ಉತ್ತರ ಭಾರತದಲ್ಲಾಗಲಿ ಉಳಿದಿಲ್ಲ. ಅಂತೂ ದೇವಾಲಯಗಳ ಉದಯ, ಹೆಚ್ಚಳ, ಅಳಿಗಾಲಕ್ಕೆ ಹಿಂದು ರಾಜ್ಯಗಳ ಸುಸ್ಥಿರತೆಯೇ ಮುಖ್ಯ ಕಾರಣವೆಂದು ಹೇಳಬಹುದು. ಸಂಕ್ರಮಣ ಕಾಲದಲ್ಲಿ "ಹೊಸ ಭಕ್ತಿ ಪಂಥಗಳು" ಉದಯವಾಗಿವೆ. ದೇವಾಲಯಗಳಲ್ಲಿಯ ಸ್ಥಾವರಲಿಂಗೋ-ಪಾಸನೆಯ ಬದಲಾಗಿ, ಗುರುಮಾರ್ಗವು ಹೆಚ್ಚಿದೆ. ಭಕ್ತಿ ಸಂಪ್ರದಾಯವು ಹೊಸರೂಪು ತಾಳಿ, ಸಾಧುಸಂತರು, ಶಿವಶರಣರ ಸಮಾಧಿಗಳಿಗೆ, ಪೂರ್ವ

ಕಾಲದಲ್ಲಿ ದೇವಾಲಯುಗಳಿಗಿದ್ದ ಬೆಲೆ ಬಂದಿದೆ. ಅದೇ ಪೂರ್ವದ ಭಾವನೆ, ಆದರೆ ರೂಪು ಬೇರೆ. ಈ ವಿವೇಚನೆಯಿಂದ ದೇವಾಲಯು ಸಂಸ್ಕೃತಿಯಾಗಲಿ, ಹೊಸರೂಪು ತಾಳಿದ 'ಗುರುಮಾರ್ಗ'ವಾಗಲಿ ಇಡೀ ಭಾರತದ ಸಾಂಸ್ಕೃತಿಕ ಆಂದೋಲನವೆಂಬುದು ಸ್ಪಷ್ಟವಿದೆ. ಹೊಸಭಕ್ತಿಪಂಥಗಳಾದ ಗುರುಮಾರ್ಗಗಳು ಒಂದೇ ವೃಕ್ಷದ ಅಂಗೋಪಾಂಗಗಳಾಗಿವೆ. ಆಯಾ ಪ್ರಾಂತದ ಪರಿಸ್ಥಿತಿಗನುಸರಿಸಿ ಅವು ಬೆಳೆದುಬಂದಿವೆ. ಭಾರತದ ಈ ಆಂದೋಲನದ ಪರಿಳಿತಕ್ಕನುಸಾರವಾಗಿ ಕರ್ನಾಟಕದಲ್ಲೂ ಪರಿಳಿತಗಳು ಆದದ್ದುಂಟು. ಕರ್ನಾಟಕದಲ್ಲಿಯು ಹೊಸ ಗುರುಮಾರ್ಗವಾದರೂ ಆ ವೃಕ್ಷದ ಒಂದು ಅಂಗಮಾತ್ರ, ಸ್ವತಂತ್ರವಾದ ಧಾರ್ಮಿಕ ಚಳವಳಿಯಲ್ಲವೆಂಬುದು ಈ ಧಾರ್ಮಿಕ ಇತಿಹಾಸದಿಂದ ತಿಳಿದುಬರುವುದು. ಈ ಹೊಸ ಭಕ್ತಿಪಂಥವಾದ ಗುರುಮಾರ್ಗದಲ್ಲಿ ದೇಹವೇ ದೇವಾಲಯುವಾಯಿತು

## ಶಿವಲಿಂಗ ಸ್ಥಾಪನೆಯ ಉದ್ದೇಶ–ಪರೋಕ್ಷ ವಿನಯಕ್ಕಾಗಿ

(೧) **ಗುರುಗಳ ಹೆಸರಿನಲ್ಲಿ:—** ಶಿವಾಲಯುಗಳನ್ನು ಕಟ್ಟಿಸುವುದು, ಲಿಂಗವನ್ನು ಸ್ಥಾಪಿಸುವುದು ಪುಣ್ಯದ ಕಾರ್ಯವೆಂದು ಪ್ರಾಚೀನ ಕಾಲದಿಂದ ನಮ್ಮವರ ಭಾವನೆಯಿದ್ದುದು ಕಂಡುಬರುವುದು. ಕ್ರಿ. ಶ. ೨ನೆಯು ಶತಮಾನದಲ್ಲಿ ಉದಿತಾಚಾರ್ಯನೆಂಬ ಪಾಶುಪತಾಚಾರ್ಯನು ಗುರುಮಂದಿರದಲ್ಲಿ ಉಪಮಿತೇಶ್ವರ ಮತ್ತು ಕಪಿಲೇಶ್ವರ ಎಂಬ ಹೆಸರಿನಿಂದ ಲಿಂಗಸ್ಥಾಪನೆಗೈದಿರುವ ಸಂಗತಿ ಮಥುರೆಯು ಶಾಸನದಿಂದ ಗೊತ್ತಾಗುತ್ತದೆ. ಈ ಉಪಮಿತ ಮತ್ತು ಕಪಿಲ ಎಂಬ ಹೆಸರುಗಳು ಪಾಶುಪತಾಚಾರ್ಯರ ಗುರುಪರಂಪರೆಯುವಾಗಿವೆ. ಕನ್ನಡನಾಡಿನಲ್ಲಿ ಗುರುಗಳ ಹೆಸರಿನಿಂದ ಶಿವಲಿಂಗವನ್ನು ಪ್ರತಿಷ್ಠೆಗೈದದ್ದೂ ಕಂಡುಬರುವುದು.

" ಗುರುವಾಮಶಕ್ತಿ ದೇವರ।
ಪರೋಕ್ಷವಿನಯಕ್ಕೆ ರುದ್ರಶಕ್ತಿ ಮುನೀಶಂ॥
ಹರಲಿಂಗ ಸ್ಥಾಪನಮಂ।
ಧರೆ ಬಣ್ಣಿಸುವಂತು ಮಾಡಿದಂ ಪೊಂಬೊಲಲೊಳ್॥ "
ಅಂತುಪ್ರತಿಷ್ಠೆಯಂ ಮಾಡಿ ಕುಮಾರ ಬೊಂತೇಶ್ವರಮೆಂದುಪೆಸರಿಟ್ಟು.

(ಹೊಂಬಳ ಶಾಸನ. ಜಯಕರ್ನಾಟಕ ಸಂ. ೧೨, ಸಂಚಿಕೆ ೭)

ಕುಮಾರ ಬೊಂತೇಶ್ವರ ಎಂಬ ಹೆಸರಿನಿಂದ ಲಿಂಗಪ್ರತಿಷ್ಠೆ ಮಾಡಿದವನು ರುದ್ರಶಕ್ತಿದೇವನು. ಈ ರುದ್ರಶಕ್ತಿಯು ವಾಮಶಕ್ತಿಯ ಔರಸ ಪುತ್ರನು; ಹಿರಿಯ ಮಗನು. ಈ ವಾಮಶಕ್ತಿಯು ಕಂಥಾಚಾರ್ಯನಾಗಿದ್ದನು. ಇವನ ವಿಷಯದಲ್ಲಿ—

"ವಾಮಶಕ್ತಿ— ವ್ರತಿಪತಿ —ತನುಜಂ ರುದ್ರಶಕ್ತಿವ್ರತೀಂದ್ರಂ", "ಜಂಗಮರುದ್ರನುರ್ವರೆಯೊಳ್ ರುದ್ರಶಕ್ತಿಗಳ್" ಎಂದಿರುವುದರಿಂದಲೂ, ಪೂರ್ವಜ ಮೂಲಪುರುಷನಿಗೆ "ಬೊಂತೆಯ ಮುನಿ ಕಾಲಮುಖ ಮುನೀಶ್ವರನು", "ಲಕುಲೀಶ್ವರಾಪರನಾಮಧೇಯನೆನಿಸಿದ ಮಹಾನುಭಾವಂ", ಎಂದಿರುವುರಿಂದಲೂ 'ಬೆಳ್ಳಿಯ ಸಂತಾನ'ದವರಾದ ಇವರೆಲ್ಲರೂ ಕಾಳಾಮುಖರೇ ಆಗಿರುವರು.

ಮತ್ತೊಂದು ಶಾಸನದಲ್ಲಿ --

ಸೀಡಿರದೆ ಗುರು ಪರೋಕ್ಷದೆ।
ಮಾಡಿಸಿದಂ ಗಂಗರಾಶಿ ಬಾಪ್ಪುಮಾಳಯುತೆ ಣೀ॥
ನೀಡಂ ಸಂಜೀರ್ಣ ಭೈರವ।
ನೀಡಮುಮಂ ಗುಪೆಯ ದೇವತಾಭವನಮುಮಂ॥
ಪರಮತಪೋಧನ ಭಕ್ತಂ।
ಗುರುಭಕ್ತಂ ದೇವಭಕ್ತನತಿಶಯಮಹಾಹೇ॥
ಶ್ವರಭಕ್ತನೆಂದೆ ಪೊಗಳ್ಗುರ।
ನಿರಂತರಂ ಧರಣಿ ಗಂಗರಾಶಿವ್ರತಿಪತಿಯುಂ॥

(ಚಿತ್ರದುರ್ಗ ನಂ. ೬೫; ಕ್ರಿ. ಶ. ೧೦೬೫)

ತಪೋಧನಭಕ್ತ, ಗುರುಭಕ್ತ, ಮಹೇಶ್ವರಭಕ್ತನಾದ ಗಂಗರಾಶಿ ವ್ರತಿಪತಿಯು ಪರೋಕ್ಷದೆ ಭೈರವಸೀಡಮುಂ, ದೇವತಾಭವನಮುಂ ಮಾಡಿಸಿದನೆಂದು ವರ್ಣಿಸಲಾಗಿದೆ. "ಲಿಂಗಪ್ರತಿಷ್ಠೇನ ಸರ್ವದೇವತಾ ಪ್ರತಿಷ್ಠಿತಾ" ಎಂಬ "ಶಿವಧರ್ಮೋತ್ತರದಲ್ಲಿಯ ಲಿಂಗಪ್ರತಿಷ್ಠೆ" ಮಹಾತ್ಮೆಗನುಸರಿಸಿ ಈ ವ್ರತಿಗಳು ದೇವತಾ ಪ್ರತಿಷ್ಠೆಯನ್ನು ಮಾಡಿರುವರು. ಅದರಂತೆ ತಪೋಧನ, ಗುರು, ದೇವ, ಮಾಹೇಶ್ವರರಲ್ಲಿ ಭಕ್ತಿಯುಳ್ಳವರಾಗಿದ್ದು ತಮ್ಮ ಗುರುಗಳ ಹೆಸರಿನಿಂದ ಲಿಂಗಪ್ರತಿಷ್ಠೆ ಮಾಡಿ ದೇವಾಲಯಗಳನ್ನು ಕಟ್ಟಿಸಿದ ಉದಾಹರಣೆಗಳಿವೆ.

(೨) **ತನ್ನ ಹೆಸರಿನ ಶಿವಾಲಯಗಳನ್ನು ಕಟ್ಟಿಸುವುದು.**— ಬಾದಾಮಿಯ ಚಾಳುಕ್ಯ ಮಂಗಳೇಶನ ಕಾಲದಲ್ಲಿ, ಅರಸನ ಅಪ್ಪಣೆಯನ್ನು ಪಡೆದು, ಮಂಗಳೇಶನ ತಂದೆಯ ಹೆಂಡತಿಯಾದ ದುರ್ಲಭದೇವಿಯು ಮಹಾಕೂಟೇಶ್ವರ ದೇವಾಲಯಕ್ಕೆ, ಕಿಸುವೊಳಲ್ ಮುಂತಾದ ಹತ್ತು ಗ್ರಾಮಗಳನ್ನು ಕೊಟ್ಟು ಅದರ ಉಂಬಳಿಯನ್ನು ಹೆಚ್ಚಿಸಿರುವಳು. ವಿಜಯಾದಿತ್ಯನ (ಕ್ರಿ. ಶ. ೬೯೬–೭೩೩) ಸೂಳೆಯು ವಿನೋಪೋಟಿಯೆಂಬಳು ಅದೇ ದೇವರಿಗಾಗಿ ಮಾಣಿಕ್ಯದ ಪೀಠ, ಛತ್ರಿಕೆಗಳನ್ನೂ, ಹೊಲಗಳನ್ನೂ ಕೊಟ್ಟಿರುವಳು ಚಾಳುಕ್ಯವಿಜಯಾದಿತ್ಯ ಸತ್ಯಾಶ್ರಯನು ತನ್ನ ಹೆಸರಿನ "ವಿಜಯೇಶ್ವರ" ಎಂಬ ದೇಗುಲವನ್ನು ಕಟ್ಟಿಸಿದನು. ಅದಕ್ಕೆ ಈಗ ಸಂಗಮೇಶ್ವರ ಎಂದು ಹೆಸರು. ಅದರಂತೆ ಎರಡನೇ ವಿಕ್ರಮಾದಿತ್ಯನ ಹೆಂಡಂದಿರಾದ ಇಬ್ಬರು ಅಕ್ಕತಂಗಿಯರು ತಮ್ಮ ತಮ್ಮ ಹೆಸರಿನಲ್ಲಿ ದೇವಾಲಯಗಳನ್ನು — ಲೋಕಮಹಾದೇವಿಯು ಲೋಕೇಶ್ವರವನ್ನೂ, ಅವಳ ತಂಗಿಯಾದ ತ್ರೈಲೋಕಮಹಾದೇವಿಯು ತ್ರೈಲೋಕೇಶ್ವರವನ್ನೂ — ಕಟ್ಟಿಸಿರುವರು. ಲೋಕೇಶ್ವರ ದೇಗುಲವೇ ಈಗಿನ ವಿರೂಪಾಕ್ಷನ ಗುಡಿಯು. ತ್ರೈಲೋಕೇಶ್ವರಕ್ಕೆ ಮಲ್ಲಿಕಾರ್ಜುನನ ಗುಡಿಯೆಂಬ ಹೆಸರು ಈಗ ರೂಢಿಯಿದೆ. ಅದೇ ಕಾಲದಲ್ಲಿ ಶುಭದೇವ ಎಂಬ ಸ್ತಂಭವನ್ನು ಗಂಗಾತಟಾಕದಿಂದ ಬಂದ ಜ್ಞಾನಶಿವನೆಂಬ ಆಚಾರ್ಯನಿಗಾಗಿ ಕಟ್ಟಿಸಲಾಗಿದೆ (ಕ್ರಿ. ಶ ೭೫೪). ಫಲಬ್ಬೆ ಎಂಬ ಸೂಳೆಯು ಸ್ತಂಭವನ್ನು ಕಟ್ಟಿಸಿರುವಳು. ಇವುಗಳಂತೆ ಪಲ್ಲವ ರಾಜನ ಮಗನಾದ ಪಲ್ಲವಮಲ್ಲನ ಹೆಂಡತಿ ಗವಣಗಬ್ಬೆಯು ಶಿವಾಲಯವನ್ನು ಕಟ್ಟಿಸಿ ಗವಣೇಶ್ವರ ಎಂದು ಹೆಸರಿಟ್ಟಿರುವಳು ( ಚೆಳ್ಳಕೆರೆ ನಂ. ೩೪ ಕ್ರಿ ಶ. ೮೧೫ ). ಮಂಗನಾಯಕನು ತನ್ನ ಹೆಸರಿನಲ್ಲಿ ಬ್ರಹ್ಮೇಶ್ವರ ದೇವರ ಪ್ರತಿಷ್ಠೆಯನ್ನು ಮಾಡಿಸಿದನು (ಚಿತ್ರದುರ್ಗ ನಂ ೫೯ ಕ್ರಿ ಶ. ೧೧೦೦) ಆರನೇ ವಿಕ್ರಮಾಂಕನ ಮಹಾದೇವ ದಂಡನಾಯಕನು ತನ್ನ ಹೆಸರಿನಿಂದ ಇಟ್ಟಗಿಯ ಪ್ರಸಿದ್ಧ 'ದೇವಾಲಯ ಚಕ್ರವರ್ತಿ' ಯನ್ನು ಕಟ್ಟಿಸಿದನು (ಕ್ರಿ. ಶ ೧೧೧೨). ಮಹಾಪ್ರಧಾನಿ ಬೋಕಿಮಯ್ಯನ ಕಾಲದಲ್ಲಿ, ಬೋಕಿಮಯ್ಯನ ಮಗನು ತನ್ನ ಹೆಸರಿನಲ್ಲಿ ಎಱಂಗೇಶ್ವರವನ್ನೂ (ಹಾಸನ ನಂ ೬೯, ಕ್ರಿ.ಶ ೧೧೫೫), ವೀರನಾರಸಿಂಹ ಬಲ್ಲಾಳನ ಕಾಲದಲ್ಲಿ ಕರಣಿಕಾಗ್ರಣಿ ನಾಕಮಯ್ಯನು ನಾಕೇಶ್ವರವನ್ನೂ, ಅವನ ತಂದೆ ಗೋವಿಂದನು ಗೋವಿಂದೇಶ್ವರವನ್ನೂ ಕಟ್ಟಿಸಿರುವರು ಇನ್ನೂ ಇಂತಹ ಅನೇಕ ಉದಾಹರಣೆಗಳಿವೆ.

(೩) **ಮಾತಾಪಿತೃಗಳಿಗೆ ಶ್ರೇಯಸ್ಸಾಗಲೆಂದು ಲಿಂಗಸ್ಥಾಪನೆ—** ಮಾನ್ಯಖೇಟ ಪುರವರಾಧೀಶ್ವರ ಮರಗೂರುನಾಡಾಳ್ವಸಾಮಂತ ಬಾಚಿಯು ತನ್ನ ತಂದೆ, ತಾಯಿ, ಅಕ್ಕ ಮುಂತಾದವರ ಹೆಸರಿನ ಗಂಗೇಶ್ವರ, ಚಲ ವೇಶ್ವರ, ರಾಮೇಶ್ವರ, ನಾರಾಯಣನ ಗೃಹಗಳನ್ನು ಕಟ್ಟಿಸಿದನು. (ತುಮ ಕೂರು ಶಾಸನ ಕ್ರಿ. ಶ. ೧೧೫೧). ಮಹಾಸಾಮಂತ ಉತ್ತಮ ಚೋಳನ ಮಗನು ತಮ್ಮಯ್ಯನ ಹೆಸರಿನಲ್ಲಿ ಚೋಳೇಶ್ವರ ದೇವರ ಪ್ರತಿಷ್ಠೆಯನ್ನೂ, (ತಿಪಟೂರ ನಂ ೬೧), ಮಾದಿಗಾವುಂಡನು ಮಾತಾಪಿತೃಗಳ ಶ್ರೇಯಸ್ಸು ಅಹಂತಾಗಿ ಏಚೇಶ್ವರ ದೇವರ ಪ್ರತಿಷ್ಠೆಯನ್ನೂ (ಅರಸಿಕೆರೆ ನಂ ೧೬; ಕ್ರಿ.ಶ. ೧೨೦೭), ನೆಲ್ಲಿಸೆಟ್ಟಿಯ ಮಗಳು ತಮ್ಮ ಅಯ್ಯೂರು ಅಯ್ಯಾವಳಿಯ ತಮ್ಮ ತಂದೆಯ ಹೆಸರಿನಲ್ಲಿ ದೇವೇಶ್ವರವನ್ನೂ (ಹೊಳಲ್ಕೆರೆ ನಂ ೧೨೪), ಸೇವಂಣನವರು ತಮ್ಮ ತಾಯಿ ಮಂಚವ್ವೆಯ ಶ್ರೇಯಸ್ಸಿಗಾಗಿ ಮಂಚೇಶ್ವ ರವೆಂಬ ಶಿವಲಿಂಗ ಪ್ರತಿಷ್ಠೆಯನ್ನೂ ಕೆರೆಯನ್ನೂ (ಚಿತ್ರದುರ್ಗ ನಂ ೪, ೧೩೫೬) ಕಟ್ಟಿಸಿರುವರು. ಇದರಂತೆ ಸೋಬೆನಾಯಕನು ತಮ್ಮ ತಂದೆಯ ಹೆಸರಿನಲ್ಲಿ ಬುವ್ವೇಶ್ವರ ದೇವರನ್ನು ಪ್ರತಿಷ್ಠಿಸಿ ಕೆರೆಯನ್ನು ಕಟ್ಟಿಸಿದನು. (ದಾವಣಗೇರೆ ನಂ ೧೨೦; ೧೩೬೦). ಬೊಪ್ಪಿಸೆಟ್ಟಿ ಸಾಂತರಯ್ಯ ತಳ್ತಿಱಿದು ಸುರಲೋಕ ಪ್ರಾಪ್ತನಾದ. ಸಾಂತಯ್ಯ ಚಿಕ್ಕೇಶ್ವರ ದೇವರ ಪ್ರತಿಷ್ಠೆಯನ್ನು ಮಾಡಿಸಿ ದೇವಾಲಯವನ್ನು ಕಟ್ಟಿಸಿದ (ಸೊರಬ ನಂ ೩೬೭) ಮಹಾ ಪ್ರಧಾನ ಕುಮಾರ ಪಂಡಿತಯ್ಯ ದಂಡನಾಯಕರ ಮಗ ಹೊದೆಯ ಬಿಟ್ಟಯ್ಯ ಮೂಲಸ್ಥಾನ ಕಲಿದೇವರನ್ನು ಸ್ಥಾಪಿಸಿ ಕೆರೆಯನ್ನು ಕಟ್ಟಿಸಿದನು (ಅರಸಿಕೆರೆ ನಂ. ೪೦; ೧೨೦೯). ಬಲ್ಲಪ ದಂಡನಾಯಕರು, ಸಿಂಗೆಯ ದಂಡನಾಯಕರು ತಮ್ಮ ತಂದೆ ಬೀಚದಂಡನಾಯಕನ ಹೆಸರಿನಲ್ಲಿ ಬೆಮ್ಮತ್ತೂ ರಿನಲ್ಲಿ ಲಿಂಗಪ್ರತಿಷ್ಠೆ ಮಾಡಿಸಿ ಬೆನ್ನಡೋಣಿಯನ್ನು ಕೊಟ್ಟರು (ಚಿತ್ರದುರ್ಗ ನಂ ೪; ೧೩೨೮). ಹೊನ್ನೆಗೌಡನು ತನ್ನತಂದೆಯ ಹೆಸರಿನ ಬಾಸೇಶ್ವರ ಎಂಬ ಗುಡಿಯನ್ನು ಕಟ್ಟಿಸಿದನು (ತುಮಕೂರು ನಂ ೩; ೧೧೬೦). ಈ ಪರಂಪ ರೆಯು ವಿಜಯನಗರದ ಅರಸರ ಕಾಲದವರೆಗೂ ನಡೆದುಬಂದಿದೆ.

(೪) **ಮಕ್ಕಳ ಪರೋಕ್ಷ ವಿನಯಕ್ಕಾಗಿ—** ಕೇತಯ್ಯ ನಾಯಕನ ಸತಿ ಜಕ್ಕಿಯಬ್ಬೆಯು ತನ್ನ ಮಗಳು, ಶಾಂತಳದೇವಿಯು ಸುರಲೋಕವ ನೆಯ್ದಲು ತನ್ನ ಮಗಳು ಮುಮ್ಮಗಳಿಗೆ ಪರೋಕ್ಷ ವಿನಯವಾಗಿ ಶಿವಗೃಹ, ವಿಷ್ಣುಗೃಹ, ಪ್ರತಿಷ್ಠೆಯನ್ನು ಮಾಡಿಸಿದಳು (ಹಾಸನ ನಂ. ೮೯; ೧೨೮೦).

(೫) **ದೇವಾಲಯಗಳ ಜೀರ್ಣೋದ್ಧಾರ**--ವಿಷ್ಣುವರ್ಧನನ ಪಟ್ಟದ ರಾಣಿ ಬಮ್ಮಲದೇವಿಯು ಶಂಕರನಾರಾಯಣ ದೇಗುಲವನ್ನು ಜೀರ್ಣೋದ್ಧಾರ ಮಾಡಿ, ಅರಿಕನಕಟ್ಟಮಂ ದೇವರ ಸ್ನಾನ, ನೈವೇದ್ಯ, ಅಂಗಭೋಗಕ್ಕೆಂದು ಸೂರ್ಯಾಭರಣ ಪಂಡಿತರ್ಗೆ ದತ್ತಿಯನ್ನು ಬಿಟ್ಟಿರುವಳು. (ನಾಗಮಂಗಲ ನಂ. ೩; ಕ್ರಿ. ಶ. ೧೧೩೫). ಹೊಯ್ಸಳ ನರಸಿಂಹನು ಮೊಯ್ದೇಶ್ವರ ದೇವರು ಶೂನ್ಯಸ್ಥವಾಗಿದ್ದುದಂ ಕಂಡು, ಆ ದೇವರ ಜೀರ್ಣೋದ್ಧಾರಕ್ಕಂ ನಿವೇದ್ಯಕ್ಕಂ ಕ್ರಿಯಾಶಕ್ತಿ ಪಂಡಿತರ ಕಾಲಂಕರ್ಚಿ ಬಿಟ್ಟಧರ್ಮ (ಬೇಲೂರು ನಂ ೧೭೬; ಕ್ರಿ. ಶ. ೧೧೬೨). ಸೇನಬೋವ ಮಲ್ಲಯ್ಯ ಹೆಗ್ಗಡೆ ಪುರಾಣವನ್ನು ಕೇಳಿ, ರಾಮನಾಥದೇವರ ಜೀರ್ಣೋದ್ಧಾರ ಮಾಡಿಸಿದನು (ಸೊರಬ ನಂ ೩೦೦ ಕ್ರಿ ಶ ೧೨೫೩). ವೀರಪ್ರತಾಪ ವಿರೂಪಾಕ್ಷ ಮಹಾರಾಯರ ಕಾಲದಲ್ಲಿ ಮಹಾಸಾಮಂತ (ತಿ?) ಮ್ಮನಾಯಕನ ಪತ್ನಿ ಕಲ್ಲರಸಿಯಮ್ಮ ಸಿದ್ಧಮಲ್ಲಿಕಾರ್ಜುನ ದೇವಾಲಯವನ್ನು ಜೀರ್ಣೋದ್ಧಾರ ಮಾಡಿ ದಾನ ಕೊಟ್ಟಿರುವಳು. ತಾಯಿಯಲ್ಲಿ ಹತ್ತು, ತಂದೆಯಲ್ಲಿ ಹನ್ನೊಂದು, ಇಪ್ಪತ್ತೊಂದು ಮಾವನ ಬಂಧುಗಳೆಲ್ಲರೂ ಸಿದ್ಧಮಲ್ಲಿಕಾರ್ಜುನನ ಪಾದಪದ್ಮ ಸನ್ನಿಧಿಗಾಗಿ ಮರೆ ಪಡೆಯಬೇಕೆಂದು ಮಾಡಿದಂಥಾ ಧರ್ಮ (ಗುಬ್ಬಿ ನಂ. ೨೯ ಕ್ರಿ. ಶ. ೧೪೭೦). ಪೊಂಬಚ್ಚ ಸೋಮೆನಾಯಕನು ಕಮಟೇಶ್ವರ ದೇವರಿಗೆ ದೇವಾಲಯಮಂ ಪುನಃ ಕಟ್ಟಿಸಿದನು (ನಗರ ನಂ ೬೧, ಕ್ರಿ. ಶ. ೧೨೮೭).

(೬) **ಮಂಟಪವನ್ನು ಕಟ್ಟಿಸುವುದು**— ಮಹಾಪ್ರಧಾನಿ ಸಂಧಿವಿಗ್ರಹ ಸೋವಣ್ಣನವರು ಶ್ರೀ ಫಲಗುಣೇಶ್ವರ ದೇವರ ಮಂಟಪವನ್ನು ಮಾಡಿಸಿದನು. (ಚಿತ್ರದುರ್ಗ ನಂ ೧೧; ಕ್ರಿ. ಶ. ೧೨೬೦).

ಇದರಂತೆ ಕಳಸ ನಿರ್ಮಾಣ ಮಾಡಿಸಲಾಗಿದೆ (ಅರಸಿಕೆರೆ ನಂ ೩೪; ಕ್ರಿ. ಶ. ೧೧೦೦; ನಾಗಮಂಗಲ ಶಾಸನ; ಕ್ರಿ. ಶ. ೧೧೭೯). ಗೋಪುರವನ್ನು ಕಟ್ಟಿಸುವುದು (ಚಿತ್ರದುರ್ಗ ನಂ. ೨ ಕ್ರಿ. ಶ. ೧೩೫೬) ಪುಣ್ಯಕಾರ್ಯವೆಂದು ಕೈಕೊಳ್ಳಲಾಗಿದೆ. ಜವನೆಯ ಮಾವಂತನು ತನ್ನ ಮಾತಾಪಿತೃಗಳಿಗೆ ಶ್ರೇಯಸ್ಸು ಬಯಸಿ ವಿನಾಯಕನ ಪ್ರತಿಷ್ಠೆ ಮಾಡಿರುವನು (ಹಾಸನ). ಪೃಥ್ವಿಶೆಟ್ಟಿಯು ರಾಮಯ್ಯ ದೇವರ ಸನ್ನಿಧಿಯಲು ದೇವರ ಪಾದಕ್ಕೆ ಸಂದಿರಲು ಆತನ ಮಕ್ಕಳು **ವೃಷಭವನ್ನು** ಮಾಡಿಸಿ,

ಆ ದೇವರಿಗೆ ಅಮೃತಪಡಿ, ನಂದಾದೀಪ, **ಆಯಿವರ ಒಡೆಯರ ಸತ್ರಕ್ಕಾಗಿ** ದತ್ತಿಯನ್ನು ಬಿಟ್ಟಿರುವನು (ಸೊರಬ ನಂ. ೧೮; ೧೪೪೯).

(೭) **ಕುಂಭಪ್ರತಿಷ್ಠೆ ಮತ್ತು ಮಠವನ್ನು ಕಟ್ಟಿಸಿಕೊಡುವುದು**— ಮೇಲಿನ ಪರಂಪರೆಗನುಸರಿಸಿ, ಸಂತೆಯನ್ನು ನೆರೆಯಿಸುವಾಗ ಕುಂಭ ಪ್ರತಿಷ್ಠೆಯನ್ನು ಮಾಡಲಾಗಿದೆ(ದಾವಣಗೇರಿ ನಂ ೧೦೦; ಕ್ರಿ. ಶ. ೧೨೧೮). ಅದರಂತೆ ಮುಂದಿನ ಕಾಲದಲ್ಲಿ ಕೆಳದಿ ಸೋಮಶೇಖರ ನಾಯಕನು ಮುರಿಗೆ ಸಾಂಪ್ರದಾಯದ ಶಾಂತವೀರ ಸ್ವಾಮಿಗಳಿಗೆ ಮಠವನ್ನು ಕಟ್ಟಿಸಿ ಕೊಟ್ಟು ಧರ್ಮಕಾರ್ಯ ಮಾಡಿರುವನು (ನಗರ ನಂ ೩೩; ೧೭೪೧). ಕರೆಯಪ್ಪಗೌಡನು ಶಿವಪೂಜೆಯ ಮುಟ್ಟಿನಯ್ಯಗೆ ಮಠವನ್ನು ಕಟ್ಟಿಸಿದನು (ಸೊರಬ ನಂ ೩೭೦). ಈ ಪದ್ಧತಿಯು ಇಂದಿಗೂ ಅಲ್ಲಲ್ಲಿ ಕಂಡು ಬರುತ್ತದೆ.

(೮) **ಶುಭಾ-ಶುಭ ಪ್ರಸಂಗಗಳ ನಿಮಿತ್ತ**—ಯಾದವ ರಾಮಚಂದ್ರ ರಾಯನಿಗೆ ಪುತ್ರೋತ್ಸವವಾದ ಸಂಗತಿಯಿಂದ ಸಂತೋಷಗೊಂಡು, ಆತನ ಮಾಂಡಲಿಕನು ಕಲಿದೇವರ ಆಸ್ಥಾನಿಕರಿಗೆ ಭೂಮಿಯನ್ನು ಕೊಟ್ಟು ಧರ್ಮ ಮಾಡಿದನು (ಜಗಳೂರು ನಂ ೩೦; ಕ್ರಿ. ಶ. ೧೨೭೯). ವೀರ ಪ್ರತಾಪ ದೇವರಾಯನ ಮಗ ವೀರ ಮಲ್ಲಂಣೊಡೆಯರು ತಮ್ಮ ತಾಯಿ ಮಲ್ಲವ್ವೆಗೆ ಸುಕೃತವಾಗಬೇಕೆಂದು ಹಿಡಂಬನಾಥದೇವರ ಅಂಗಭೋಗ ಕ್ಕಾಗಿ ಅಲ್ಲಿಯ ಸ್ಥಾನಿಕರಾದ ಇಡುಬಜೀಯ, **ಸಿರಿಗಿರಿಜೀಯರು** ಆಶೀ ರ್ವಾದ ಮಾಡಿ ಭೋಗಿಸುವಂತೆ ದಾನಮಾಡಿರುವನು(ಚಿತ್ರದುರ್ಗ ನಂ.೧೪ ೧೪೧೧). ಜೀಯರು ಕೂಡ ತಮ್ಮ ತಂದೆತಾಯಿಗಳ ಪರೋಕ್ಷ ವಿನಯ ಕ್ಕೆಂದು ಧರ್ಮವನ್ನು ಮಾಡಿರುವರು (ಅರಸಿಕೆರೆ ನಂ ೧೮). ಸ್ವಾಮಿ ಸೇವೆಗಾಗಿ ಸ್ವರ್ಗಸ್ಥನಾಗಲು ಆತನಿಗೆ ಪುಣ್ಯವಾಗಬೇಕೆಂದು ಸೋಮೆ ಗೌಡನ ಹೆಸರಿನಿಂದ ಸೋಮಪುರವೆಂದು ಹೆಸರಿಟ್ಟು, ಸಿದ್ಧಯ್ಯ, ಬಸವ ರಾಜ ದೇವರಿಗೆ ಕೊಡಲಾಗಿದೆ (ಮದ್ದಗಿರಿ ನಂ. ೩೩; ೧೪೯೭). ಅಮವಾಸೆ ಸೋಮವಾರ ಬಂದುದಕ್ಕಾಗಿ ತನಗೆ ಗತಿಯಾಗಬೇಕೆಂದು ಮೀರಾಸಿ ಮಠದ ಕಂಥೆ ಒಡೆಯರಿಗೆ ಗ್ರಾಮವನ್ನು ಕೊಟ್ಟು, ಶ್ರೇಯಸ್ಸು ಆಗುವಂತೆ, ಲಿಂಗಪೂಜೆ ಮಾಡಬೇಕೆಂದು ದತ್ತಿಯನ್ನು ಬಿಡಲಾಗಿದೆ (ಸೊರಬ ಶಾಸನ-೧೭೭೫).

ಕ್ರಿ. ಶ. ಆರು ಏಳನೆಯ ಶತಮಾನದಿಂದ ಹದಿನೇಳನೆಯ ಶತಮಾನದವರೆಗೆ, ಈ ತರದ ಧಾರ್ಮಿಕ ಮನೋವೃತ್ತಿಯು ಕನ್ನಡ ಜನಾಂಗದಲ್ಲಿ ಹಾಸುಹೊಕ್ಕಾಗಿ ನಡೆದುಬಂದದ್ದು ಶಾಸನಗಳಿಂದ ತಿಳಿದು ಬರುತ್ತದೆ.

ಸತ್ತವರ ಸಮಾಧಿಯ ಮೇಲೆ ಸ್ಥಾವರಲಿಂಗ ಪ್ರತಿಷ್ಠಿಸುವ ರೂಢಿಯಿತ್ತೆಂದೂ, ಇಷ್ಟಲಿಂಗಧಾರಣೆಯು ಈ ಪದ್ಧತಿಯನ್ನು ಕಿತ್ತುಹಾಕಿತೆಂದೂ, ಹೇಳುವ ಅಕುಲಯ್ಯ ಮುಂತಾದವರ ಪ್ರತಿಪಾದನೆಯು ಶಾಸನ ಸಮ್ಮತವಲ್ಲದ ಮಾತು. ಸಮಾಧಿಗಳ ಮೇಲೆ ವೃಷಭ ಪ್ರತಿಷ್ಠೆಯಾದದ್ದು ಇತ್ತೀಚಿನ ಶಾಸನಗಳಿಂದ ವ್ಯಕ್ತವಾಗುವುದು. ಆದರೆ ದೇವಾಲಯಗಳಲ್ಲಿ ಲಿಂಗಪ್ರತಿಷ್ಠೆಯ ಕಾರ್ಯದಿಂದ ಸಕಲ ದೇವತೆಗಳನ್ನು ಪ್ರತಿಷ್ಠಿಸಿದ ಪುಣ್ಯಫಲ ದೊರೆಯುವುದೆಂಬ ಪುರಾಣೋಕ್ತ ಭಾವನೆಯು ಶಾಸನಗಳಲ್ಲೂ ದೊರೆಯುತ್ತಿದೆ. ಆಧುನಿಕರ ಇಂಥ ಪ್ರತಿಪಾದನೆಯು ಇತಿಹಾಸದ ಒರೆಗಲ್ಲಿಗೆ ಸಿಲ್ಲುವುದಿಲ್ಲವಷ್ಟೇ.

## ದೇವಾಲಯಗಳು ಸಾಂಸ್ಕೃತಿಕ ಸಾಮಾಜಿಕ ಸಂಸ್ಥೆಗಳು.

“ಲಿಂಗಪ್ರತಿಷ್ಠೇನ ಸರ್ವದೇವತಾ ಪ್ರತಿಷ್ಠಿತಾ” ಎಂಬ ಶ್ರುತಿವಾಕ್ಯವನ್ನು ಕೋಡಿಮಠದ ವಾಮಶಕ್ತಿಮುನಿಯು ಹೇಳಿದ್ದುದು, ಆಗಿನ ಕಾಲದ ಜನರ ಧಾರ್ಮಿಕ ಭಾವನೆಯ ಸೂತ್ರವಾಕ್ಯವು. ಶಿವ, ವಿಷ್ಣು, ವಿನಾಯಕ, ಸೂರ್ಯ ಮುಂತಾದ ದೇವತೆಗಳಿಗಾಗಿ ಆಲಯಗಳನ್ನು ಕಟ್ಟಿಸಿ, ದೇವತೆಗಳನ್ನು ಪ್ರತಿಷ್ಠಿಸಿ ಅವುಗಳ ಪೂಜೆ ಮುಂತಾದ ಕಾರ್ಯಗಳು ಸರಿಯಾಗಿ ನಡೆಯುವಂತೆ ವ್ಯವಸ್ಥೆ ಮಾಡಲಾಗುತ್ತಿತ್ತು. ಶಾಸನಗಳನ್ನು ವಿಮರ್ಶಾಪೂರ್ವಕವಾಗಿ ಪರಿಶೀಲಿಸಿದರೆ, ಹಾಸನ ಜಿಲ್ಲೆಯಲ್ಲಿ ಒಟ್ಟಾಗಿ ಎಂಭತ್ತುನಾಲ್ಕು, ಚಿತ್ರದುರ್ಗ ಜಿಲ್ಲೆಯಲ್ಲಿ ನಾಲ್ವತ್ತೆಂಟು, ತುಮಕೂರ ಜಿಲ್ಲೆಯಲ್ಲಿ ನಾಲ್ವತ್ತುಮೂರು, ಬರೇ ಶಿವಾಲಯಗಳನ್ನು ಕಟ್ಟಿಸಿದ್ದುದು ನಮಗೆ ತಿಳಿದುಬರುತ್ತದೆ. ಇತರ ಕನ್ನಡ ಜಿಲ್ಲೆಗಳಲ್ಲಿಯೂ ಸ್ವಲ್ಪ ಹೆಚ್ಚುಕಡಿಮೆ ಇದೇ ರೀತಿ ಇದ್ದುದಾಗಿ ತಿಳಿಯಬಹುದಾಗಿದೆ.

ಮಾದರಿಗಾಗಿ ಸಾಹಿತ್ಯ ಪರಿಷತ್ ಪತ್ರಿಕೆ (ಜನೆವರಿ ೧೯೩೫) ಯಲ್ಲಿ ಪ್ರಕಟವಾದ ಸೂಡಿಯ ಶಾಸನವನ್ನು ತಕ್ಕೊಳ್ಳೋಣ.

" ಶ್ರೀಮತ್ತ್ರೈಲೋಕ್ಯಮಲ್ಲದೇವ ಪಾದಾಬ್ಜಭೃಂಗ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕಂ ಬಾಹತ್ತರನಿಯೋಗಿ ನಿವಹಾರಾಧ್ಯನುಂ ಶ್ರೀಮನ್ಮನೆವೆಗ್ಗಡೆದಂಡನಾಯಕಂ ನಾಗದೇವಯ್ಯಂ ಪುರವರದೊಳ್ ಸೂಡಿಯೊಳ್ ವಿಶ್ವಲೋಕೋತ್ತಮಂ ನಾಗೇಶ್ವರಂಗೆತ್ತಿಸಿದನಂತಯಾವಾಸಮಂ ॥

ನಾಡಾಡಿಯಲ್ಲದಂತಿರೆ ।
ಮಾಡಿಸಿದಂ ದೇವನಿಲಯದೆರಡುಂ ಕೆಲದೊಳ್ ॥
ಕೂಡೆ ಧವಳಾರಮಂ ಸುರ ।
ನೀಡಮಿವೆನೆ ಸೂಳೆಗೇರಿಯುಂ ಬುಧನಿಳಯಂ ॥

....................................................................

ಸೊಗಯಿಸುವ ಸೂಂಡಿಯೊಳ್ ಧರೆ ।
ಪೊಗಳೆ ಜಸಂ ನೆಗಳೆ ಪಾಳ್ಗಡಲಂ ಪೆಂಪಿಂ ॥
ಮಿಗಿಲೆನಿಪ ತಟಾಕಮನೊಸ ।
ದಗಳಿಸಿದಂ ರಾಯ ಮಂತ್ರಿ ಚೂಡಾರತ್ನಂ ॥

ಅಂತು ಮಾಡಿಸಿ ಶಕವರ್ಷ ೯೮೧ ನೆಯ ವಿಕಾರಿ ಸಂವತ್ಸರದ ಮಾಘ ಪುಣ್ಣಮೆಯ ಸೋಮವಾರದಂದು, ಶ್ರೀಮತ್ತ್ರೈಲೋಕ್ಯಮಲ್ಲ ದೇವರ್ ದಕ್ಷಿಣದಿಗ್ವಿಜಯಂ ಗೈದು ಚೋಳನಂ ಜಯಂಗೈದು ಮಗುಳ ಬಿಜಯಂ ಗೆಯ್ಯುತ್ತಂ, ಸಿಂದವಾಡಿ ನಾಡ ಬಳಿಯ ಗ್ರಾಮಂ ಪುಳಿಯಪ್ಪಣ ವೀಡಿನೊಳ್ ಸೋಮಗ್ರಹಣ ನಿಮಿತ್ತ ಧಾರಾಪೂರ್ವಕಪುರಸ್ಸರಂ ಕಿಸು ಕಾಡೆಪ್ಪತ್ತರ ಬಳಿಯ ಸಿವುಣೂರಂ ಸರ್ಬನಮಸ್ಯಮಾಗೆ ತಾಮ್ರಶಾಸನಮಂ ಚಕ್ರವರ್ತಿ ಕುಡೆ ಪಡೆದು, ರಾಜಧಾನಿ ಸೂಂಡಿಯ ನಗರೇಶ್ವರದ ಪ್ರತಿಬದ್ಧ ಮಾಗೆ, ನಾಗೇಶ್ವರದ ಸೋಮೇಶ್ವರ ಪಂಡಿತ ದೇವರ್ಗೆ," ............. ಈ ಸೋಮೇಶ್ವರ ಯತಿಪತಿಯು " ವೈಶೇಷಿಕ ಚೂಡಾರತ್ನ, ನೈಯಾಯಿಕ ಸರಸಿಜ ಮಾರ್ತಾಂಡ, ಸಾಂಖ್ಯ ಪ್ರಭಾವಾಧಿಕ ಶಬ್ದಜ್ಞಾನ ಪದ್ಮಾಸನ, ಮೀಮಾಂಸಕ ಗೋತ್ರತ್ರಾನಿ " ಎಂದು ಭೂಲೋಕದಲ್ಲಿ ವಿಖ್ಯಾತನಾಗಿ ದ್ದನು. ಯಾವ ಯಾವ ಕಾರ್ಯಗಳಿಗಾಗಿ ಕೊಡಲ್ಪಟ್ಟಿತೆಂಬುದನ್ನು ಈ ಕೆಳಗಿನ ಪದ್ಯದಲ್ಲಿ ಹೇಳಲಾಗಿದೆ.

" ಶಿವಗೇಹವ್ಯೂಹ-ಖಂಡಸ್ಫುಟಿತ-ನವಸುಧಾಕರ್ಮ
ನಿರ್ವಾಪಣಕ್ಕಂ ।
ಶಿವಪೂಜಾವ್ಯಾಪ್ತಿಗಂ ತಚ್ಛಿವಮಹಿಮ ಮಹಾಭೋಗಸಂಪತ್ಪದಕ್ಕಂ॥
ಶಿವಯೋಗೀಂದ್ರಬ್ರಜಕ್ಕಂ ಶಿವಪದಯುಗಳಾನಮ್ರ
ವಿದ್ಯಾರ್ಥಿಗಳ್ಗಂ ।
ಸಿವುಣೂರಂ ಕೊಟ್ಟನೇಂ ಪುಣ್ಯದ ಕಣಿಯೊ ಜಗಚ್ಚಕ್ರದೊಳ್
ನಾಗದೇವಂ ॥ ೧೧ ॥

............ ಸೂಂಡೀಪುರದೊಳೆಸೆವ ನಾಗೇಶ್ವರಾವಾಸಮಂ ಮಾಡಿಸಿ ತದ್ದೇವಾದಿ ದೇವಂಗಳಿಕೆಯ ಸಿವುಣೂರಂ ಶಿಲಾಶಾಸನಮಂ ಮಾಡಿಸಿ ಬಿಟ್ಟಂ ದಂಡನಾಥಾಗ್ರಣಿ ನಾಗದೇವಂ "

(೧) ಶ್ರೀಮನ್ನಾಗದೇವೇಶ್ವರಕ್ಕಾಳ್ವ ದೇವಭೋಗಂ .......ಚತುಸ್ಸೀಮೆಯಿಂದೊಳಗುಳ್ಳ ಭೂಮಿಯೆಲ್ಲಮಂ ತೇವೃತ್ತಿ ಮಾಡಿ ಪಚ್ಚಿಕ್ಕಿದ ಸಮುಕಟ್ಟಿನೊಳ್ ದೇವರ್ಗೆ ಶ್ರೀಖಂಡಧೂಪ, ನಿವೇದ್ಯ, ಖಂಡಸ್ಫುಟಿತಕ್ಕೆ.... ... .......... .. ....... .. ... ...... ...............ಮತ್ತರ್ ೧೫೦

| | | | |
|---|---|---|---|
| (೨) | ಅಲ್ಲಿಯ ತಪೋಧನರಾಹಾರದಾನಕ್ಕೆ | ,, | ೩೦೦ |
| (೩) | ತಪೋಧನರಿಗೆ ವಖ್ಯಾಣಿಸುತ್ತಮಿರ್ಪ ಭಟ್ಟರ್ಗೆ | ,, | ೩೦ |
| (೪) | ಮಠದ ಮಾಣಿಯರನೋದಿಸುವ ಓಝುಗೆ | ,, | ೮ |
| (೫) | ಹೋಮಂಗೆಯ್ವ ಬ್ರಾಹ್ಮರಿರ್ಬರ್ಗಂ | ,, | ೮ |
| (೬) | ಘಳಿಗೆಯ ಮಾಣಿಯರ್ ನಾಲ್ವರ್ಗಂ | ,, | ೨೦ |
| (೭) | ನಾಗಗೊಂಡಕ್ಕೆ | ,, | ೨೦ |
| (೮) | ದೇವರ ಭೋಗಕ್ಕೆ ನಡೆವ ಪಿರಿಯರ ವಾಳಸೂಳೆಗೆ | ,, | ೨೦ |
| (೯) | ಪೆರ್ಗಡೆ ವಾಳಸೂಳೆಗೆ | ,, | ೧೫ |
| (೧೦) | ಬಲವಕ್ಕದೆಡವಕ್ಕದ ಕಂಬದ ಸೂಳೆಯರ್ ನಾಲ್ವರ್ಗಂ | ,, | ೪೮ |
| (೧೧) | ಬಲವಕ್ಕದೆಡವಕ್ಕದ ಚಾಮರದ ಸೂಳೆಯರ್ ನಾಲ್ವರ್ಗಂ | | ೪೮ |

(೧೨) ಪಾತ್ರದ ನಾಲ್ವರ್ಗಂ ಮತ್ತರ್ ೪೮
(೧೩) ಭೋಗದ ಸೂಳೆಯರಿರ್ಬರ್ಗಂ ,, ೨೪
(೧೪) ಪಱಿಕಾಱಂಗೆ ,, ೨೪
(೧೫) ವಂಶಿಗಂಗೆ ,, ೧೨
(೧೬) ಸೂಳೆವಾಳಂಗೆ ,, ೧೨
(೧೬) ಕಲ್ಕುಟಿಗ ಚಂದೋಜಂಗೆ ,, ೩೦

ಸಿವುಣೂರ ಮನ್ನೆಯ ಸಾಮ್ಯದ ತೆಱೆಯ ಮನ್ನೆಯಂ ದಡಿಗಯ್ಯಂ, ದೊಡ್ಡಯ್ಯಂ, ಅಜ್ಜಯ್ಯನಿಂತಿವರ್ಮೊದಲಾದ ಮನ್ನೆಯರೆಲ್ಲಂ ತಂತಮ್ಮ ಪುತ್ರಪೌತ್ರಿಕಂ ಶ್ರೀಮನ್ನಾಗೇಶ್ವರ ದೇವರ್ಗಾವ ಕಾಲಮುಂ ನಡೆಸು ವಂತಾಗಿರೆ ಸೋಮೇಶ್ವರ ಪಂಡಿತದೇವರ ಕಾಲಂ ಕರ್ಚಿ ಧಾರಪೂರ್ವಕಂ ಮಾಡಿ, ಮನ್ನೆಯ ಸಾಮ್ಯದ ತೆಱೆಯ ಪರಿಹಾರಮಾಗೆ ಬಿಟ್ಟರ್, ಇಂತೀ ಧರ್ಮಂ ಸೂಂಡಿಯಱುವರ್ಗಾವುಂಡಗಳುಮೆಣ್ಬರ್ ಸೆಟ್ಟಿಯರುಂ ಕೈಕೊಂಡು ಸ್ವಧರ್ಮದಿಂ ರಕ್ಷಿಸುತ್ತಮಿರ್ಪರ್,

ಗೊರವರ್ ಕಾಳಾಮುಖರ್ ನೆಯ್ಮಿಕರೆನಿಸದೊಡಂ ಭೋಗದೊಳ್
ಮೂಱು ಪೊತ್ತುಂ ।
ವರಕಾಂತಾಸಂಕುಳಂ ಬಂದಿರದೆ ತಡೆವಡಂ ವಿಶ್ವವಿದ್ಯಾರ್ಥಿಗಳ್ ಬಿ।
ತ್ತರದಿಂದಾ ಪೊತ್ತುವೋದುತ್ತಿರದೊಡಮಿರಿಸಲ್ಕಾಗದೆಂದುಂ
ವರಾಧೀ ।
ಶ್ವರರೆಂದೀ ಧರ್ಮಮಂ ನಿರ್ಮಿಸಿ ನಿಯಮಿಸಿದಂ ಸೂಂಡಿಯೊಳ್
ನಾಗದೇವಂ ॥ ೧೩ ॥

ವಚನ॥ ಇಂತೀ ಶಾಸನ ಮರ್ಯಾದೆಯ ಧರ್ಮಮಂ ಸ್ವಧರ್ಮದಿಂ ಪ್ರತಿಪಾಲಿಸಿದವರ್ಗೆ ಶ್ರೀ ಕುರುಕ್ಷೇತ್ರಂ, ಪ್ರಯಾಗ, ವಾರಣಾಸಿ, ಶ್ರೀಪರ್ಬತಂ, ಅರ್ಘ್ಯತೀರ್ಥಂಗಳೊಳ್ ಶತಕ್ರತುವುಂ ಅಶ್ವಮೇಧಂ ಗೆಯ್ದ ಫಲಮುಮೇಳ್ಕೋಟಿ ಕವಿಲೆಯ ಕೋಡುಂ ಕೊಳಗುಮಂ ಪೊನ್ನೊಳಂ ಪಂಚರತ್ನದೊಳಂ ಕಟ್ಟಿಸಿ ಚತುರ್ವೇದಿಗಳಪ್ಪೇಳ್ಕೋಟಿ ಬ್ರಾಹ್ಮಣರ್ಗಭಯ ಮುಖಗೊಟ್ಟ ಫಲಮುಮಾತೀರ್ಥಂಗಳೊಳೇೞ್ಕೋಟಿ ತಪಧನರ್ಗಾಚಂದ್ರಾ ರ್ಕತಾರಮನ್ನದಾನಮಿಕ್ಕಿದ ಫಲಮುಮಕ್ಕು. ಈ ಧರ್ಮಮನು. ಪೇಕ್ಷಿಸಿ ಕಿಡಿಸಿದವರ್ಗನಿತುಂ ತೀರ್ಥಂಗಳೊಳೇೞ್ಕೋಟಿ ಕವಿಲೆಯು. ಮೇೞ್ಕೋಟಿ ಬ್ರಾಹ್ಮಣರುಮೇೞ್ಕೋಟಿ ತಪೋಧನರುಮನಳಿದ ಪಾಪಂ ಸಾರ್ಗುಂ ॥

ಇದರಂತೆ " ತುಂಬಳ ಶ್ರೀ ಸ್ವಯಂಭು ದಕ್ಷಿಣ ಸೋಮೇಶ್ವರ ದೇವರ್ಗೆ ಮೋರಕಂಡಿಯ ಡವಕೇಶ್ವರದಾಚಾರ್ಯರ್ ಕಾಳಾಮುಖ ನಿರಂಜನ ಪಂಡಿತರ ಶಿಷ್ಯರನನ್ತಶಕ್ತಿ ಪಂಡಿತರ ಶಿಷ್ಯರ್ ಶ್ರೀಮತು,

| | | | |
|---|---|---|---|
| (೧) | ಚಂದ್ರಭೂಷಣ ಪಂಡಿತರ್ಗೆ ಧಾರಾಪೂರ್ವಕ | ಮತ್ತರು | ೨೫೦ |
| (೨) | ನಾರಾಯಣದೇವರ್ಗೆ ವಿದ್ಯಾದಾನಕ್ಕಂ | ,, | ೩೦ |
| (೩) | ಮನೆ ಒಂದು, (೪) ತೋಟ, (೫) ಗಾಣ | .... | .... |
| (೬) | ದೇವರಂಗಭೋಗಕ್ಕೆ | ,, | ೧೦ |
| (೭) | ಚೈತ್ರಕ್ಕೆ | ,, | ೧೦ |
| (೮) | ಪವಿತ್ರಕ್ಕೆ | ,, | ೧೦ |
| (೯) | ಪೂಜಾರಿಗೆ | ,, | ೧೦ |
| (೧೦) | ಘಳಿಗೆಯ ಮಾಣಿಯರ್ಗೆ | ,, | ೬ |
| (೧೧) | ಪಾಳವಿಗಂಗೆ | ,, | ೧೨ |
| (೧೨) | ಪಾತ್ರಕ್ಕೆ | ,, | ೧೨ |
| (೧೩) | ಪಾಡುವರ್ಗೆ | ,, | ೧೦ |
| (೧೪) | ವಂಸಕಾರಂಗೆ | ,, | ೫ |
| (೧೫) | ಪಡಿಯರಂಗೆ | ,, | ೫ |
| (೧೬) | ಮಾಲೆಗಾಱಂಗೆ | ,, | ೩ |
| (೧೭) | ಕುಂಬಾರಂಗೆ | ,, | ೨ |

(*South Indian Inscriptions, vol IX, No. 133*)

ಈ ರೀತಿಯಾಗಿ ಚಕ್ರವರ್ತಿ, ಮಾಂಡಳಿಕ ಅರಸು, ಸಾಮಂತರು, ಗ್ರಾಮಾಧಿಪತಿಗಳಾದ ಮನ್ನೆಯರು, ಕಾಳಾಮುಖಯತಿಗಳು, ಅವರ ಶಿಷ್ಯರು, ಶಿಷ್ಯರಿಗೆ ಪಾಠ ಹೇಳುವ ಅಧ್ಯಾಪಕ-ಭಟ್ಟರು, ಚಿಕ್ಕ ಬಾಲಕರಿಗೆ ಓದಿಸುವ ಓಝರು, ಹೋಮಮಾಡುವ ಬ್ರಾಹ್ಮಣರು, ವೇಳೆಯನ್ನು ಕಂಡುಹಿಡಿಯುವ ಘಳಿಗೆಯ ಬಟ್ಟಲವನ್ನು ನೋಡುವ ಜೋಯಿಸರ ಹುಡುಗರು, ಅಂಗಭೋಗ, ರಂಗಭೋಗದ ಕಾಲದಲ್ಲಿ ಸೇವೆಗಾಗಿ ಹಾಡುವ, ಚೌರಿಯನ್ನು ಬೀಸುವ, ಪಾತ್ರಮಾಡುವ ಎಡಬಲ ಕಂಬದ ಸೂಳೆಯರು, ಪೆರ್ಗಡೆಸೂಳೆ, ವಾದ್ಯಗಳನ್ನು ಬಾರಿಸುವವರು, ಅಡಿಗೆ

ಯನ್ನು ಮಾಡುವ ಬಾಣಸಿಗರು, ಗಾಣಿಗರು, ಕುಂಬಾರರು, ತೋಟ ಗಾರರು ಅಥವಾ ಮಾಲೆಗಾರರು, ಪರಿಚಾರಕರು, ಕಲ್ಲುಕುಟಿಗರು, ಕಂಚಗಾರರು, ಪೂಜಾರಿಗಳು, ಇಷ್ಟೆಲ್ಲ ನಿಯೋಗದ ಜನರ ಜೀವಿತದ ವ್ಯವಸ್ಥೆ ಮಾಡಲಾಗುತ್ತಿತ್ತು. ಹೊಂಡ, ಗೊರವವಾಡ ಅಥವಾ ಬುಧ ನಿಳಯ ಅಂದರೆ ಯತಿಗಳಿಗಾಗಿ ಇರಲು ಮಠ, ಸೂಳೆಯರಿಗಾಗಿ ಇರಲು ಮನೆಗಳು—ಗುಡಿಯ ಸಮೀಪದಲ್ಲಿಯೇ ಇವರು ಇರುವುದು ಆವಶ್ಯಕ—ಕಟ್ಟಿಸಲ್ಪಡುತ್ತಿದ್ದವು. ಲೆಕ್ಕಪತ್ರಕ್ಕಾಗಿ ಸೇನಬೋವನು ಇರುತ್ತಿದ್ದನು. ಈ ಜನರೆಲ್ಲರೂ ಬಿಡಿಬಿಡಿಯಾಗಿ, ಸಾಮುದಾಯಿಕವಾಗಿ ತಮ್ಮ ಕೆಲಸ ಕಾರ್ಯಗಳನ್ನು ಮಾಡುತ್ತ ಒಂದು ದೇವಾಲಯಕ್ಕೆ ಸಂಬಂಧಪಟ್ಟವರಾಗಿದ್ದರು. ಊರ ಮನ್ನೆಯರು, ಸೆಟ್ಟರು, ಅಗ್ರಹಾರದ ಬ್ರಾಹ್ಮಣರು—ಇವರು ಅಗ್ರಹಾರದ ಒಡೆಯರು,—ಅಗ್ರಹಾರದ ದೇವದತ್ತಿ ಸರಿಯಾಗಿ ನಡೆಯುತ್ತದೆಯೋ ಇಲ್ಲವೋ ಎಂಬುದನ್ನು ನೋಡಿಕೊಳ್ಳುತ್ತಿದ್ದರು. ಇದಲ್ಲದೆ ಉರವಲವನ್ನು ಒದಗಿಸುವವರ, ಕಸಗೂಡಿಸುವವರ ನಿರ್ದೇಶವಿಲ್ಲದಿದ್ದರೂ ಅವರು ಇದ್ದಿರಲೇಬೇಕು.

" ಸರ್ವಉಪಕಾರವಪ್ಪ ವ್ಯವಸಾಯಿಗಳೆನಿಸಿದ ಪೊಂಬುಚ್ ಬಡದರುವತೊಕ್ಕಲುಂ ಒಕ್ಕಲೊಂದು ಮೂಡಹೊಱ ಬಣ್ಣಿಗಗೊಳಗಮುಂ ಬಿಟ್ಟರ್। ಊರ ತಳವಾರನಾಯಕಂ ಮುಖ್ಯವಾಗಿಯಾಳಲೊಂದು ಹೊಱೆಯುಂ ಬಿಟ್ಟರು। ನಕರಂಗಳು ಚೈತ್ರದೊಳು ಹಾಗ ಪವಿತ್ರದಲು ಹಾಗ ಸತ್ತುಭತ್ತ, ದೇವರ ವೀಳೆಯಕ್ಕಂಗಡಿಯಲೊಂದಡಕೆ ಎರಡೆಲೆಯ ಬಿಟ್ಟರ್। ಹನ್ನವಣಿಗರು ಚೈತ್ರದಲು ಬೆಳೆವ ಪವಿತ್ರದಲು ಬೆಳೆಯುಂಬಿಟ್ಟರ್। ಕಂಚ ಗಾರರು ದೇವರುಪಕರಣಂಗಳೆಲ್ಲಮುಂ ಕೂಲಿಯ ಕೊಳ್ಳದೆ ಮಾಡಿಕುಡುವಂತಾಗಿ ಬಿಟ್ಟರ್। ಮಡಿವಳರೆಲ್ಲರುಂ ಒಕ್ಕಲೊಂದು ಹೊಱೆಯುಂ ಬಿಟ್ಟರು। ಕುಂಬಾರರೊಕ್ಕಲೊಂದು ಅವಗೆಗಲನಂ ಬಿಟ್ಟರು। ತೇಣಿಗರು ಚೈತ್ರದಲು ಹಾಗ, ಪವಿತ್ರದಲು ಹಾಗ, ಬಿಟ್ಟರು(ಹೊಂಬಳ ಶಾಸನ-ಜಯಕರ್ನಾಟಕ ಸಂಚಿಕೆ ೭, ಸಂಪುಟ ೧೨). " ಇಂತೀ ಜನರ ಸಂಬಂಧವು ಇರುತ್ತಿದ್ದಿತು. ದೇವಾಲಯವನ್ನು ಕಟ್ಟಿಸುವುದರ ಉಗಮವು ಧಾರ್ಮಿಕ ಭಾವನೆಯಲ್ಲಿ; ಆದರೆ ಅದೇ ದೇವಸ್ಥಾನವು ಒಂದು ದೊಡ್ಡ ಧಾರ್ಮಿಕ-ಸಾಮಾಜಿಕ ಸಂಸ್ಥೆಯಾಗಿ ಪರಿಣಮಿಸಿತು. ಅನೇಕ ಉದ್ಯೋಗದವರು ಒಂದೇ ಗುರಿಯಿಂದ, ಸಾಹಚರ್ಯದಿಂದ ಒಟ್ಟುಗೂಡಿ ಕಾರ್ಯ ಮಾಡುತ್ತಿರುವಾಗ ಅದೊಂದು ಸಂಸ್ಥೆಯ ರೂಪವನ್ನು ತಾಳಿತು. ಈ ಒಂದು ದೇವಾ

ಲಯ-ಸಂಸ್ಥೆಯಿಂದ ಅನೇಕ ಜನರು ಪರಸ್ಪರ ಸಂಬಂಧವುಳ್ಳವರಾಗಿ, ಒಟ್ಟಾಗಿ ಸಾಮಾಜಿಕ ಬಂಧನಕ್ಕೊಳಪಟ್ಟವರಾಗಿರುತ್ತಿದ್ದರು. ಇಂತಹ ಅನೇಕಾನೇಕ ದೇವಸ್ಥಾನಗಳು ದೇಶದಲ್ಲೆಲ್ಲ ಹರಡಿವೆಯಾಗಿ, ಅವೆಲ್ಲವು ಕಾಲಪರಿಮಿತಿಯಿಂದ ಕನ್ನಡನಾಡಿನ ಧಾರ್ಮಿಕ-ಸಾಮಾಜಿಕ ವಿಶಿಷ್ಟ ಸಂಸ್ಕೃತಿಯೇ ಆಗಿದೆ. ಇದಕ್ಕೆ ನಾವು ದೇವಾಲಯ ಸಂಸ್ಕೃತಿಯೆಂದು ಕರೆಯಬಹುದು. ದೇಶತಃ ಕಾಲತಃ ಈ ಸಂಸ್ಕೃತಿಯ ವ್ಯಾಪ್ತಿಯನ್ನೂ, ಅದರ ಪರಿಳಿತವನ್ನೂ, ಆ ಪರಿಳಿತದ ಕಾರಣಗಳನ್ನೂ ಕಂಡುಕೊಳ್ಳ ಬಹುದು. ಈ ಸಂಸ್ಕೃತಿಯ ಪರಂಪರೆಯು ಈಗಿನ— ಜನಾಂಗದವರಾದ ನಮ್ಮಲ್ಲಿ ಎಷ್ಟು ಉಳಿದಿದೆ ಎಂಬುದನ್ನೂ ತಿಳಿದುಕೊಳ್ಳಬಹುದು. ಏನಾ ದರೂ ವ್ಯತ್ಯಾಸವಾಗಿದ್ದರೆ ಅದು ಯಾವುದು. ಅದನ್ನೂ ಅದರ ಕಾರಣ ವನ್ನೂ ಅರಿತುಕೊಳ್ಳಬಹುದಾಗಿದೆ. ಆಗ ಮಾತ್ರ ನಮ್ಮ ನಾಡಿನ ಸಾಂಸ್ಕೃ ತಿಕ ಇತಿಹಾಸವು ಸಂಪೂರ್ಣವಾಗುವುದು.

ಅರಸರು, ಮನ್ನೆಯರು, ಮಂತ್ರಿಗಳು, ಇನ್ನಿತರರು ದೇವಾಲಯ ಕ್ಕಾಗಿ ಭೂಮಿಯನ್ನು ಕೊಡುತ್ತಿದ್ದಂತೆ ವ್ಯಾಪಾರಿಗಳು, ಸುಂಕಾಧಿಕಾರಿ ಗಳು ತಂತಮ್ಮ ಸರಕುಗಳ ಉತ್ಪನ್ನದ ಕೆಲಭಾಗವನ್ನು ದೇವಾಲಯಕ್ಕಾಗಿ ಕೊಡುತ್ತಿದ್ದರು.

ಅಗ್ರಹಾರದ ಬ್ರಾಹ್ಮಣರು— ಇವರಿಗೆ ಅಶೇಷ ಮಹಾಜನಗಳೆಂದು ಶಾಸನದಲ್ಲಿ ಬರುವುದು – ಮತ್ತು ಊರೊಡೆಯ ಕಾಳಿದಾಸ ದಂಡಾಧೀ ಶನು " ಅಭಿನವ ಸೋಮೇಶ್ವರ ದೇವಸ್ಥಾನದಾಚಾರ್ಯರಪ್ಪ ಕಾಶ್ಮೀರ ಸಂತಾನದ ಶ್ರೀಮಲ್ಲಿಕಾರ್ಜುನ ಪಂಡಿತರಿಗೆ, ಸೋಮೇಶ್ವರ ದೇವರಂಗ ಭೋಗಕ್ಕಂ ತಪೋಧನರಾಹಾರದಾನಕ್ಕಂ **ಮಾಟಕೂಟಕ್ಕಂ**"ಭೂಮಿಯನ್ನು ಕೊಟ್ಟಿರುವರಲ್ಲದೆ, ತೃಣ, ಕಾಷ್ಠ, ಶಾಕ, ಫಳ ಮೊದಲಾಗಿ ಬರ್ಪ ವಸ್ತು ವಿಗೆ ಸುಂಕಮಂ ಬಿಟ್ಟಿರುವರು. ಗವರೆಗಳು, " ಅಯ್ನೂರ್ವರುಮಿಂದಿ ನಲು ಪಣವೊಂದು ಧ್ರುವಮಾಗೆ ಪಸುಂಬೆಗೆ ಹಾಗವನೆಱಕದೆ ಕತ್ತೆಯಲ್ಲಿ ಬೇಳೆಯನಿತ್ತರ್॥ ಅಂಗಡಿಯೊಳು ಸೊಂಟಿಗೆ ಭತ್ತಂ ಗಾಣದೊಳೊಂದು ಸೊಂಟಿಗೆಣ್ಣೆಯನಿತ್ತರ್। ಪೆರ್ಜುಂಕದೊಡೆಯಿರ್ವರ ಸೋವಿಯಣ್ಣನುಂ, ಬೀರಣ್ಣನುಂ ದವಸದ ಸುಂಕಮನಿತ್ತರ್। ಪೆಸರುಪ್ಪುಗೋಧುವೆ ಮಿಸು ಪಳ್ಳಿಂಬಿವಱಪೇಱು ಮೂವತ್ತಕ್ಕೊಂದು, ದವಸಕ್ಕೆ ಇಪ್ಪತ್ತಕ್ಕೊಂದು

ಕೊಟ್ಟರು। ಪತ್ತಿಯು ಮಳವೆಗಳೊಳು ನಾಲ್ವತ್ತೆಕ್ಕೊಂದಂತೆ, ಮರದ ತಪ್ಪಕ್ಕಂ ನಾಲ್ವತ್ತೆಕ್ಕೊಂದಂ ಕೊಟ್ಟರ್। ಕಿಱುಪತಿರ್ ಗ್ರಾಮದಿಂ ಪೊರ ಮಡುತಂ ಪುಗುತಮಿರ್ಪ್ಪ ಧಾನ್ಯಕ್ಕೆಲ್ಲಾ ಸುಂಕಮುಂ ಇತ್ತರ್। ಎಡಕೆಯೆಲೆ ನಾಲ್ವತ್ತು ಪೇರೊಳೊಂದು ಇತ್ತರ್। ”

(*South Indian Inscriptions vol IX*, ಕುರವಟ್ಟಿಹಳ್ಳಿ ತಾಲೂಕ *No·165*)

ಬಾಗಲಿಯೆಂಬ ಊರ ಅಗ್ರಹಾರದ ಪನ್ನಾಯದ ಅಧಿಷ್ಠಾಯನಾದ ಮದ್ದರಸ ದಂಡನಾಯಕನು, "ಮಹಾಜನ ಐವದಿಂಬರ ಸನ್ನಿಧಾನದೊಳ್, ಸ್ವಯಂಭೂ ಕಲಿದೇವರಸ್ವಾಮಿ ದೇವರ ನಿವೇದ್ಯ ನಂದಾದೀವಿಗೆಗಂ ತಿಂಗಳಿಗೆ ಎರಡೆಲೆಯ ಹೇರಿನ ಸುಂಕ ಪನ್ನೆರಡು ಧಾರಾಪೂರ್ವಕವಾಗಿ ಬಿಟ್ಟನು. ಸೆಟ್ಟಿಗಳು ಕಲಿದೇವಸ್ವಾಮಿಯಗ್ರಾಸನದ ಬ್ರಾಹ್ಮಣರ ಸತ್ರಕ್ಕೆ ಎಲೆಯ ಪೇರಿಂಗೆ ವೀಸಂ ಬಿಟ್ಟರ್। ”

(ಬಾಗಲಿ, ಹರಪನಹಳ್ಳಿ ತಾಲೂಕ, *No· 168·—S·I· Inscriptions Madras*)

ಅದೇ ಬಾಗಲಿ ೮೦ನೇ ನಂಬರಿನ ಶಾಸನದಲ್ಲಿ "ಕಲಿದೇವಸ್ವಾಮಿಯ ದೇವರಿಗೆ, ದೇವರ ನಿವೇದ್ಯ, ನಂದಾದೀವಿಗೆಗೆ, ತಪೋಧನರ ಸತ್ರಕ್ಕಂ, ಪನ್ನಿರ್ವ್ವರ್ ಸೂಳೆಯರ್ಗ್ಗೆ, ಸೂಳೆವಳಗಗಂ, ವಂಚಿಗಂ, ಪಱಿಕಾಱರ್ಗಂ, ಪಾತ್ರಕ್ಕಂ, ದೇಶಿಗರ ಛಾತ್ರ ಭೋಜನಕ್ಕಂ, ಸೋಮಸಿಂಗ ಭಟಾರರ ಕಾಲಂ ಕರ್ಚಿ" ಕೊಡಲಾಗಿದೆ. " ದೇವರ ಪರಿಸೂತ್ರದೊಳಗೆ ಸೀಮಾದಂಡ ದೋಷ....ಟ್ಟಿತ್ತೆಲ್ಲ ದೇವರ್ಗೆ" ಎಂದಿದೆ(S I Inscriptions Madras, ಚಿನ್ನತುಂಬಳ No· 120 ನೇ ಶಾಸನ.) ಅದೇ ಬಳ್ಳಾರಿ ಜಿಲ್ಲೆಯ ಹಡಗಲಿ ೭೭ನೆಯ ಶಾಸನದಲ್ಲಿ " ಸೆಟ್ಟರು, ಪನಿಸರ್ಗ್ಗರು, ಗಾವುಂಡಗಳು, ಪಂಚ ಮಠ ಸ್ಥಾನಿಕರಿಗೆ,ಕೋಗಳಿಯ ಸ್ಥಾನಾಧಿಪತಿಗಳಪ್ಪ ಗಣಧರದೇವ ಭಟಾರ ಕರಿಗೆ ಭೂಮಿಯನ್ನು ಕೊಟ್ಟು ಎಂಟನೆಯ ಶ್ರಾಹೆಗೆ ಪತ್ರಿಗೆ ಮೂರು ಧರಣಂ ಮೂಱನೆಯ ಶ್ರಾಹೆಗೆ ತಱಿನೆಱೆದು ಮೂಱು ಗದ್ಯಾಣಮುಂ ಪತ್ರಿಗೆ ತಿಱುವರೆಲ್ಲಾ ಕಾಲಕ್ಕಮಿದುವೆ ಮರ್ಯಾದೆ " ಎಂದಿರುವುದು. ಅಲ್ಲದೆ ಪಂಚಾರಸವರ್ಜಿತಂ ಸೆಟ್ಟಿಯರ್ಗ್ಗಂ, ಪನ್ನಿಸಿಗರ್ಗಂ, ಗಾವುಂಡಗಳ್ಗಂ ಬಿಟ್ಟ ಕೊಟ್ಟಣ ಗದ್ಯಾಣಂ, ಕರ್ವಿನ ತೋಟ ಮತ್ತರಿಂಗೆ ಗದ್ಯಾಣ ಗಱಿ ಮತ್ತರ್ಗೆ ಧರಣಂ ಕಾಳ್ಕೆಯ್ಗೆ ಮತ್ತರಿಂಗೆ ಪಣಂ, ಫಲವಾಗದ ಮಣ್ಣ್ಗೆ ಅರುಣವಿಲ್ಲ. ಕೋಗಳಿಯ ಚತುರಾಘಾಟದೊಳಗಾದ ಮಣ್ಣುನೀರ

ಸಾಮ್ಯಕ್ಕಂ ದಂಡದೋಸಮಿಲ್ಲ ಬಸದಿಗೆ. ಸೆಟ್ಟಿಯರ್ ಪನ್ನಸಿಗರ್, ಗಾವುಂಡಗಳ್ಮೊದಲಾಗಿ ಮಾನ್ಯಕಾರರ್ ಮೂರು ಶ್ರಾಹೆಗೆ ಪರಿಯರ ಗದ್ಯಾಣವಂ ತೆಱುವರ್ । ..................

ಪಂಚಮಠಸ್ಥಾನಮುಂ ಪೂರ್ವ ಮರ್ಯಾದೆಯೊಳ್ ಪ್ರತಿಪಾಳಿಸುವುದು. ಮೂರು ಬರವುವಿಲ್ಲ, ಮೂರ್ಮನೆ ವಾರ್ತೆಗರ ಮನೆ ಪೊಕ್ಕಡೆ ಪನ್ನೆರಡು ಗದ್ಯಾಣದಣ್ಡ। ಹರದರಕ್ಕನಂಗದೊಳ್ಪಾದರಂ ಗೆಯ್ಯೆ ಪಚ್ಚವಂ ಕೊಂಡು ಪಾದರಿಗೆ ಮೂಗನರಿದು ಪಾದರಿಗನಂ ಕೊಲ್ವುದು । ಪೊಯ್ದಂಗೆಂಟು ಪಣಂ ಆಣೆಯು ಮಿಕ್ಕಂಗೆ ಪನ್ನೆರಡು ಪಣಂ ಮೀಱಿದಂಗೆ ಪನ್ನೆರಡು ಗದ್ಯಾಣ ದಣ್ಡ ಪರದಾನಾರ್ಬನ್ನಶವಂಗಡಿಯ ಪಾಜಿಕದಿಂದಿಱಿಯನನ್ಯಾಯದೊಳ್ಪರಧನಂ ಪೊಯ್ದಡೆ ಸಾವು ಸಲ್ವರ್ । ನಕರಕ್ಕಂ ಮಹಾಜನಕ್ಕಂ, ಗಾವುಂಡಗಳ್ಗಂ ಪಂಚಮಠ ಸ್ಥಾನಕ್ಕಂ ಬಿಟ್ಟಿಯಿಲ್ಲಂ. ” ಈ ಶಾಸನಗಳಿಂದ ಆಗಿನ ಕಾಲದ ಸಾಮಾಜಿಕ ವ್ಯವಸ್ಥೆಯು ತಿಳಿದು ಬರುವುದು.

## ದೇವಧರ್ಮದ ಸಂರಕ್ಷಣೆ

ದೇವಾಲಯದ ಈ ಧಾರ್ಮಿಕದತ್ತಿಗಳನ್ನು ಸಂರಕ್ಷಿಸುವ ಭಾರವು ಯಾರ ಯಾರ ಮೇಲಿತ್ತೆಂಬ ಬಗ್ಗೆ ಶಾಸನಗಳಲ್ಲಿ ಉಲ್ಲೇಖಿಸಲಾಗಿರುವುದು.

“ ಇಂತೀಧರ್ಮಮಂ ಸೂಂಡಿಯಱುವರ್ಗಾವುಂಡಗಳುಮೊಣ್ಬರ್ ಸೆಟ್ಟಿಯರು ಕೈಕೊಂಡು ಸ್ವಧರ್ಮದಿಂ ರಕ್ಷಿಸುತ್ತಮಿರ್ಪರ್ ” ಎಂದು ಸೂಂಡಿಯ ಮೇಲಿನ ಶಾಸನದಲ್ಲಿದೆ. ಹೊಂಬಳದ ಶಾಸನದಲ್ಲಿ “ ಇಂತೀ ಧರ್ಮಮಂ ನೂಱಪ್ಪದಿಂಬರುಂ ಸ್ವಧರ್ಮದಿಂ ಕಾಯ್ದು ಪ್ರತಿಪಾಲಿಸಿ ನಡೆಸುವುದು ” ಎಂದಿದೆ. ಇವರು ಅಗ್ರಹಾರದ ೧೨೦ ಬ್ರಾಹ್ಮಣರು; ಊರೊಡೆಯರು. ಸಿಂಗೆ ದಣ್ಣಾಯಕರು ತಂದೆಯ ಹೆಸರಿನಲ್ಲಿ ಲಿಂಗ ಪ್ರತಿಷ್ಠೆ ಮಾಡಿದಾಗ “ ಹಿರಿಯದಣ್ಣಾಯಕರು ವ್ಯವಸ್ಥಾಪಕರು” ಎಂದಿದೆ (ಚಿತ್ರದುರ್ಗ ನಂ ೪,-೧೪೨೮). “ಆ ಕೇಶವ ದೇವರಿಗೆ ಅಧಿಕಾರಿಯಾಗಿದ್ದ ಲಿಂಗರಸ, ಮಾದಂಣ ಮುಂತಾಗಿ ಸ್ಥಾನಿಕರಿಗೆ. ” ಎಂದಿದೆ (ಹಾಸನ ನಂ. ೮೨). ಈ ಸ್ಥಾನಿಕ ಶಬ್ದವನ್ನು ಬೇರೆ ಬೇರೆ ಪ್ರಸಂಗಗಳಲ್ಲಿ ಶಾಸನಗಳಲ್ಲಿ ಬಳಸಲಾಗಿದೆ. ದೇವಾಲಯಕ್ಕೆ ಭೂಮಿಯನ್ನು ದಾನಕೊಡುವಾಗ ಊರೊಡೆಯರ ಅಪ್ಪಣೆಯನ್ನು ಪಡೆಯಬೇಕಾಗುತ್ತಿದ್ದಿತು.

" ಕನ್ನಡ ನಾಲ್ಕು ಸಾಸಿರದ ಮುಂಮುಱಿದಂಡಗಳಿಗೆ ಮುಖ್ಯರಪ್ಪ ಶಿವಧರ್ಮದೀಪಕನಾದ ಶೈವರ ದೇವಿಸೆಟ್ಟಿಯರು ಅರುವರ ಮೂವಪ್ರಭು ಗಾವುಂಡಗಳ ಕೈಯ್ಯಲು ಶೈವರ ದೇವಿಶೆಟ್ಟಿಯರು ಆ ಮೂವಪ್ರಭು ಗಾವುಂಡಗಳಿಗೆ **ಸ್ಥಾನಪೂಜೆಯುಂ** ಕೊಟ್ಟು ಧರ್ಮೇಶ್ವರ ಖಂಡಸ್ಫುಟಿತ ಧೂಪೋಪಹಾರಕ್ಕಂ ಸ್ಥಾನಾಚಾರ್ಯರ ಗ್ರಾಸಕ್ಕಂ ಧಾರಾಪೂರ್ವಕಂ ಮಾಡಿಬಿಟ್ಟ..........ಇಂತಿನಿತುಮಂ ಆ ಶೈವರ ದೇವಿಸೆಟ್ಟಿಯರು ಶ್ರೀಮತ್ತ್ರಿಭುವನಮಲ್ಲ ಪಾಂಡೇಶ್ವರ ದೇವರ ಸ್ಥಾನಾಚಾರ್ಯ ಬ್ರಹ್ಮಶಿವದೇವರ, ಮಲ್ಲಿಕಾರ್ಜುನ ಗುರುಗಳ, ರುದ್ರಶಕ್ತಿದೇವರ ಇಂತಿವರ ಕಾಲಂ ಕರ್ಚಿ ಧಾರಾಪೂರ್ವಕಂ ಕೊಟ್ಟರು (ದಾವಣಗೆರೆ ನಂ. ೩; -- ೧೧೨೧). " ಈ ಮೇಲಿನ ಶಾಸನದಲ್ಲಿ ಶೈವರ ದೇವಿಶೆಟ್ಟಿಯು ಮೂವರು ಪ್ರಭು ಗಾವುಂಡರಿಗೆ ಸ್ಥಾನಪೂಜೆಯುಂ ಕೊಟ್ಟನೆಂದು ಹೇಳಿರುವುದರಿಂದ ಆ ಗಾವುಂಡರು ಅಲ್ಲಿಯ ಸ್ಥಳಿಕ ರಾಜಕೀಯ ಅಧಿಕಾರಿಗಳು ಅವರ ಅಪ್ಪಣೆಯನ್ನು ಪಡೆಯುವುದು ಆವಶ್ಯಕವಾಗಿದ್ದಿತು. ಅದರಂತೆ ಹೊಂಬಳವು ಬ್ರಾಹ್ಮಣರ ಅಗ್ರಹಾರವಾಗಿದ್ದುದು ಹಿಂದೆ ಹೇಳಲಾಗಿದೆ. ಆ ಹೊಂಬಳದ ಅಶೇಷ ಮಹಾಜನಗಳು ನೂರಿಪ್ಪದಿಂಬರು ಅಗ್ರಹಾರದ ಒಡೆಯರು. ವಾಮಶಕ್ತಿಯ ಮಗನಾದ ರುದ್ರಶಕ್ತಿಯು ತನ್ನ ತಂದೆಯಾದ ವಾಮಶಕ್ತಿಯ ಪರೋಕ್ಷ ವಿನಯಕ್ಕಾಗಿ ಹರಲಿಂಗ ಸ್ಥಾಪನೆ ಮಾಡಿ, ಅದಕ್ಕೆ ಕುಮಾರ ಬೊಂತೇಶ್ವರ ಎಂದು ಹೆಸರಿಟ್ಟು, ಬೊಂತೇಶ್ವರ ದೇವರಂಗಭೋಗ ನೈವೇದ್ಯ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಸರ್ವಬಾಧಾ ಪರಿಹಾರವಾಗಿ ಸರ್ವನಮಸ್ಯವಾಗಿ ಭೂಮಿಯನ್ನು ಬಿಡುವ ಕಾಲಕ್ಕೆ " ಪೊಂಬೞದ ಅಶೇಷ ಮಹಾಜನಂ ನೂಱಿಪ್ಪದಿಂಬರುಮಂ ಧರ್ಮಾರ್ಥ ಪ್ರಾರ್ಥಿಸಿ ದ್ರವ್ಯನಿವೇದನಂ ಗೆಯ್ಯಲವರ್ ಧಾರೆ ಸಹಿತ ಕುಡಲು ಪಡೆದು " ದೇವಾಲಯಕ್ಕಾಗಿ ಬಿಟ್ಟಿರುವರು. ಇದು ಸ್ಥಾನಪೂಜೆಯನ್ನು ಕೊಡುವ ಬಗೆಯೆಂದು ಕಾಣುತ್ತದೆ. ಅಂತೂ ಇಲ್ಲಿ ' ಸ್ಥಾನ 'ವೆಂದರೆ ರಾಜಕೀಯ ಅಧಿಕಾರಕ್ಕೊಳಪಟ್ಟ ಸ್ಥಾನವೆಂದು ಅರ್ಥವಾಗುತ್ತದೆ. ದಾನ ಕೊಡುವಾಗ ' ಹಿರಣ್ಯೋದಕ'ವನ್ನು ಧಾರಾಪೂರ್ವಕವಾಗಿ ಬಿಡುವುದು ಪ್ರಾಚೀನ ಆರ್ಯಸಂಪ್ರದಾಯ. ಭೂಮಿಯ ಬೆಲೆಯನ್ನು ಬಂಗಾರದಲ್ಲಿ ಕಟ್ಟಿ, ಆ ಬಂಗಾರವನ್ನು ಒಡೆಯರಿಗೆ ನಿವೇದನಗೈದು, ಅದನ್ನು ಪುನಃ ಅವರಿಂದ ಧಾರೆಸಹಿತ ಪಡೆದು, ಗುರುಗಳಾದ ಸ್ಥಾನಾಚಾರ್ಯರ ಕಾಲಂ ಕರ್ಚಿ ಕೊಡಲಾಗುತ್ತಿತ್ತು. ಇದು ಆ ಕಾಲದ ಪದ್ಧತಿ. ಆಗ ಅದು

ಪೂರ್ಣವಾಗುತ್ತಿದ್ದಿತು. ಇಂದಿಗೂ ಹಳಬರು ಈ ಪದ್ಧತಿಯನ್ನು ಆಚರಿಸುತ್ತಾರೆ.

## ಅಧಿಷ್ಠಾನ, ಧರ್ಮಸ್ಥಾನ, ಮಠ ಇವುಗಳನ್ನಾಳುವವರು ಸ್ಥಾನಿಕರು, ಒಡೆಯರು, ಜೀಯರು ಮುಂತಾದವರು

ಉಚ್ಚಂಗಿಯನಾಳುವ ದಂಡನಾಯಕ ದೇವಪಯ್ಯನು ದೇಗುಲದ ಅಧಿಷ್ಠಾನಮಂ ಕಟ್ಟಿಸಿ, ಮರದ ಮಗ್ಗುಲ ಬಾವಿಯಂ ಮಾಡಿಸಿದನು (ಉಚ್ಚಂಗಿ, ಹರಪನಹಳ್ಳಿ ತಾಲೂಕು, S. I. Inscriptions Madras No. 126–106 ). ಇಲ್ಲಿ ದೇಗುಲದ ಅಧಿಷ್ಠಾನವೆಂದರೆ ಮರವೆಂದು ಸ್ಪಷ್ಟವಾದ ಅರ್ಥ. " ಬೂಚಗಾವುಂಡನು ದೇಗುಲವನ್ನೆತ್ತಿಸಿ ಕೆಱೆಯಂ ಕಾಲುವೆಯಂ ಕಟ್ಟಿಸಿ........ಮಾರಜೀಯರ ಮಠ (ಹಾಸನ ನಂ. ೧೦೭; ೧೦೯೬)." ಬಲ್ಲಾಳ ಭೂಪಾಲನ ಕಾಲದಲ್ಲಿ ಶಿವಪಾದಶೇಖರ ಜವನೆಯ ಹೆಗ್ಗಡೆ ನಿಂಗೇಶ್ವರ ದೇವರ ಪ್ರತಿಷ್ಠೆ ಮಾಡಿ, ಅಶೇಷ ಮಹಾಜನಗಳ ಅನುಮತಿಯಿಂದ ಕಾಶ್ಯಪಗೋತ್ರದ ಕುಮಾರದೇವರಿಗೆ ಕಾಲಂ ಕರ್ಚಿ, ಕೈಗೆ ಧಾರೆ ಎಱೆದು ಹುವ್ವಿನ ತೋಟವು, ಹುವ್ವಿನ ಪಡಿ ನಡೆಸುವಂತಾಗಿ ಭೇರಿ, ಶಂಖ ಬಾರಿಸುವಂತಾಗಿ ಚಾಮುಂಡಂಗೆ ಕೊಟ್ಟನು. ದೇವರಿಗೊಂದು ದೀವಿಗೆ ಬೆಳಗುವುದು, ನಾಲ್ಕು ದಿವಸಕ್ಕೊಮ್ಮೆ ಸಾರೈಸುವುದು (ಹಾಸನಜಿಲ್ಲೆ. ಚೆನ್ನರಾಯ ಪಟ್ಟಣ ನಂ. ೨೫೭), ಶ್ರೀ ಪರಶುರಾಮ ದೇವರಂಗಭೋಗ ಸ್ನಾನನಿವೇದ್ಯಕ್ಕಂ, ಅತಿಥಿ, ಅಭ್ಯಾಗತರ ತಪೋಧನರ ವಿದ್ಯಾರ್ಥಿ........ ಹಾರದಾನಕ್ಕಂ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಂ ಮಾಟಕೂಟಕ್ಕಂ ಸ್ವಸ್ತಿ ಯಮ ನಿಯಮ ........ರಪ್ಪ ಶ್ರೀಮತು ಕರ್ತ್ತಾರ ಪಂಡಿತರ ಕಾಲಂ ಕರ್ಚಿ ಧಾರಾಪೂರ್ವಕಂ ........ **ಕಾಳಾಮುಖಸ್ಥಾನ ಕರ್ತ್ತಾರಮಠ** ........... ನಾನಾದೇಸಿಗ ಪ್ರಮುಖವಾಗಿ ಬಿಟ್ಟ ಧರ್ಮಂ (S. I. Inscriptions, Madras No 184, 1111). ವಾಜಿಕುಳದ ಸಾಂಖ್ಯಾಯನ ಗೋತ್ರದ ದುರ್ಗರಾಜನ ಮೂಲಸ್ಥಾನ **ದುರ್ಗೇಶ್ವರ ಮಠಕ್ಕ** ಮಲ್ಲಿಯ ವಿದ್ಯಾದಾನಕ್ಕಂ ತಪೋಧನರ........ (S. I. Inscriptions Madras No. 160, 1091 ). ಲುಂಕೇಶ್ವರಮಂ ಮಾಡಿಸಿ ದೇವರುಪಭೋಗಕ್ಕಂ ಪಾದಮೂಲ ಪರಿವಾರಕ್ಕಂ **ಮಠದ** ವಿದ್ಯಾದಾನಕ್ಕಂ (S. I. Insc. No. 101). ತುಂಬಿಗೆರೆ ಮೂಲಸ್ಥಾನ ದೇವರ್ಗೆ, **ಮಠದ** ನೈಷ್ಠಿ

**ಕತಪೋಧನರ್ಗೆ ಮಠಕ್ಕೆ** (S I. Insc. Madras, No. 96); ದೇವರುಪಕರಣಕ್ಕಂ ಶ್ರೀಖಂಡಕ್ಕಂ ಕೊಟ್ಟು........ **ಪಂಚಮಠ ಸ್ಥಾನಮಂ ಪೂರ್ವಮರ್ಯಾದೆಯೊಳು** ಪ್ರತಿಪಾಳಿಸುವುದು (S. I. I. Md. No. 77 ಹಡಗಲಿ ಕ್ರಿ. ಶ. ೯೯೨); ಸತ್ಯರಾಸಿ ಭಟಾರಗ್ಗೆ ಕಾಲಂ ಕರ್ಚಿ ವಿದ್ಯಾದಾನ ಸತ್ರವಾಗೆ **ಮಠಕ್ಕೆ** ಕೊಟ್ಟಂ ( S. I. In. Md. ಬಳ್ಳಾರಿ No. 67, ಕ್ರಿ. ಶ. ೯೮೪); ಶ್ರೀಮತು ವರುಣ ಶಿವಭಟಾರರ್ **ನೊಳಂಬೇಶ್ವರದ ಸ್ಥಾನಮನಾಳುತ್ತಿರೆ** (S. I. I. Md. No. 24, 936); ಭಟಾರಗ್ಗೆ ಕೊಟ್ಟ ವೈರಾಗ್ಯಸ್ಥಾನಂ (S. I. I. Md. ಹೇಮಾವತಿ No. 19, 9th Century); **ಕೊಟ್ಟ** ತೊಣೆಯ ಸ್ಥಾನ**ದಯ್ದು ವರ್ಗ**ಗಳು, ಪಂಚಮಠ ಸ್ಥಾನದ ತಪೋಧನರುಂ, ಅಸಂಖ್ಯಾತಗಣಂಗಳು (S. I. I. Md. No. 336). ಈ ಮೇಲಿನ ಎಲ್ಲ ಶಾಸನಗಳಲ್ಲಿಯ ಅವತರಣಿಕೆಗಳಿಂದ, **ಗೊರವವಾಡ, ದೇಗುಲದ ಅಧಿಷ್ಠಾನ, ಮಠ, ವೈರಾಗ್ಯಸ್ಥಾನ, ಕಾಳಾಮುಖ ಸ್ಥಾನ ಕರ್ತಾರಮಠ, ನೈಷ್ಠಿಕಸ್ಥಾನ,** ಇವೆಲ್ಲವು ಪರ್ಯಾಯನಾಮಗಳಾಗಿ ಬಳಸಲ್ಪಟ್ಟಿವೆಯೆಂದು ತಿಳಿಯುತ್ತದೆ. ಪ್ರತಿಯೊಂದು ದೇವಸ್ಥಾನಕ್ಕೆ ಮೂಲಸ್ಥಾನವೆಂದು ಹೆಸರಿದ್ದು, ಅದಕ್ಕೊಳಪಟ್ಟ ಇತರ ದೇವಾಲಯಗಳು ಇರುತ್ತಿದ್ದವು. ಅಂತಹ ದೇವಸ್ಥಾನಕ್ಕೊಂದು ಮಠವೂ ಆ ಮಠಕ್ಕೆ ಅಧೀನವಾಗಿದ್ದ ಇತರ ಪ್ರತಿಬದ್ಧ ಮಠಗಳಿರುತ್ತಿದ್ದವು. ವೈರಾಗ್ಯ ಸ್ಥಾನಗಳಲ್ಲಿ ಬ್ರಹ್ಮಚರ್ಯವ್ರತವುಳ್ಳವರು, ನೈಷ್ಠಿಕರು, ಯತಿಗಳು, ಮುನಿಗಳು ಇದ್ದು, ವೈರಾಗ್ಯ ಸ್ಥಾನಗಳಲ್ಲದವುಗಳಲ್ಲಿ ಗೃಹಸ್ಥಾಶ್ರಮಿಗಳು ಇದ್ದು ಆ ಮಠಗಳನ್ನು ಆಳುತ್ತಿದ್ದರು. " ಮಠವನ್ನು ತಾವೇ ಆಳಿದೊಡೆ ತಾವೇ ಸಾರ್ಥೈಸುವುದು " (ಚೆನ್ನರಾಯಪಟ್ಟಣ ನಂ. ೨೫೭, ಹಾಸನ ಜಿ.) ಎಂದು ಹೇಳಿರುವುದರಿಂದ ಈ ಮಾತುಗಳು ಆಳುವವರಾದ ವಲಜೀಯ, ಜಕ್ಕಜೀಯ, ಬೊಮ್ಮಜೀಯಂಗಳಿಗೆ ಕೊಡುವಾಗ ಅನ್ನಲಾಗಿದೆ. ಇದರಿಂದ ಇವರೆಲ್ಲ ಜೀಯರು ಸಸ್ತ್ರೀಕರು ಇದ್ದರೆಂದು ಊಹಿಸಬಹುದು. ನೈಷ್ಠಿಕರಿಗೆ ಈ ಮಾತುಗಳು ಅನ್ವಯಿಸುವುದಿಲ್ಲ. ಮೇಲೆ ಹೇಳಿದ ಸೂಂಡಿಯ ಶಾಸನದಲ್ಲಿ ನಾಗದೇವನು "ನೈಷ್ಠಿಕರೆನಿಸದ ಕಾಳಾಮುಖ ಗೊರವರನ್ನು ಇರಿಸಲ್ಯಾಗದೆಂದು ಧರ್ಮಂ ನಿಯಮಿಸಿದ " ನೆಂದಿದೆ. ಅದರಂತೆ ಮೂರು ಹೊತ್ತು ಕಾಂತಾಸಂಕುಳ ಭೋಗಕ್ಕೆ ತಡೆದರೆ, ವಿದ್ಯಾರ್ಥಿಗಳು ಮೂರು ಹೊತ್ತು ಓದುತ್ತಿರದೊಡೆಯಾದರೂ ಇರಿಸಲ್ಯಾಗದೆಂದು ನಿಯಮಿಸಿರುವನು. ಭೋಗದ ಸೂಳೆಯರು ದೇವಾಲಯಗಳಲ್ಲಿ ನಿಯಮಿಸಲ್ಪಡುವ ಪದ್ಧತಿಯಿತ್ತು

ಸೂಳೆಯರೆಂದರೆ ಈಗಿನವರ ಕೆಟ್ಟ ಅರ್ಥದಲ್ಲಿ ಅವರನ್ನು ತಿಳಿಯಲಾಗದು. ಅವರು ಗಾಯನ, ನರ್ತನಗಳಲ್ಲಿ ನಿಪುಣರಾಗಿ ಶ್ರೇಷ್ಠ ಕಲಾವಂತರಾಗಿರುತ್ತಿದ್ದರು. ಇಂತಹವರನ್ನೂ ದೇವಾಲಯಗಳಲ್ಲಿ ಈ ಪದ್ಧತಿಯನ್ನೂ ಸುರಪುರದಲ್ಲಿ ಶ್ರೀ ಗೋಪಾಲಸ್ವಾಮಿಯ ದೇವಸ್ಥಾನದಲ್ಲಿ ಈ ಲೇಖಕನು ಕಣ್ಣಾರೆ ನೋಡಿರುವನು ಕ್ರಿ. ಶ. ೧೦ ನೆಯ ಶತಮಾನದ ಹೇಮಾವತಿಯ ಶಾಸನದಲ್ಲೂ ( ಅನಂತಪೂರ ಜಿ. S. I In. Md. No. 9) “ ಭಟಾರರ್ಗ್ಗೆ ಕೊಟ ಸ್ಥಿ । ........ ರಾಗ್ಯಸ್ಥಾನಂ । ವೈರಾಗ್ಯ........ ಭಟಾರ ನಕರಮುಂ ಸ್ಥಾನದ ತಪಸ್ವಿಯರ್ಕ್ಕಳುಂ ಗಾಮುಣ್ಡಗಳುಂ ।.......... ರನಾಳ್ವರಸರುಂ ಪುರದಿ। ಪೊರಮಡಿಸಿ ಮತ್ತಮಾ। ಗಣದೊಳ್ವ್ರರಾಗಿಗಳಾಗಿ ಗುಣವಂತರನಿಡುವುದು. ಇಡದಾಗಳ್ಪಂಚ ಮಹಾಪಾತಕದ ಫಲಂ । ಈ ಶಾಸನದೊಳ್ಬರೆದ ಸ್ಥಿತಿಯಂ ಪಾಲಿಪ್ಪೊರನನ್ತಶಿವರುಂ ಲಗುಳೀಶ್ವರರುಂ **ಕಮಲಪ್ರಭೆಗೊರವರುಂ** ನಕರೇಶ್ವರದ ....... ಸೋವಗೊರವರುಂ ಅವರ ಶಿಷ್ಯರಾದೊರುಂ ಪಾಲಿಪ್ಪೆ... ... ”. ಮೋರಗಿರಿಯ ಶಾಸನದಲ್ಲಿ ಮಠದ ವಿದ್ಯಾದಾನ, ಸೂಳೆಯರು, ವಂಸಿಗರು, ಪಱಿಕಾರ, ಘುಟಿಗೆ ಮಾಣಿಯರು, ರುವ್ವಾರಿ, ನಟ್ಟುವ ಮುಂತಾದವರಿಗೆ ಭೂಮಿಯನ್ನು ಕೊಟ್ಟ ವಿವರಗಳನ್ನು ಹೇಳಿ, “ ಇಂತೀ ಪರಿಗ್ರಹವೆಲ್ಲಂ ದೇವರ್ಗ್ಗಂ ತಪೋಧನರ್ಗ್ಗಂ, ಬೆಸಕೆಯ್ವುದ್ಣರ್ । ದುಷ್ಟರಂ ತಪೋಧನರ್ ದಂಡಿಸಿ ನಡೆಯಿಸುವರ್ । ಇದು **ನೈಷ್ಠಿಕ** ಸ್ಥಾನಪುಲ್ಲಿ **ನೈಷ್ಠಿಕರಲ್ಲದ ತಪೋಧನನಿರಲಾಗದು.** ಬ್ರಹ್ಮಚರ್ಯದಿಂ ಕೆಟ್ಟು ನಡೆವ ತಪೋಧನರಂ ನಾಡಾಳ್ವರಸುಂ । ಮನ್ನೆಯ ನೇರಿಂಗೆಱೆಯ ಪನ್ನಿರ್ವರೊಡೆಯರುಮಿರ್ದು ಪೊರಮಡಿಸಿಯವರ ಸಂತತಿಯ ನೈಷ್ಠಿಕರನಿರಿಸುವರಿದನುಪೇಕ್ಷೆಗೆಯ್ವವರ್ಗೀ ಧರ್ಮಮನಳಿದ ದೋಷವಕ್ಕು । ಆಚಾರಗೆಟ್ಟು ಪೋಗದೆ ಪೊಂಡಿತನಂ ಗೆಯ್ದು ನಡೆವಂ ಶ್ವಾನ, ಗಾರ್ದಭ, ಚಂಡಾಳನಾತಂ, ಸತ್ತಡೆ ಪಂದಿ ಸತ್ತುದು ನಾಯ್ಸತ್ತುದು ಇಂತೀ ಧರ್ಮರಕ್ಷಿಸಿದಾತಂಗೆ....... (ಮೊರಗಿರಿ ಹಡಗಲಿ S. I. I. Mad. No 101; 1045 A D )” ಎಂದಿದೆ. ಮತ್ತೊಂದು ಶಾಸನದಲ್ಲಿ “ಮಹಾಮಂತ್ರಿ ಕಾಳಿದಾಸಮಯ್ಯಂಗಳು ಸ್ವಯಂಭುದೇವರ್ಗ್ಗೆ, ಮೂಲಸ್ಥಾನ ದೇವರ್ಗ್ಗೆ ಯಮನಿಯಮ .. ... ರಪ್ಪ ಶ್ರೀಮತು ಮಳಿಮಡುವಿನ ತೇಜೋರಾಶಿ ಪಂಡಿತರ ಶಿಷ್ಯ ಚಿಲ್ಲುಕಾಚಾರ್ಯರ್ಗ್ಗೆ ಪಾದಪ್ರಕ್ಷಾಳನೊ... .... ಹಿರಣ್ಯೋದಕ ಪೂರ್ವಕ ಸದ್ಭಕ್ತಿಯಿಂದೆ ” ಕೊಟ್ಟಿರುವ ಸಂಗತಿ ಇದೆ. ನರಗುಂದ ಬೆಣ್ಣೆಯೂರ ಅಗ್ರಹಾರಗಳು,

ಕಂದ ॥ ವೇದವಿದವ್ರೈಷ್ಣವಥ ।
ಮೋರ್ದಯರಕಳಂಕ ಚರಿತರಿನ್ನಿರ್ವರುಮ- ॥
ತ್ಯಾದರದಿ ಶಿವಾಲಯದೀ ।
ಮೇದಿನಿಯುಂ ಸರ್ವಮಾನ್ಯದಿಂ ಪಾಲಿಸುವರ್ ॥

ಈ ಸ್ಥಾನಕ್ಕೆ ಮಹಾಜನಕ್ಕೆ ಮಹಾಜನಮುಂ ಬ್ರಹ್ಮಚರ್ಯಮುಃ ತಪಸ್ವಿಯುಂ ನಿಲಿಸುವರ್ । ಬ್ರಹ್ಮಚರ್ಯಮಿಲ್ಲದವನನಿದ್ರೋಡಿ ಕಳೆವರ್ ॥ " ಅಱಿದಾಗಮೋಕ್ತಿಯಿಂದಂ । ನಿಱಿಸಿ ಶಿವಜ್ಯೋತಿಯ ಸ್ವಚಿತ್ತದೆ ಗತಿಯುಂ ॥ ಮಱೆಯದೆ ಸಚ್ಚಾರಿತ್ರದೆ । ಕುರವತ್ತಿಯ ಚಿಲ್ಲ ಕಾರ್ಯ ಮುನಿಮನುಚರಿತಂ ॥ " ಎಂದಿರುವುದರಿಂದ ಇವನೂ ನೈಷಿ ಕನು (ಮೈಲಾರ S. I. Ins. No. 102, 1046. A. D). ಅದರಂ ಹಗಲಗೊಂಡೆಯ (No. 163, 1093 A. D., S. I. Ins. Md) ಶಾಸನ ದಲ್ಲೂ ಶ್ರೀ ಮಲೆಯಾಳ ಪಂಡಿತ ದೇವರ ಶಿಷ್ಯಪರಂಪರೆಯ ಕಳೇಶ್ವರ ಮುನಿಗೆ ಕೊಡುವಾಗ " ಈ ಸ್ಥಾನದಲ್ಲಿರ್ದ ತಪೋಧನರು ಬ್ರಹ್ಮಚರ್ಯ ಮುಳ್ಳ ತಪೋ........ ಬ್ರಹ್ಮಚರ್ಯವಿಲ್ಲದಂ ಕಳೆದು ಅವರ ಸಂತತಿಯ ಬ್ರಹ್ಮಚರ್ಯಮುಳ್ಳ ತಪೋಧನರಂ ನಿಲಿಸುವುದು (ಹಗಲಗೊಂಡಿ S I. Ins. Mad. No-163, 1093 A. D. )." ಎಂದು ನಿಯಮಿಸ ಲಾಗಿದೆ. ಅದೇ ಸಂಪುಟದ ನಂ. ೭೮ ನೆಯ ಶಾಸನದಲ್ಲಿ ತಿಪ್ಪಯ್ಯ ಗೊರವರ್ಗ್ಗೆ ೩೦ ಮತ್ತರ ಭೂಮಿಯನ್ನು ಕೊಟ್ಟು " ಮಕ್ಕಳ ಮಕ್ಕಳ್ಗೆ, ಶಿಷ್ಯರ ಶಿಷ್ಯರಿಗೆ ನಡೆಸುವುದು, ತಪ್ಪಲಾಗದು " ಎಂದಿದೆ.

ಈ ಮೇಲಿನ ಶಾಸನಗಳಿಂದ, ನೈಷ್ಠಿಕರು, ಬ್ರಹ್ಮಚಾರಿಗಳು ಶಿವಾಲಯಗಳಿಗೆ ಸಂಬಂಧಿಸಿದ ಮಠಗಳಲ್ಲಿದ್ದು, ದೇವಾಲಯದ ಎಲ್ಲ ಕಾರ್ಯಕಲಾಪಗಳನ್ನು ಸಾಂಗೋಪಾಂಗವಾಗಿ ನಡೆಯಿಸುತ್ತಿದ್ದರು. ನೈಷ್ಠಿಕರಾಗಿ ಇಲ್ಲದವರನ್ನು ಆ ಸ್ಥಾನದಿಂದ ಹೊರಗಟ್ಟಿ, ಅವರ ಸ್ಥಳದಲ್ಲಿ ಅದೇ ಸಂತತಿಯ ನೈಷ್ಠಿಕರನ್ನು ನೇಮಿಸಲಾಗುತ್ತಿತ್ತು, ಎಂದು ಗೊತ್ತಾಗು ತ್ತದೆ. ಆ ಸ್ಥಳದ ರಾಜಕೀಯ ಅಧಿಕಾರವುಳ್ಳ ಅಶೇಷ ಮಹಾಜನರು, ಮನ್ನೆಯ ಗಾವುಂಡಗಳು, ಸೆಟ್ಟಿಯರು ಈ ಕಾರ್ಯವನ್ನು ವಹಿಸುತ್ತಿದ್ದರು. ಧಾರ್ಮಿಕಸಂಸ್ಥೆಯು ಮತ್ತು ರಾಜಕೀಯ ಸಂಸ್ಥೆಯು ಪರಸ್ಪರ ಸಂಬಂಧ ವುಳ್ಳವಾಗಿದ್ದವು. ಮಠಪತಿಯಾದ ತಪೋಧನರು ಧಾರ್ಮಿಕ ಕ್ಷೇತ್ರದಲ್ಲಿ ಪೂಜ್ಯರು, ವಂದನೀಯರು, ಗುರುಗಳಾಗಿದ್ದರೂ, ಅಧರ್ಮದಿಂದ ನಡೆದವ ರನ್ನು ದಂಡಿಸುತ್ತಿದ್ದರು; ಅವರು ಸ್ವತಃ ಬ್ರಹ್ಮಚರ್ಯವಿಲ್ಲದವರಾಗಿ ನಡತೆ

ಗೆಟ್ಟು ನಡೆದರೆ, ಅಂತಹ ತಪೋಧನರನ್ನು ತಳ್ಳುವ ಅಧಿಕಾರವು ಆಯಾ ಸ್ಥಳದ ರಾಜಕೀಯ ಪ್ರತಿನಿಧಿಗಳಾದ ಅಧಿಕಾರಿಗಳಿಗಿತ್ತು. ದೇವಾಲಯ ಗಳಿಗೆ ಕೊಡಲ್ಪಟ್ಟ ದತ್ತಿಯನ್ನು ಸಂರಕ್ಷಿಸುವ ಭಾರವು ಇವರದೇ ಯಾಗಿತ್ತು.

ಕ್ರಿ. ಶ. ೧೨೫೫ ನೆಯ ಬಲ್ಲಾಳಸೋಮೇಶ್ವರನ ಕಾಲದಲ್ಲಿ ನಾನಾ ದೇಶಿ ಮಲೆಯಾಳ ಮುಖ್ಯನಾದ ಭದ್ರಕಾಳೀದೇವಿಲಬ್ಧವರಪ್ರಸಾದ ನಾದ ವಡ್ಡ ವ್ಯವಹಾರಿ ಕುಂಜ ಸೆಟ್ಟಿಯೆಂಬವನು ವೈಶ್ಯ ಕುಲಾಭರಣನು. ಇವನು ಶಿವಭಕ್ತನು.

ಹರಪದ ಪೂಜೆಯೊಳ್ ಹರಕಥೋಚಿತತತ್ವಸುಖಾನು
ಸೇವೆಯೊಳ್ ।
ಹರಸಮಯ ಪ್ರಭಾವ ಪರಿವರ್ತನದೊಳ್ ಹರಭಕ್ತಿಯೊಳ್ ಹರ ॥
ಸ್ಮರಣದೊಳಾವಗಂ ತನು [ಮನೋ ?] ಧನವೆಂಬಿವನೆಯ್ದೆ
ಕೂಡಿಸು ।
ಸ್ಥಿರಮೆನಿಸಿರ್ಪನೇಂ ಸುಕೃತಪುಂಜನೊ ಕುಂಜನಿಳಾ
ತಳಾಗ್ರದೊಳ್ ॥

ತನುವಂ ಜಂಗಮವೆಡೆಯೊಳ್ ।
ಮನಮಂ ಶ್ರೀ ಸೋಮನಾಥ ಪದಪಂಕಜದೊಳ್ ॥
ವಿನಿಯೋಗಿಸಿ ಕುಂಜಂ ನೆ ।
ಟ್ಟನೆ ಪಡೆದಂ ಪುಣ್ಯಪದಮನಾ ಶಿವಪದಮಂ ॥

ಆತನ ಸುತನು ಕಂಡನಂಬಿಯು ಹೊಸವೂರಲ್ಲಿ ಪರೋಕ್ಷದೊಳ್ ಕುಂಜನ ಹೆಸರಿಂ ಕಲ್ಲಶಿವಾಲಯಮಂ ಎತ್ತಿಸಿದನು. ಗೌಡರು ತಮ್ಮ ಋಣ ನಿರ್ಣಯವಾಗಿ ಉಂಬಳಿ ಭೂಮಿಯ ಗದ್ದೆಯನ್ನು ಆ ಕುಂಜೇಶ್ವರ ದೇವರಿಗೆ ಬಿಟ್ಟರು. ಆ ಕಂಡ ನಂಬಿ ಸೆಟ್ಟಿಯರು ಆ ಕುಂಜೇಶ್ವರ ಸ್ಥಾನವನು ತಮ್ಮ ಮಗಳು ಗಣಕುಮಾರಿ ಚಂದವ್ವೆಗೆ ಆ ದೇವರ ಕಾರ್ಯನಡೆಸಿ, ಆ ಸ್ಥಾನಕ್ಕೆ ತಾನೊಡೆಯಳಾಗಿ ಆಕೆಗೆ ಹೊಂಬಳಿ ಭೂಮಿ ಸಲ್ವಂತಾಗಿ ಶ್ರೀ ಕುಂಜೇಶ್ವರ ದೇವರ ಸನ್ನಿಧಾನದಲು, ದೋರ ಸಮುದ್ರದ ರಾಜಗುರು ರುದ್ರಶಕ್ತಿದೇವರು, ನೂಱಿಪ್ಪತ್ತು ಸ್ಥಾನಿಕರು, ಕಂಪಣಾ ಚಾರ್ಯರು, ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ ಸನ್ನಿಧಾನದಲು, ಎರಡು ಮುತ್ತಿನ ಹೊಸವೂರ ಸಮಸ್ತಪ್ರಜೆಗಾವುಂಡಗಳ ಸ್ಥಾನಿಕರ

ಸನ್ನಿಧಾನದಲು ಧಾರೆಯನೆಱೆದು ಕೊಟ್ಟರು." ಇಲ್ಲಿ ಸಾಲದ ಋಣ ಪರಿಹಾರಕ್ಕಾಗಿ ಭೂಮಿಯನ್ನು ಕೊಡಲಾಗಿದೆ. ಆ ರಾಜಗುರು "ರುದ್ರ ಶಕ್ತಿದೇವರುಂ, ನೂಱೆಪ್ಪತ್ತು ಸ್ಥಾನಿಕರುಂ, ಕಂಪಣಾಚಾರಿ, ರಾಜಧಾನಿ ಯರಸಿಕರೆಯ ಮಾದಜೀಯ, ಭೂತಜೀಯ, ಮಚ್ಚಜೀಯ, ಅನಂತ ಜೀಯನೊಳಗಾದ ಅಸಂಖ್ಯಾತ ಮಹಾಗಣಂಗಳು ನೆರದು, ಆ ಚಂದವ್ವೆಗೆ **ವಿಭೂತಿ ಪಟ್ಟವನು ಕಟ್ಟಿ ಗಣಕುಮಾರಿ ತನವಂ ಕೊಟ್ಟು** ಆ ಕುಂಜೇಶ್ವರ ದೇವರ ಸ್ಥಾನಕ್ಕೆ ಮಠದೆಱೆ ಮುಖ್ಯವಾಗಿ ಸಮಸ್ತ ತೆಱೆಯನು ಆಚಂದ್ರಾರ್ಕತಾರಂಬರಂ ಸರ್ವನಮಸ್ಯವಾಗಿ ಧಾರೆಯನೆಱೆದು ಕೊಟ್ಟರು ಅರಸಿಕೆರೆ No. 108; 1255 A.D.) "

ಈ ಶಾಸನವು ಸಾಮಾಜಿಕ, ಧಾರ್ಮಿಕ ರೂಢಿಯನ್ನು ಸೂಚಿಸುವ ಅನೇಕ ಸಂಗತಿಗಳಿಂದ ಕೂಡಿದೆ. ಹಿಂದಿನ ಪರಂಪರೆಯ ರೂಢಿಯಂತೆ, ಕುಂಜ ಸೆಟ್ಟಿಯು ಸತ್ತನಂತರ ಆತನ ಮಗನಾದ ಕಂಡನಂಬಿಯು ತಂದೆಯ ಹೆಸರಿನಲ್ಲಿ ಶ್ರೀ ಕುಂಜೇಶ್ವರ ಎಂಬ ಶಿವಾಲಯವನ್ನು ಕಟ್ಟಿಸಿದ್ದುದು ಸರಿಯೇ. ಆದರೆ ಇಂತಹ ದೇವಾಲಯದ ಸ್ಥಾನಿಕತನವು, ಅಂದರೆ ತಳ ವೃತ್ತಿಯಾಗಿ ಬಿಟ್ಟ ಭೂಮಿಯ ಒಡೆತನವು ಸ್ಥಾನಿಕರಾದ ಜೀಯರು, ಗಣಂಗಳು, ಗೊರವರು ಮುಂತಾಗಿ ಹೆಸರುಳ್ಳ ವರ್ಗದವರಿಗೆ ಸೇರತಕ್ಕದ್ದು. ಈ ಶಾಸನದ ಕಾಲದಲ್ಲಿ ದೇವಸ್ಥಾನದ ಒಡೆತನವು, ಲಾಕುಳ ಗುರುಗಳಲ್ಲ ದವರಿಗೆ ಕೊಡಲಾಗಿದೆ. ಅದಾದರೂ ಒಬ್ಬ ಹೆಂಣುಮಗಳಿಗೆ ಕೊಡ ಲಾಗಿದೆ. ಈ ಶಾಸನದಲ್ಲಿ ಹೊಸವೂರ ಸಮಸ್ತಪ್ರಜೆ ಗಾವುಂಡರಿಗೆ ರಾಜಕೀಯ ಅಧಿಕಾರವುಳ್ಳವರೆಂದು "ಸ್ಥಾನಿಕರು" ಎನ್ನಲಾಗಿದೆ. ಅದ ರಂತೆ ರಾಜಗುರು ರುದ್ರಶಕ್ತಿದೇವರು, ನೂಱೆಪ್ಪತ್ತು ಸ್ಥಾನಿಕರು, ಕಂಪಣಾ ಚಾರ್ಯರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳಿಗೂ **ಸ್ಥಾನಿಕರು** ಎನ್ನಲಾಗಿದೆ. ಈ ಸ್ಥಾನಿಕರಾದ ಅಸಂಖ್ಯಾತ ಮಹಾಗಣಂಗಳ ಹೆಸರು ಗಳು ಮಾದಜೀಯ, ಭೂತಜೀಯ, ಮಚ್ಚರಜೀಯ, ಅನಂತಜೀಯರು ಗಳು, ರಾಜಗುರು, ಕಂಪಣಾಚಾರ್ಯ ಮುಂತಾದ ನೂರಿ ಪ್ಪತ್ತು ಸ್ಥಾನಿಕರು ನೆರೆದು ಆ ಕುಂಜೇಶ್ವರ ದೇವಸ್ಥಾನಕ್ಕೆ **ಮಠದೆಱೆ ಮುಖ್ಯ ಸಮಸ್ತ ತೆಱೆಯನು** ಸರ್ವನಮಸ್ಯವಾಗಿ ಬಿಟ್ಟುಕೊಟ್ಟಿರುವುದು ಮಹತ್ವದ ಸಂಗತಿಯಾಗಿದೆ. ರಾಜಕೀಯ ಅಧಿಕಾರಿಗಳಾದ ಅರಸು, ಮಂಡಳೇಶ್ವರ, ಗಾವುಂಡರು ರಾಜಕೀಯ ಅಧಿಕಾರವುಳ್ಳವರಾಗಿದ್ದಂತೆ,

ಧಾರ್ಮಿಕ ಕ್ಷೇತ್ರದಲ್ಲೂ ರಾಜಗುರು, ಕಂಪಣಾಚಾರ್ಯ ಮುಂತಾದವರು ಧಾರ್ಮಿಕ ಅಧಿಕಾರವುಳ್ಳವರಾಗಿದ್ದರು. ಆಯಾ ಪ್ರದೇಶ, ಕಂಪಣ, ಗ್ರಾಮಗಳಲ್ಲಿಯ ಶಿವಾಲಯಗಳಿಗೆ ಸಂಬಂಧಿಸಿದ ಮಠದ ಒಡೆತನವು ಈ ಲಾಕುಳ ಗುರುಗಳಿಗೆ ಸಂಬಂಧಪಟ್ಟದ್ದಾಗಿದ್ದಿತು. ಈ ಲಾಕುಳಶೈವ ಗುರುಗಳು ಭಕ್ತರ ವ್ಯಕ್ತಿಶಃ ಗುರುಗಳಾಗಿದ್ದುದಲ್ಲದೆ, ಮುಖ್ಯವಾಗಿ ಶಿವಾಲಯಗಳ ಮಠಗಳ ಮೂಲಕ ಪ್ರಾದೇಶಿಕಾಧಿಕಾರವೂ, ದೇವಾಲಯಕ್ಕೆ ಬಿಟ್ಟ ಭೂಮಿಯ ಒಡೆತನವೂ ಇವರದೇ ಆಗಿರುತ್ತಿದ್ದಿತು. ಈ ಮಠಮಾನ್ಯವು ಅನ್ಯರಿಗೆ ಸೇರತಕ್ಕದ್ದಲ್ಲ. ಇದು ಪರಂಪರೆಯಿಂದ ಬಂದ ರೂಢಿಯಾಗಿದ್ದಿತು ಅಂತೆಯೇ ' ಇಂತೀ ಪರಿಗ್ರಹವೆಲ್ಲಂ ತಪೋಧನರ್ಗಂ ತಪೋಧನರ್ ದಂಡಿಸಿ ನಡೆಯಿಸುವರ್ " (S I I· Md. No. 101) ಎಂದು ಬಂದಿದೆ ವಿಶೇಷವಾಗಿ ಈ ಲಾಕುಳಶೈವ ಗುರುಗಳ ಭಕ್ತರಾದ ಗಾವುಂಡರು, ಸೆಟ್ಟರು ಮುಂತಾದವರು ದೇವಾಲಯಕ್ಕಾಗಿ ಬಿಟ್ಟ ದತ್ತಿಯ ವಿಷಯದಲ್ಲಿ ಮಠ-ಮಾನ್ಯ ಇವರದೇಯಾಗಿತ್ತೆಂದು ಕಾಣುತ್ತದೆ. ಶಿವಾಲಯಗಳ ಅಂತರ್ವ್ಯವಸ್ಥೆ ನಡೆಯಿಸುತ್ತ, ದೇವಾಲಯಕ್ಕಾಗಿ ತಳವೃತ್ತಿಯಾಗಿ ಬಿಟ್ಟ ಭೂಮಿಯನ್ನು ಉಪಭೋಗಿಸುತ್ತಿರುವುದು, ಈ ಲಾಕುಳಶೈವ ಗುರುಗಳ ವೃತ್ತಿ ಅಥವಾ ಜೀವನೋಪಾಯವಾಗಿರುತ್ತಿದ್ದಿತು.

ಈ ಶಾಸನದಲ್ಲಿ ವೈಶ್ಯನಾದ ಕಂಡನಂಬಿಶೆಟ್ಟಿಯು ಕುಂಜೇಶ್ವರ ದೇವರಿಗೆ ಬಿಟ್ಟ ಭೂಮಿಯ ಒಡೆತನವನ್ನು ತನ್ನ ಮಗಳಾದ ಚಂದವ್ವೆಗೆ ಕೊಟ್ಟು, ಆ ಸ್ಥಾನದ ಶ್ರೀಕಾರ್ಯವನ್ನು ನಡೆಯಿಸುವ ಅಧಿಕಾರ, ಹೊಂಬಳಿ ಭೂಮಿ ಆಕೆಗೆ ಸಲ್ವಂತಾಗಿ ಮಾಡಿರುವನು. ಈ ತರದ ವ್ಯವಸ್ಥೆಯಾದಾಗ ಎರಡು ಘಟನೆಗಳು ನಡೆದಿವೆ. ಆ ಪ್ರದೇಶದ ರಾಜಗುರು, ಕಂಪಣಾಚಾರ್ಯ ಮುಂತಾದವರಿಗೆ ದೇವಸ್ಥಾನದ ಮಠದೆಱೆ ಸಮಸ್ತ ತೆಱೆಯು ಸೇರತಕ್ಕದ್ದು. ಚಂದವ್ವೆಗೆ ಒಡೆತನ ಕೊಡುವುದು ಇವರ ಹಕ್ಕು ಬಾಧ್ಯತೆಗೆ ಹಾನಿಕರ. ಆದುದರಿಂದ ಅವರೆಲ್ಲರೂ ಒಟ್ಟುಗೂಡಿ ತಮಗೆ ಸೇರತಕ್ಕ ಮಠದೆಱೆತೆಱೆ ಆ ಚಂದವ್ವೆಗೆ ಬಿಟ್ಟುಕೊಟ್ಟಿದ್ದಾರೆ; ಅದಾದರೂ ಸ್ವಸಂತೋಷದಿಂದ. ಇದೊಂದು ಮಹತ್ವದ ಘಟನೆ. ಇದರೊಡನೆ ಎಲ್ಲಾ ಧರ್ಮಸ್ಥಳದ ಅಧಿಕಾರಿಗಳು ಸೇರಿ ಆ ಚಂದವ್ವೆಗೆ ವಿಭೂತಿ ಪಟ್ಟವನ್ನು ಕಟ್ಟಿ ಗಣಕುಮಾರಿತನವನ್ನು ಕೊಟ್ಟಿರುವರು. ಗಣಕುಮಾರಿತನವೆಂದರೆ, ಸಂಸಾರವಿಲ್ಲದೆ, ವೈರಾಗಿಯಾಗಿದ್ದು ಧರ್ಮಸ್ಥಳವನ್ನು

ಪರಿಪಾಲಿಸುವುದೆಂದರ್ಥ. ಈಗಿನ ಪರಿಭಾಷೆಯಲ್ಲಿ ಹೇಳುವುದಾದರೆ ವಿರಕ್ತಳಾಗಿರತಕ್ಕದ್ದು. ಹೆಣ್ಣುಮಗಳು ವಿರಕ್ತಳಾದ ಉದಾಹರಣೆಯಿದು. ಧರ್ಮಸ್ಥಳಗಳಾದ ಶಿವಾಲಯಗಳಿಗೆ ಲಾಕುಳ ಗುರುಗಳಲ್ಲದ ಅನ್ಯ ಜಾತಿಯವರೂ ದೇವಾಲಯವನ್ನು ಕಟ್ಟಿಸಿ, ವಿರಕ್ತರಾಗಿ, ವ್ರತಿಗಳಾಗಿ, ಮಠಗಳಲ್ಲಿರುವುದು ಬೇರೊಂದು ಪದ್ಧತಿಯಿತ್ತೆಂದು ತಿಳಿಯಬಹುದು.

ರಾಷ್ಟ್ರಕೂಟ ಕೃಷ್ಣರಾಜನು ಚೋಳ ಅರಸನಾದ ಮೊದಲನೆಯ ಪರಾಂತಕನನ್ನು ಸೋಲಿಸಿದ್ದುದು ಇತಿಹಾಸದಲ್ಲಿ ಪ್ರಸಿದ್ಧವಿದೆ. ಕೃಷ್ಣನ ಮಂಡಳಿಕನಾದ ಎರಡನೇ ಭೂತುಗನಾದ ಗಂಗರಸನು 'ತೊಕ್ಕಲಮ್' ಯುದ್ಧದಲ್ಲಿ ಮೊದಲನೇ ಪರಾಂತಕನ ಮಗನೂ, ಯುವರಾಜನೂ ಆದ ರಾಜಾದಿತ್ಯನನ್ನು ಕೊಂದನು ಈ ರಾಜಾದಿತ್ಯನ ಅತ್ಯಂತ ಸ್ನೇಹಿತನಾದ ಒಬ್ಬ ದಂಡನಾಯಕನು ಸಮರಾಂಗಣದಲ್ಲಿ ರಾಜಾದಿತ್ಯನ ಮರಣದಿಂದ ಪರಿಣಾಮಗೊಂಡು, ವೈರಾಗ್ಯವನ್ನು ತಾಳಿ, ಮಹಾವ್ರತಿಯಾಗಿ ಚತುರಾನನ ಪಂಡಿತ ಎಂಬ ಹೆಸರಿನಿಂದ ತಿರುವಱ್ಱಿಯೂರಿ (ಚಂಗಲಪೇಟೆ)ನಲ್ಲಿ ಮಠದ ಅಧಿಕಾರಿಯಾದನು ಈ ಸಂಗತಿಯು ಕೃಷ್ಣನ ಕ್ರಿ. ಶ. ೯೫೮ ನೆಯ ಒಂದು ಶಾಸನದಿಂದ ಗೊತ್ತಾಗುತ್ತದೆ. ರಾಜಕೀಯ ಅಧಿಕಾರವುಳ್ಳ ದಂಡನಾಯಕನು ಲಾಕುಳ ಗುರುವರ್ಗಕ್ಕೆ ಸೇರಿದವನಲ್ಲವೆಂಬುದು ಸ್ಪಷ್ಟವಿದೆ. ಆದಾಗ್ಯೂ ವಿರಕ್ತನಾಗಿ ಮಠದಲ್ಲಿದ್ದು ಮಠದ ಒಡೆತನವನ್ನು ವಹಿಸಬೇಕಾದರೆ ಕ್ರಿ. ಶ ೧೦ ನೆಯ ಶತಮಾನದಲ್ಲಿ ಅನ್ಯ ಜಾತಿಯವರೂ ಮಹಾವ್ರತಿಗಳಾಗುವ ರೂಢಿ ಇತ್ತೆಂದು ನಾವು ಊಹಿಸಬಹುದು. ಆದರೆ ಇವರಿಗೆ ಧಾರ್ಮಿಕ ಅಧಿಕಾರವಿದ್ದುದಾಗಲಿ, ದೇವಾಲಯಕ್ಕೆ ಕೊಟ್ಟ ದತ್ತಿಯನ್ನು ಪರಿಗ್ರಹಿಸುವ ಅಧಿಕಾರವಾಗಲಿ ಇದ್ದಿಲ್ಲ. ಇಂತಹರ ಉದಾಹರಣೆಗಳು ಕ್ರಿ. ಶ. ೧೨ ನೆಯ ಶತಮಾನಕ್ಕಿಂತ ಪೂರ್ವದಲ್ಲಿ ಕ್ವಚಿತ್ತಾಗಿವೆ. ಕ್ರಿ. ಶ. ೧೨ ನೆಯ ಶತಮಾನದಲ್ಲಿ ಈ ಪದ್ಧತಿಯು ಅಲ್ಪ ಪ್ರಮಾಣದಲ್ಲಿದ್ದು ಕ್ರಿ. ಶ. ೧೩ ನೆಯ ಶತಮಾನದಲ್ಲ ಹೆಚ್ಚು ಪ್ರಶಸ್ತಿ ಪಡೆದಿದೆ. ಸೊಲ್ಲಾಪುರದ ಸಿದ್ಧರಾಮೇಶ್ವರ, ಗೊಬ್ಬೂರಿನ ಜೇಡರ ದಾಸಿಮಯ್ಯ, ಮುದನೂರಿನ ದೇವರದಾಸಿಮಯ್ಯ, ಕೆಂಭಾವಿಯ ಭೋಗಣ್ಣ ಇನ್ನಿತರ ಕನ್ನಡ ವಚನಕಾರರೆಂದು ಪರಿಗಣಿಸಲ್ಪಟ್ಟವರು ಇದೇ ಪದ್ಧತಿಯವರು ಇವರ ಸ್ಥಳಗಳನ್ನು ನೋಡಿದವರಿಗೆ ಈ ಮಾತಿನ ಕಲ್ಪನೆಯು ಥಟ್ಟನೆ ಆಗುವುದು. ಇವರೆಲ್ಲರ ಸ್ಥಳಗಳ ಕಟ್ಟಡಗಳಿಗೂ ಲಾಕುಳ

ಗುರುಗಳಿಗೆ ಸಂಬಂಧಿಸಿದ ದೇವಾಲಯಗಳಿಗೂ ಇದ್ದ ಅಂತರವು ಕಂಡು ಬರುತ್ತದೆ. ಈ ಶಿವಶರಣರ ಸ್ಥಳಗಳು ಊರ ಹೊರಗಡೆಯಿದ್ದು, ಕೆರೆ ಅಥವಾ ಹೊಂಡ, ಅದರ ಮಧ್ಯದಲ್ಲಿ ಒಂದು ಚಿಕ್ಕ ಶಿವಾಲಯ, ಕಲ್ಲು ಕಂಭಗಳಿಂದ ಕಟ್ಟಿದ ಮಂಟಪದ ಮೇಲಿನಿಂದ ಹೋಗಲು ದಾರಿ–ಇದುವೆ ಆಗಿನ ಕಾಲದ ಸೇತುವೆ – ಇವೇ ಲಕ್ಷಣವುಳ್ಳವುಗಳಾಗಿವೆ. ಎಡ್ರಾಮಿ, ಏವೂರು ಮುಂತಾದವುಗಳಾದರೂ ಇದೇ ಜಾತಿಗೆ ಸೇರಿದವುಗಳು. ಇಂತ ಹರೇ ಮುಂದಿನ ಕಾಲದಲ್ಲಿ ಶಿವಶರಣರೆಂದೂ, ವಚನಕಾರರೆಂದೂ ತಿಳಿಯಲ್ಪಟ್ಟಿರುವರು. ಪ್ರತಿಯೊಬ್ಬ ವಚನಕಾರನು ತನ್ನದೆಯಾದ ಶಿವ ಲಿಂಗದ ಹೆಸರಿನ ಅಂಕಿತವನ್ನು ಇಟ್ಟುಕೊಂಡಿರುವುದರ ಇಂಗಿತವಾದರೂ ಇದೇಯಾಗಿದೆ. ಈ ರೀತಿಯಾಗಿ ಲಾಕುಳ ಗುರುಗಳಲ್ಲದ ಅನ್ಯ ಜಾತಿ ಯವರು ವಿರಕ್ತರಾಗಿ, ದೇವಾಲಯಗಳನ್ನು ಕಟ್ಟಿಕೊಂಡು ಇರುತ್ತಿದ್ದಾಗ್ಯೂ ಉಳಿದ ದೇವಾಲಯಗಳಿಗೆ ಸಂಬಂಧಪಟ್ಟ ಮಠಮಾನ್ಯದ ಅಧಿಕಾರ ಮಾತ್ರ ಲಾಕುಳ ಗುರುಗಳಿಗೆ ಇರುತ್ತಿದ್ದಿತು. ರಾಜಗುರು, ಮಂಡಳಾ ಚಾರ್ಯ, ಕಂಪಣಾಚಾರ್ಯರು, ಮೂಲದೇವಸ್ಥಾನ ಮತ್ತು ಅದರ ಪ್ರತಿಬದ್ಧ ದೇವಾಲಯಗಳು, ಮಠಗಳು, ಸ್ಥಾನಾಚಾರ್ಯರ ತಳವೃತ್ತಿಯ ಭೂಮಿಯ ಒಡೆತನ ಮುಂತಾದವುಗಳ ಸಂಸ್ಥೆಗಳು ಬೇರೆ; ಈ ಅನ್ಯ ಜಾತಿಯವರು ಬಿಡಿ ಬಿಡಿಯಾಗಿ, ಯಾವ ಅಧಿಕಾರವೂ ಇಲ್ಲದೆ, ವಿರಕ್ತರಾಗಿ ರುವ ಸಂಸ್ಥೆಗಳು ಬೇರೆ, ಎಂದು ಶಾಸನಗಳಿಂದಲೂ, ಕಟ್ಟಡಗಳಿಂದಲೂ ವ್ಯಕ್ತವಾಗುತ್ತದೆ.

ಇದಕ್ಕೂ ಮುಂದಿನ ಕಾಲದಲ್ಲಿ ಮತ್ತೊಂದು ತರದ ಪರಿವರ್ತನೆ ಯಾದದ್ದು ಕಂಡುಬರುತ್ತದೆ. ಸಾಮಾನ್ಯವಾಗಿ ಲಾಕುಳ ಗುರುಗಳು ಸ್ಥಾನಾಚಾರ್ಯರಾಗಿರುತ್ತಿದ್ದಾಗ್ಯೂ ಕೆಲವೆಡೆಗಳಲ್ಲಿ ಬೇರೆ ತರದ ವರ್ಣನೆ ಗಳು ಬರುತ್ತವೆ. "ಆ ಕೇಶವ ದೇವರಿಗೆ ಅಧಿಕಾರಿಯಾಗಿದ್ದ ಲಿಂಗರಸ ಮಾದಂಣ್ಣ ಮುಂತಾಗಿ ಸ್ಥಾನಿಕರಿಗೆ ಆಚಂದ್ರಾರ್ಕಪರಿಯಂತರ" ಎಂದಿದೆ (ಹಾಸನ ನಂ. ೮೨). ಈ ಲಿಂಗರಸ ಮಾದಣ್ಣಗಳು ಲಾಕುಳ–ಗುರುಗಳಲ್ಲವೆಂಬ ಸಂಶಯ ಬರುವುದು. ಈ ಹೆಸರುಗಳು ಲಾಕುಳ–ಗುರುಗಳ ಹೆಸರುಗಳಂತಿಲ್ಲ. ದೇವಾಲಯವಾದರೂ ಕೇಶವ ದೇವಾಲ ಯವು; ಶಿವಾಲಯವಲ್ಲ. ಆದರೆ ಈ ಕೇಶವ ದೇವರಿಗೆ ಅಧಿಕಾರಿ ಯಾಗಿದ್ದವರು, ಸ್ಥಾನಿಕರು ಮಾತ್ರ ಲಿಂಗರಸ ಮಾದಂಣ್ಣಗಳು ಆಗಿದ್ದುದು

ಮಾತ್ರ ಸ್ಪಷ್ಟವಾಗಿದೆ. ಈ ಶಾಸನದ ಕಾಲದ ನಿರ್ದೇಶವಿಲ್ಲ. ಅದರಂತೆ ಚಿತ್ರದುರ್ಗ ಜಿಲ್ಲೆಯ ನಂ. ೮ ನೆಯ ಶಾಸನದಲ್ಲಿ "ಬೈಚದಣ್ಣಾಯಕ, ಮಹಾಪ್ರಧಾನ ಬಲ್ಲಪ ದಣ್ಣಾಯಕ, ಸಿಂಗೆದಣ್ಣಾಯಕರು ಉಣ್ಣಮಲೆ ಪಟ್ಟಣದ ನೆಲೆವೀಡಿನಲ್ಲಿರೆ, ಬಲ್ಲಪದಂಣ್ಣಾಯಕರು, ಸಿಂಗೆದಣ್ಣಾಯಕರು ತಮ್ಮ ತಂದೆ ಬೈಚದಣ್ಣಾಯಕರ ಹೆಸರಿನಲು ಬೆಮ್ಮತ್ತೂರ ಕಲ್ಲಿನಲ್ಲಿ ಪ್ರತಿಷ್ಠೆ ಮಾಡಿ ಬೆನ್ನ ತೊಡೆಯನ್ನು ಕೊಟ್ಟರು. ಹಿರಿಯ ದಣ್ಣಾಯಕರು ವ್ಯವಸ್ಥಾಪಕರು. ಆ ದೇವರ ಸ್ಥಲಾಚಾರಿಯರಪ್ಪ ಗೊಬ್ಬೂರು ನರಹರ ದೇವರಿಗೆ, ಪುರಾಣಿಕರಿಗೆ ದಾನ" ಕೊಡಲಾಗಿದೆ. ಈ ಶಾಸನದ ಕಾಲವು ಕ್ರಿ. ಶ. ೧೩೨೪. ಈ ಶಾಸನದಲ್ಲಿ ಹಿರಿಯ ದಣ್ಣಾಯಕನು **ವ್ಯವಸ್ಥಾಪಕನು.** ಆಗಿದ್ದುದಲ್ಲದೆ, ಸ್ಥಾನಾಚಾರಿಯ ಹೆಸರು ನರಹರಿದೇವ ಎಂದಿದೆ. ಸ್ಥಾನಾಚಾರಿಯು ಲಾಕುಳ-ಗುರುವು ಅಹುದೋ ಅಲ್ಲವೋ ತಿಳಿಯದು. ವ್ಯವಸ್ಥೆಯ ಅಧಿಕಾರ ಮಾತ್ರ ಹಿರಿಯ ದಣ್ಣಾಯಕರದು. ಈ ನರಹರಿ ದೇವನು ಬ್ರಾಹ್ಮಣನಾಗಿದ್ದಿರಬಹುದು. ಅದರಂತೆ ಅದೇ ಚಿತ್ರದುರ್ಗ ನಂ. ೧೨ (೧೩೫೬) ನೆಯ ಶಾಸನದಲ್ಲಿ ವಿಜಯನಗರ ಬುಕ್ಕರಾಯನ ಕಾಲದಲ್ಲಿ ಮಹಾಮಂಡಳೇಶ್ವರ ಅಮರಗುಂಡ ಪಾದಾರಾಧಕ ನಡೆಗೋಂಟೆ ಅಳಿಯ ನಾಯಿನಾಯ್ಕನ ಮಗ ಮಲ್ಲಿನಾಥ ಒಡೆಯ ಬೆಮ್ಮತ್ತೂರಿನಲ್ಲಿರು ವಾಗ ಸಿದ್ಧನಾಥದೇವರ ಗೋಪುರ ಮುಂತಾದವುಗಳನ್ನು ಕಟ್ಟಿಸಿ ದಾನ ಕೊಟ್ಟಿರುವನು. ಮಲ್ಲಿನಾಥ ಒಡೆಯನ ಒಪ್ಪು "ಶ್ರೀ ಅಮರಗುಂಡ" ಎಂದು ನಾಗರಾಕ್ಷರದಲ್ಲಿದೆ. ಆ ಸಿದ್ಧನಾಥದೇವರ ದಿವ್ಯ ಶ್ರೀಪಾದ ಪದ್ಮಾರಾಧಕರುಮಪ್ಪ ಹಿರಿಯ ಸಿದ್ಧಂಣನ ಮಗ ಸೋಮಂಣಂಗೆ ಧಾರಾಪೂರ್ವ್ವಕವಾಗಿ" ಕೊಡಲಾಗಿದೆ. ಹೊಸಗಾಲದ ಪರಿವರ್ತನೆಯು ಇದರಲ್ಲಿ ಸ್ಪಷ್ಟ ವಾಗಿದೆ. ಶಾಸನಾರಂಭದಲ್ಲಿ—

"ನಮಸ್ತುಂಗ ಶಿರಶ್ಚುಂಬಿ ……………" ಎಂಬುದರ ಬದಲಾಗಿ "ಶ್ರೀ ಗುರುಭ್ಯೋ ನಮಃ" "ಶ್ರೀ ಸಿದ್ಧನಾಥ ಶರಣು" ಎಂದಿದೆ. ಅದರಂತೆ ಅದೇ ಚಿತ್ರದುರ್ಗ ನಂ. ೩ ನೆಯ ಶಾಸನದಲ್ಲಿ ಎಲ್ಲವೂ ಮೇಲಿನ ಶಾಸನದಂತಿದ್ದು ಪ್ರಾರಂಭದಲ್ಲಿ "ಪರಮನೆ ಪರತರ ಕೃತ್ಯನೆ ........ ಪರನೆ ಪರಮೋತನೆ........ನೆಗಾಧಾರವೆ ಪರಲೋಕ ಹಿತಾರ್ಥನೆ ಪರಾ....ನೆ ಪರಸುರ ಪಿತನೆ ಪವಿತ್ರನೆ ಕರುಣಿಸೈ ವರದಾನಿ ಪ್ರಸಿದ್ಧ ಲಿಂಗವೆ॥" ಎಂಬ ಪದ್ಯ ವಿರುವುದಲ್ಲದೆ ಕೊನೆಯ ಫಲಶ್ರುತಿಯು ಪೂರ್ವ ಪದ್ಧತಿಯ ಬದಲಾಗಿ ವಚನ ರೂಪದಲ್ಲಿದೆ. ಅದು ಈ ರೀತಿ :

" ಇರುಳುಂ ಪಗಲುಂ ಪರಿವ ಕಳ್ಳಕೊಳ್ಳಿಯಾದರಂ, ಮನ್ನೆಯ ಮಹಾಮಂಡಳೇಶ್ವರನಾದರಂ, ಧರೆಯನಾಳ್ವ ಚಕ್ರವರ್ತಿಯಾದರಂ, ಪೃಥ್ವೀಪತಿರಾಯನಾದರಂ, ಈ ಸ್ಥಾನದಲು ಮಾನ್ಯವಾಗಿದ್ದ ಊರುಗಳಂ ಭೂಮಿಗಳಂ ಧನಂಗಳಂ ಮನಂ........ಗಳದು ಕೊಂಡೆನೆಂಬಾತನ ಮಾತೆ, ಮಾತಾಪಿತೃಗಳೆಲ್ಲವಂ ಎಪ್ಪತ್ತೇಳು ಕೋಟಿ ವರುಷಂಬರಂ ಪುಳಗೊಂಡು ನರಕದಲಿಕ್ಕಿ ನಾನಾಪಸತ್ತಿಗೊಳುತಿರು ಗಂಡಾ ಎಲೆ ಪಾಪವೇ। ಈ ದೇವರ ಭೂಮಿಧನಕ್ಕೆ ಆನಂಜುವೆನೆಂದಾ ಪಂದೆಯುಂ ಪಾವಡರ್ದಡೆ ಮನಂ ಪೆದಱೆ ಪೊಡವೊಟ್ಟು ಪೋಪನ ಭ್ಯೆದ ಸೀಘ್ರಕ ವಿಳಾಸಕ್ಕೆ ಕೊಂಡು ಬಾ, ಕಂಡಾ, ಎಲೆ ಪುಣ್ಯವೆ .......ಗೆ ಪುಣ್ಯಪಾಪಂಗಳು ಪೊರ್ದಿಕೊಂಡಿಪ್ಪರ್ವು, ದಿಟಂ, ದಿಟಂ, ಸತ್ಯಂ ಕಂಡಿರೆ, ಎಲೆ ಎಲೆ ಬಹುಜನಂಗಳಿರಾ ಸಂದೆಗಂ ಕಂಡಿರಾದರೆ ಸಂದುಪೋಪಿರಿ ನರಕಕ್ಕೆ ॥ ಮಣಿದೇಪಂಡಗಳ ಬರೆಹ, ಸೋವರಸ ವೀರನಪ್ಪನ ಬರೆಹ ॥ ಜಡೆಯ ರಾಮೋಜ ಹೊಯ್ದಾತ ॥ "

ಈ ಎರಡು ಶಾಸನಗಳು ಒಂದೇ ಕಾಲದವುಗಳಾಗಿವೆ. ಮೊದಲಿನ ಶಾಸನವಲ್ಲಿ ಕರ್ಣಿಕ ದೇವಂಣಗಳ ಬರೆಹ, ರೇವಪ್ಪ ಎಂದಿದೆ. ಹೊಯ್ದಾತ ಕಲ್ಲುಕುಟಿಗ ರಾಮೋಜ. ಚಿತ್ರದುರ್ಗದ ೪ ನೇ ನಂಬರಿನ ಶಾಸನದಲ್ಲಿಯ ಬಲ್ಲಪದಂಡ್ನಾಯಕರು, ಸಿಂಗೆ ದಣ್ನಾಯಕರು ಲಿಂಗಪ್ರತಿಷ್ಠೆ ಮಾಡಿ ಸ್ಥಾನಾಚಾರ್ಯನಾದ ನರಹರಿ ದೇವರಿಗೆ ಕೊಟ್ಟಿದ್ದರೆ, ಅದೇ ಚಿತ್ರದುರ್ಗ ೩ನೆಯ ನಂಬರಿನ ಶಾಸನದಲ್ಲಿ ಹಿರಿಯ ಸಿದ್ಧಂಣನ ಮಗನಿಗೆ ಕೊಡಲಾಗಿದೆ. ಪ್ರಾರಂಭದ ಪದ್ಯ, ಕೊನೆಯ ಫಲಶ್ರುತಿಯ ವಚನಗಳಿಂದ ಹೊಸಗಾಲದ ಪ್ರಭಾವವು ಥಟ್ಟನೆ ಗೋಚರವಾಗುವುದು. ಅದರಂತೆ ಸ್ಥಾನಾಚಾರ್ಯರ ಹೆಸರುಗಳಲ್ಲೂ ಪರಿವರ್ತನೆಯಾದದ್ದು ಕಂಡುಬರುವುದು. ಆದರೆ ಅದೇ ಚಿತ್ರದುರ್ಗ ೧೪ ನೆಯ ನಂಬರಿನ ಶಾಸನದಲ್ಲಿ (ಕ್ರಿ. ಶ. ೧೪೧೧), —

" ವೀರಪ್ರತಾಪ ದೇವರಾಯನ ಮಗ ಮಹಾಮಂಡಳೇಶ್ವರ ಶ್ರೀ ತ್ರಿಯಂಬಕ ಚರಣಸ್ಮರಣ ಶ್ರೀ ವೀರ ಮಲ್ಲಣ್ಣೊಡೆಯರು ತಮ್ಮ ತಾಯಿ ಮಲ್ಲವ್ವೆಗೆ ಪರದಲ್ಲಿ ಸುಕೃತವಾಗಬೇಕೆಂದು ಶ್ರೀ ಹಿಡಂಬನಾಥ ದೇವರಂಗ ವೈಭವ ದೇವತಾರ್ಚನೆ ಕಾಲದಲ್ಲಿ, ಆ ಸ್ಥಾನದ ತಪೋಧನರಾದ ಇಡುಬ ಜೀಯ, ಸಿರಿಗಿರಿಜೀಯರು ಆ ಮಲ್ಲವ್ವೆಗೆ ಪುಣ್ಯಲೋಕ ಪ್ರಾಪ್ತಿಯಾಗಲೆಂದು ಆಶೀರ್ವಾದವನು ಮಾಡಿ ದೇವತಾ ಪ್ರಸಾದವಹ ಪುರವನು ಸುಖದಿ ಭೋಗಿಸ ಬೇಕೆ"ಂದು ಕೊಟ್ಟಿದೆ.

ಇದನ್ನು ನೋಡಿದರೆ, ಇಡಬಜೀಯ ಸಿರಿಗಿರಿಜೀಯರೆಂಬ ಹೆಸರುಳ್ಳವರು ತಪೋಧನರಾಗಿದ್ದು ವೀರಪ್ರತಾಪ ದೇವರಾಯನ ಮಗನಾದ ಮಲ್ಲಣ್ಣೊಡೆಯನ ತಾಯಿಗೆ ಆಶೀರ್ವಾದ ಮಾಡಬೇಕಾಗಿದ್ದರೆ ಇವರ ಗೌರವದ ಸಾಮಾಜಿಕ ಸ್ಥಾನವು ವ್ಯಕ್ತವಾಗುತ್ತದೆ. ಈ ಸಂಗತಿಯಿಂದ ಕ್ರಿ. ಶ. ೧೪೧೧ ರ ವರೆಗೂ ಪ್ರಾಚೀನ ಸ್ಥಾನಾಚಾರ್ಯರ ಪರಂಪರೆಯವರಾದ ಲಾಕುಳ-ಗುರುಗಳಿದ್ದರೆಂದು ನಿಚ್ಚಳವಾಗಿದೆ. ವಚನಗಳ ರಚನೆಗಳ ಕಾಲವೂ ಆರಂಭವಾಗಿದೆ. ಹಿಂದಿನ ಕಾಲದ ರೂಢಿಯಲ್ಲಿ ಹೊಸಗಾಲದ ಲಕ್ಷಣಗಳು ಕಂಡುಬರುತ್ತವೆ.

ಇದೇ ಸಂದರ್ಭದಲ್ಲಿ ಪ್ರಾಸಂಗಿಕವಾಗಿ ಇನ್ನೊಂದು ಮಾತನ್ನು ಹೇಳಬೇಕಾಗಿದೆ. ಅರಸಿಕೆರೆಯ ೧೦೮ ನೆಯ ಶಾಸನದಲ್ಲಿ, ವೈಶ್ಯಕುಲಾಭರಣನಾದ ಕುಂಜಸೆಟ್ಟಿಯು ಶಿವಪದವನ್ನು ಪಡೆದನೆಂದು ಹೇಳುವಾಗ "ತನುವಂ ಜಂಗಮದೆಡೆಯೊಳು ಮನಮುಂ ಶ್ರೀ ಸೋಮನಾಥ ಪದಪಂಕಜದೊಳು ವಿನಿಯೋಗಿಸಿ" ಶಿವಪದವನ್ನು ಪಡೆದನೆಂದಿದೆ. ಬಸವೇಶ್ವರನ ವಚನಗಳಲ್ಲಿ ಗುರುವಿಗೆ ತನು, ಲಿಂಗಕ್ಕೆ ಮನ, ಜಂಗಮಕ್ಕೆ ಧನವೀಯಬೇಕೆಂಬ ತತ್ವವನ್ನು ಅನೇಕ ಸಲ ಹೇಳಲಾಗಿದೆ. ಸೋಮನಾಥನ ಪದಪಂಕಜದೊಳು ಮನವನ್ನು ವಿನಿಯೋಗಿಸುವದರ ಬದಲಾಗಿ 'ಲಿಂಗ'ದಲ್ಲಿ ಮನವಿರಿಸುವುದು ಸಹಜವಾಗಿ ಹೊಂದಿಕೆಯಾಗುವುದು. ಸ್ಥಾವರಲಿಂಗದ ಬದಲಾಗಿ ಇಷ್ಟಲಿಂಗವು ಬರುವುದು ಸಹಜವಿದೆ. ಆದರೆ ಜಂಗಮದೆಡೆಯೊಳು ತನುವನ್ನು ವಿನಿಯೋಗಿಸುವುದರ ಬದಲಾಗಿ ಜಂಗಮಕ್ಕೆ ಧನವನ್ನು ವಿನಿಯೋಗಿಸಬೇಕೆಂಬ ತತ್ವವು ಪರಸ್ಪರ ವಿರುದ್ಧವಾಗಿ ಕಂಡುಬರುವುದು. ಇಲ್ಲಿ ಜಂಗಮ ಶಬ್ದಾರ್ಥದ ಬಳಕೆಯಲ್ಲೂ ವ್ಯತ್ಯಾಸವಿದೆ. 'ಜಂಗಮದಲ್ಲಿ ಜಾತಿಯನೆಣಿಸೆ' ಎಂದು ಬರುವ ಮಾತನ್ನು ಲಕ್ಷಿಸಬಹುದು. ಅಂತೂ ಬಸವೇಶ್ವರನ ಕಾಲದ ಜಂಗಮಕ್ಕೆ ಧನವನ್ನು ವಿನಿಯೋಗಿಸಬೇಕೆಂಬ ತತ್ವವು ಇನ್ನೂ ಈ ಕಾಲದಲ್ಲಿ ಬಳಕೆಯಲ್ಲಿ ರೂಢವಾಗಿದ್ದಿಲ್ಲವೆಂದು ಹೇಳಬಹುದು. ಜಂಗಮ ಶಬ್ದದ ವಿಷಯವನ್ನೂ ಮುಂದೆ ಪ್ರಸಂಗಾನುಸಾರ ವಿವೇಚಿಸಲಾಗುವುದು. ಅದರಂತೆ "ಸ್ಥಾವರಜಂಗಮ ಒಂದೇ" ಮತ್ತು "ಜಂಗಮದಲ್ಲಿ ಜಾತಿಯನೆಣಿಸೆ" ಎಂಬ ವಚನಗಳಲ್ಲಿರುವ ತತ್ವಗಳನ್ನು ಹಿಂದಿನ ಕಾಲದ ಸ್ಥಿತಿಗೆ ಹೋಲಿಸಿದರೆ ಸ್ಥಾವರಲಿಂಗೋಪಾಸನೆ ಮತ್ತು ಸ್ಥಾನಾಚಾರ್ಯರಾದ ತಪೋಧನರ ಬದಲಾಗಿ ಜಾತಿ

ವಿರಹಿತವಾದ ಜಂಗಮತತ್ವವನ್ನು ಬಸವೇಶ್ವರ ಮುಂತಾದ ವಚನಕಾರರು ಎತ್ತಿಹಿಡಿದಿರುವರೆಂದು ಕಂಡುಬರುವುದು. ಸ್ಥಾವರದ ಬದಲು ಈ ಹೊಸ ವಿರಕ್ತ ಜಂಗಮತ್ವಕ್ಕೆ ಪ್ರಾಬಲ್ಯವು ಹೆಚ್ಚಿದೆ. ಪೂರ್ವದಲ್ಲಿ ಸ್ಥಾನಾಚಾರ್ಯರಲ್ಲದ ಅನ್ಯ ಜಾತಿಯವರು ವ್ರತಿಗಳಾಗಿರುತ್ತಿದ್ದುದು ಅತಿ ವಿರಳವಾಗಿ ಶಾಸನಗಳಲ್ಲಿ ಕಾಣುವುದು. ಅದೇ ಸಂಪ್ರದಾಯವು ಈ ಹೊಸ ಗುರು–ಮಾರ್ಗದಲ್ಲಿ ಪ್ರಬಲವಾಗಿ, ಸ್ಥಾವರಲಿಂಗೋಪಾಸನೆಯು, ಅದರೊಡನೆ, ದೇವಾಲಯ ಸಂಸ್ಥೆಯು ಹಿಂದೆ ಬಿದ್ದಿದೆ.

---

## ಮೂರನೆಯ ಪ್ರಕರಣ

### ಲಾಕುಳ ಸಾಂಪ್ರದಾಯ

ಸೂತಸಂಹಿತೆಯಲ್ಲಿ ಪಂಚರಾತ್ರ, ಕಾಪಾಲ, ಕಾಲಾಮುಖ, ಶಾಕ್ತ, ಬೌದ್ಧ, ಅರ್ಹತ್, ಪಾಶುಪತ, ಶಾಂಭವ ಈ ಎಂಟು ಮತಗಳಲ್ಲಿ ದೀಕ್ಷೆ ಹೊಂದಿದವನು ಬ್ರಾಹ್ಮಣಾಧಮನಾಗುತ್ತಾನೆಂದು ನಿಂದಿಸಲಾಗಿದೆ (ಸೂತಸಂಹಿತೆ, ಅಧ್ಯಾಯ-೩೨, ಶ್ಲೋಕಗಳು ೩೯, ೪೦). ಪಾಶುಪತ, ಕಾಲಾಮುಖ, ಕಾಪಾಲ ಈ ಮೂರು ಮಾಹೇಶ್ವರ ಮತಗಳು. ಈ ಎಂಟು ಮತಗಳಲ್ಲಿ ಶೈವದ ಉಲ್ಲೇಖವಿಲ್ಲ. ಶಾಕ್ತ ಮತ್ತು ಶಾಂಭವಿ ದೀಕ್ಷಿತರನ್ನೂ, ಪಾಂಚರಾತ್ರ, ಬೌದ್ಧ, ಅರ್ಹತ್‌ರನ್ನೂ ಒಂದೇ ಪಙ್ಕ್ತಿಯಲ್ಲಿ ಸೇರಿಸಿ ನಿಂದಿಸಲಾಗಿದೆ. ಅದರಂತೆ ವಾಮನಪುರಾಣದಲ್ಲಿ (೬-೮೬) ಶೈವರ ನಾಲ್ಕು ಮತಗಳ, ಅಂದರೆ ಶೈವ, ಪಾಶುಪತ, ಕಾಲದಮನ, ಕಾಪಾಲಿಕರ ಉಲ್ಲೇಖವಿರುವುದು. ಇಲ್ಲಿ ಕಾಲಾಮುಖದ ಬದಲಾಗಿ ಕಾಲದಮನ ಎಂದಿದೆ. ಈ ಪುರಾಣಗಳ ಕಾಲವನ್ನು ನಿಶ್ಚೈಸುವುದು ಕಷ್ಟ ಸಾಧ್ಯ.

ಶಂಕರಾಚಾರ್ಯರು ಬ್ರಹ್ಮಸೂತ್ರ ಭಾಷ್ಯ (ಅಧ್ಯಾಯ ೨, ಪಾದ ೨) ಪತ್ಯಾಧಿಕರಣದಲ್ಲಿ ಪಶುಪತಿ ಮತದವರೆಲ್ಲರಿಗೂ ಮಾಹೇಶ್ವರರೆಂದಿರುವರು. ಟೀಕಾಕಾರನಾದ ವಾಚಸ್ಪತಿ ಮಿಶ್ರನು, ಶೈವ, ಪಾಶುಪತ, ಕಾರುಣಿಕ ಸಿದ್ಧಾಂತ, ಕಾಪಾಲಿಕ ಎಂದು ನಾಲ್ಕು ಬಗೆಯವರನ್ನು ಹೇಳಿದ್ದಾನೆ.

ಯಾಮುನಾಚಾರ್ಯನು ಕಾಲದಮನ, ಕಾರುಣಿಕದ ಬದಲಾಗಿ ಕಾಲಾಮುಖ ಎಂದೂ, ರಾಮಾನುಜಾಚಾರ್ಯನು, ಕಾಪಾಲಃ, ಕಾಲಾಮುಖಃ, ಪಾಶುಪತಃ, ಶೈವಾಃ ಎಂದೂ ಉಲ್ಲೇಖಿಸಿರುವರು. ಭಾಸ್ಕರಾಚಾರ್ಯನು ಕಾರಣಿಕ ಸಿದ್ಧಾಂತ ಸ್ಥಾನದಲ್ಲಿ ಕಾಠಕ ಸಿದ್ಧಾಂತಿಯೆಂದು ಹೆಸರಿಸಿರುವನು. ನಿಂಬಾರ್ಕ ಸಂಪ್ರದಾಯದ ಅನುಯಾಯಿಯಾದ ಶ್ರೀನಿವಾಸನು ತನ್ನ 'ವೇದಾಂತಕೌಸ್ತುಭ' ಎಂಬ ಟೀಕೆಯಲ್ಲಿ ಕಾಠಕ ಅಥವಾ ಕಾರುಣಿಕದ ಸ್ಥಳದಲ್ಲಿ ಕಾಳಾಮುಖ ಎಂದಿರುವನು. ಮಾಧ್ವಭಾಷ್ಯದಲ್ಲಿ ಸಾಮಾನ್ಯವಾಗಿ ಪಾಶುಪತವೆಂದಿದ್ದರೆ, ಜಯತೀರ್ಥೀಯ ನ್ಯಾಯಸುಧಾ ಎಂಬ ಗ್ರಂಥದಲ್ಲಿ ಶೈವ, ಪಾಶುಪತ, ಕಾಲಾಮುಖ, ಕಾಪಾಲಿಕ, ಈ ನಾಲ್ವರನ್ನು ಹೇಳಲಾಗಿದೆ. ಸುಪ್ರಭೇದಾಗಮದ ಕ್ರಿಯಾಪಾದದಲ್ಲಿ ಶೈವ, ಪಾಶುಪತ, ಸೋಮ, ಲಾಕುಲವೆಂದು ನಾಲ್ಕನ್ನು ಹೇಳಿ, ಶೈವವು ಸೌಮ್ಯವೆಂದೂ, ಪಾಶುಪತವು ರೌದ್ರವೆಂದೂ, ವರ್ಣಿಸಿರುವುದಲ್ಲದೆ ಶೈವದಲ್ಲಿ ವಾಮ, ದಕ್ಷಿಣ, ಮಿಶ್ರ, ಸಿದ್ಧಾಂತ ಎಂದು ನಾಲ್ಕು ಪ್ರಭೇದಗಳನ್ನು ಹೇಳಲಾಗಿದೆ. ಇದೇ ಶೈವ ಸಿದ್ಧಾಂತವನ್ನು ವಿಸ್ತರಿಸಿ ಹೇಳುವಾಗ ನಿಜಗುಣ ಶಿವಯೋಗಿಯು ತನ್ನ ವಿವೇಕ-ಚಿಂತಾಮಣಿಯಲ್ಲಿ ಪಾಶುಪತ, ಕಾಪಾಲಿಕ, ಮಹಾವ್ರತವೆಂದು ಶೈವವನ್ನುಳಿದ ಮೂರು ಮತಗಳನ್ನು ಹೇಳಿರುವನು ಗುಣರತ್ನಸೂರಿಯು ತರ್ಕಸಂಗ್ರಹ ದೀಪಿಕೆಯಲ್ಲಿ ಕಾಲಾಮುಖ, ಪಾಶುಪತ, ಶೈವ, ಮಹಾವ್ರತಧರ ಎಂದಿರುವನು. ಸೋಮದೇವನು ಯಶಸ್ತಿಲಕದಲ್ಲಿ ಕಾಲಾಮುಖರಿಗೆ ಅಸಿತವಕ್ತ್ರ ಎಂದು ಅಂದಿರುವನು. ವಿದ್ಯಾರಣ್ಯರ ಸರ್ವದರ್ಶನ ಸಂಗ್ರಹದಲ್ಲಿ ಪಾಶುಪತ ಶೈವ-ಪ್ರತ್ಯಭಿಜ್ಞಾರಸೇಶ್ವರ ಎಂದು ನಾಲ್ಕು ಪ್ರಕ್ರಿಯೆಗಳನ್ನು ಹೇಳಲಾಗಿದೆ.

ಈ ಎಲ್ಲರ ಹೇಳಿಕೆಗಳನ್ನು ಒಟ್ಟಾಗಿ ವಿಮರ್ಶಿಸಿದರೆ, ಪಾಶುಪತ, ಮತ್ತು ಮಾಹೇಶ್ವರವೆಂದು ಸಾಮಾನ್ಯವಾಗಿ ಎಲ್ಲವುಗಳಿಗೆ ಸಂಬೋಧಿಸಿರುವುದು ಕಂಡುಬರುವುದಲ್ಲದೆ, ವಿಶಿಷ್ಟ ಒಳಪ್ರಭೇದಗಳನ್ನು ಪಾಶುಪತ ಮತವನ್ನು ಎಲ್ಲರೂ ತಪ್ಪದೆ ನಿರ್ದೇಶ ಮಾಡಿರುವುದು ಕಂಡುಬರುತ್ತದೆ. ಸೂತಸಂಹಿತೆಯಲ್ಲಿ ಮತ್ತು ಯಾಮುನಾಚಾರ್ಯ, ರಾಮಾನುಜಾಚಾರ್ಯ, ಶ್ರೀನಿವಾಸ (ನಿಂಬಾರ್ಕ ಸಂಪ್ರದಾಯ), ಜಯತೀರ್ಥ (ಮಾಧ್ವ), ಗುಣರತ್ನಸೂರಿ, ಇವರೆಲ್ಲರೂ ತಮ್ಮ ತಮ್ಮ ಗ್ರಂಥಗಳಲ್ಲಿ ಕಾಲಾಮುಖ ಎಂದು ಹೇಳಿರುವಲ್ಲಿ, ವಾಮನ ಪುರಾಣದಲ್ಲಿ 'ಕಾಲದಮನ'

ವೆಂದೂ, ವಾಚಸ್ಪತಿಮಿಶ್ರನು 'ಕಾರುಣಿಕ'ವೆಂದೂ, ಭಾಸ್ಕರಾಚಾರ್ಯನು 'ಕಾಠಕ'ವೆಂದೂ, ಸೋಮದೇವನು ಯಶಸ್ತಿಲಕದಲ್ಲಿ 'ಅಸಿತವಕ್ತ್ರ' ವೆಂದೂ, ಸುಪ್ರಭೇದಾಗಮದಲ್ಲಿ 'ಲಾಕುಲ'ವೆಂದೂ, ನಿಜಗುಣ-ಶಿವಯೋಗಿಯ ಗ್ರಂಥದಲ್ಲಿ 'ಮಹಾವ್ರತಧರ' ಎಂದೂ ಬೇರೆ ಬೇರೆಯಾಗಿ ಹೆಸರಿಸಲಾಗಿದೆ. ಕಾಪಾಲಿಕರ ವಿಷಯದಲ್ಲಿ ಎಲ್ಲರೂ ಒಮ್ಮತವಾಗಿದ್ದರೂ, ಸುಪ್ರಭೇದಾಗಮದಲ್ಲಿ ಕಾಪಾಲಿಕರ ಬದಲಾಗಿ "ಸೋಮ" ಎನ್ನಲಾಗಿದೆ. ಸರ್ವದರ್ಶನ ಸಂಗ್ರಹದಲ್ಲಿ ಕಾಲಾಮುಖ, ಕಾಪಾಲಿಕರ ಉಲ್ಲೇಖವಿಲ್ಲ. ಪ್ರತ್ಯಭಿಜ್ಞಾ, ರಸೇಶ್ವರ ಎರಡನ್ನು ಬೇರೆಯಾಗಿ ಸೇರಿಸಲಾಗಿದೆ. ಸರ್ವದರ್ಶನಕಾರರ ಕಾಲದಲ್ಲಿ ಕಾಲಾಮುಖ, ಕಾಪಾಲಿಕರು ಗಣ್ಯರಾಗಿಲ್ಲ. ಶ್ರೀಕಂಠ ಶಿವಾಚಾರ್ಯನು ಇವರೆಲ್ಲರಿಗೂ ಅತಿಮಾರ್ಗಿಕರೆಂದಿರುವನು. ಒಟ್ಟಾರೆ ನೋಡಿದರೆ ಪಾಶುಪತ ಮತದ ವಿಷಯದಲ್ಲಿ ಪ್ರಾಚೀನ ಗ್ರಂಥಗಳಲ್ಲಿ ಸಂದೇಹವಿಲ್ಲ. ಕಾಲಾಮುಖ ಸಂಪ್ರದಾಯದ ವಿಷಯದಲ್ಲಿ ಕಾಲಾನುಸಾರ ಬೇರೆ ಹೆಸರುಗಳು—ಅಂದರೆ ಕಾಳಾಮುಖ, ಕಾಠಕ, ಕಾರುಣಿಕ, ಲಾಕುಳ, ಮಹಾವ್ರತಧರ ಎಂದಿರುವುದು ಕಂಡುಬರುತ್ತದೆ. ಅದರಂತೆ ಕಾಪಾಲಕರಿಗೆ ಸೋಮಸಿದ್ಧಾಂತಿಗಳೆಂದೂ ಮಹಾವ್ರತಧರರೆಂದೂ ಕರೆಯಲಾಗಿದೆ. ಪುನಃ ಶೈವರಲ್ಲಿಯ ವಾಮ, ದಕ್ಷಿಣ, ಮಿಶ್ರ, ಸಿದ್ಧಾಂತವೆಂಬ ನಾಲ್ಕು ಪ್ರಭೇದಗಳು ಅನಂತರದವುಗಳೆಂದು ಕಂಡುಬರುವುದು. ಕಾಶ್ಮೀರ ಶೈವಕ್ಕೆ ಪ್ರತ್ಯಜ್ಞಾ ಎಂದು ಸರ್ವದರ್ಶನ ಸಂಗ್ರಹದಲ್ಲಿದ್ದರೆ, ಸೋಮದೇವನು ಅದನ್ನು ಶಾಕ್ತರ ಪ್ರಕರಣದಲ್ಲಿ ಸೇರಿಸಿರುವನು. 'ಕಾಠಕ' ಮತ್ತು 'ಕಾರುಣಿಕ' ಎಂಬ ಹೆಸರುಗಳು ಶುಕ್ಲ ಯಜುರ್ವೇದ ಶಾಖೆಗಳಲ್ಲಿವೆಯೆಂದು ಕೋಲಂಗಡೆಯವರು ತಮ್ಮ ಮರಾರಿ ಗ್ರಂಥದಲ್ಲಿ ಹೇಳಿರುವರು. ಕೃಷ್ಣದೇವರಾಯನ ಕಾಲದಲ್ಲಿ ಕಠಶಾಖೆಯ ಬ್ರಾಹ್ಮಣ ನೋರ್ವನು ಪ್ರಸಿದ್ಧ ಕಾಲಾಮುಖ ಸ್ಥಲವಾದ ಕೋಟೀಶ್ವರ ದೇವಾಲಯದ ಗ್ರಾಮಗಳನ್ನು ತಿರುಗಿ ಬಿಡಿಸಿಕೊಂಡು ಬಂದಿರುವನು. ಕಾಳಾಮುಖರು ಪಂಚಾಗ್ನಿಯ ಸಾಧನ ಧನದಿಂದ ಸೂರ್ಯನ ಉಪಾಸನೆಯನ್ನು ಮಾಡಿ ತತ್ವಜ್ಞಾನವನ್ನು ಪಡೆಯುತಿದ್ದ ವರ್ಣನೆಯು ಹೊಂಬಳದ ಶಾಸನದಲ್ಲಿದೆ. ಹರಿಹರ ಮತ್ತು ರಾಘವಾಂಕರು, ಅಲ್ಲಮಪ್ರಭು ಮತ್ತು ಸಿದ್ಧರಾಮೇಶ್ವರನ ಭೆಟ್ಟಿಯ ಸಂದರ್ಭದಲ್ಲಿಯ ಸಂವಾದವನ್ನು ತಂತಮ್ಮ ಗ್ರಂಥಗಳಲ್ಲಿ ಕೊಟ್ಟಿರುವರು. ಕೆರೆಕಟ್ಟಿಸುತ್ತ ದೇಹಕ್ಕೆ ಆಯಾಸಬಡಿಸುವುದು ತರವಲ್ಲವೆಂದು ಅಲ್ಲಮನು ಸಿದ್ಧರಾಮನಿಗೆ ಹೇಳಿದಾಗ "ಸಕಲ ಪ್ರಾಣಿಗಳಲ್ಲಿ ಕರುಣೆ

ತೋರಿಸುವುದೇ ಧರ್ಮ " ಎಂಬ ಅಭಿಪ್ರಾಯವನ್ನು ಸಿದ್ಧರಾಮನು ವ್ಯಕ್ತ ಗೊಳಿಸಿರುವನು. ಇವರಿಬ್ಬರ ಸಂವಾದದ ಮೇಲಿಂದ ಸಿದ್ಧರಾಮನು "ಕಾರುಣಿಕ ಸಿದ್ಧಾಂತಿ" ಯೆಂದೂ, ಅಲ್ಲಮನು ಶಾಂಭವೀ ವಿದ್ಯೆಗೆ ಮಹತ್ವ ಕೊಡುವವನೆಂದೂ ವ್ಯಕ್ತವಾಗುತ್ತದೆ. ಕಾರುಣಿಕ ಶಾಖೆ ಯವರು ಮಗಧ ದೇಶದವರಂತೆ. ವಾಜಿವಂಶದ ಕಾಣ್ವ, ಮಾಧ್ಯಂದಿನ ಶಾಖೆಯ ಬ್ರಾಹ್ಮಣರು ಕಾಳಾಮುಖ ದೇವಸ್ಥಾನಗಳಿಗೆ ಮಹತಿಯನ್ನು ಕೊಟ್ಟಿದ್ದನ್ನು ಗಮನಿಸಿದಾಗ, ಶುಕ್ಲಯಜುರ್ವೇದದ ಬ್ರಾಹ್ಮಣರಿಗೂ ಈ ಕಾಳಾಮುಖರಿಗೂ ಏನೋ ಒಂದು ಸಾಂಪ್ರದಾಯಿಕ ಸೌಹಾರ್ದ ವಿದ್ದಂತೆ ಗೋಚರವಾಗುವುದು. ಕಾಠಕ, ಕಾರುಣಿಕ, ಶುಕ್ಲಯಜುರ್ವೇ ದದ ಶಾಖೆಗಳೆಂದು ಪ್ರತೀತಿಯಿರುವುದರಿಂದಲೂ, ಶಿವಧರ್ಮಕ್ಕೆ ಇವರು ತೋರಿಸಿರುವ ಗೌರವದಿಂದಲೂ, ಸ್ವತಃ ಶೈವರು ಶುಕ್ಲಯಜುರ್ವೇದದ ಶತರುದ್ರೀಯ ಮುಂತಾದವುಗಳನ್ನು ಆಧಾರಗಳೆಂದು ಮನ್ನಿಸುತ್ತಿರುವುದ ರಿಂದಲೂ ಈ ತರದ ಊಹೆಗೆ ಆಸ್ಪದವಿದೆ.

ವಿವೇಕ ಚಿಂತಾಮಣಿಯಲ್ಲಿ ಹೇಳಿರುವುದು ಈ ರೀತಿ—

" ಮತ್ತಮಾ ಅಧಿಕಾರಿಗಳಿಗೆ ಮಾರ್ಗಸಂಕರವಾಗದಂತೆ ಬೇರೆ ಬೇರೆ **ವಿಧಿಪ್ರತಿಪಾದಕಂಗ**ಳಾವಾವೆಂದಡೆ,

೧. **ಶುದ್ಧ ವೈದಿಕ**:—ಸೂತಸಂಹಿತಾ, ಪಾರಾಶರ ಪುರಾಣಾದಿಗಳೇ ಶುದ್ಧವೈದಿಕ ಪ್ರತಿಪಾದಕಂಗಳು;

೨. **ತಾಂತ್ರಿಕ ವೈದಿಕ:**—ಶಿವ-ರಾಘವ ಸಂವಾದ, ವಾಯುವೀಯ ಸಂಹಿತಾದಿಗಳೇ ತಾಂತ್ರಿಕ ವೈದಿಕ ಪ್ರತಿಪಾದಕಂಗಳು;

೩. **ಶುದ್ಧ ತಾಂತ್ರಿಕ:**—ಶೈವ, ಪಾಶುಪತ, ಸೋಮ, ಲಾಕುಳ ವೆಂಬ ಶಾಸ್ತ್ರಾಂತರಗಳೇ ತಾಂತ್ರಿಕ ಪ್ರತಿಪಾದಕಂಗಳು;

೪. **ವೈದಿಕ ತಾಂತ್ರಿಕ:**—ಭಾಗವತಿ ಶಿವಸಿದ್ಧಾಂತಾದಿಗಳೇ ವೈದಿಕ ತಾಂತ್ರಿಕ ಪ್ರತಿಪಾದಕಗಳೆಂದು ಪೇಳ್ವದು.

"ಈ ಶಿವಸಿದ್ಧಾಂತವು ಕೂರ್ಮ, ಲೈಂಗ, ಸೂತಸಂಹಿತಾ, ಕೇದಾರಖಂಡ, ಸಿದ್ಧಾಂತಾಗಮ ಸ್ಮೃತ್ಯಾದಿಗಳಿಂ ದೃಢತರಮೆಂತಲು, ಅಥರ್ವಣ ಶಿಖಾದ್ಯಷ್ಟಾದಶೋಪನಿಷತ್ತುಗಳಲ್ಲಿ............''

ಶೈವಪ್ರಭೇದಗಳನ್ನು ವಾಮ, ದಕ್ಷಿಣ, ಮಿಶ್ರ, ಸಿದ್ಧಾಂತಗಳೆಂದು, ಹೇಳಿ, ಅವುಗಳ ಲಕ್ಷಣಗಳನ್ನೂ ಹೇಳಲಾಗಿದೆ. ಅದು ಈ ರೀತಿ : "(೧) ಶಕ್ತಿಪರವಾದುದೇ ವಾಮ, (೨) ಭೈರವಪರವಾದುದೇ ದಕ್ಷಿಣ, (೩) ಸಪ್ತಮಾತೃಕಾಪರವಾದುದೇ ಮಿಶ್ರ, (೪) ಪರಶಿವಪರವಾದುದೇ ಸಿದ್ಧಾಂತಮಕ್ಕುಂ."

ಇದರಲ್ಲಿ ಪಾಶುಪತ– ಶೈವ - ಸೋಮ – ಲಾಕುಳವೆಂಬವುಗಳನ್ನು ಶುದ್ಧ ತಾಂತ್ರಿಕ ಮತಗಳೆಂದು ಹೇಳಿರುವುದು ಮಹತ್ವದ್ದಾಗಿದೆ. ಹಿಂದೆ ಹೇಳಿದ ಸುಪ್ರಭೇದಾಗಮದಲ್ಲಿಯೂ ಇದರಂತೆ ವರ್ಣಿಸಲಾಗಿದೆ. ಈ ಮೇಲೆ ಹೇಳಿದ ಮತಗಳಲ್ಲಿ ಪಾಶುಪತ, ಸೋಮ, ಲಾಕುಳವನ್ನುಳಿದು ಶುದ್ಧತಾಂತ್ರಿಕ ಶೈವವೊಂದು ಇದ್ದಿತೆಂದೂ, ನಿಜಗುಣ ಶಿವಯೋಗಿಯ ಶಿವಸಿದ್ಧಾಂತವು ಬೇರೊಂದು ಎಂದೂ ಇಬ್ಬಗೆಯಾಗಿದ್ದುದು ಕಂಡು ಬರುವುದು.

## ಲಾಕುಳಶೈವ :

ನಾಗಾರ್ಜುನಕೃತ 'ಕಕ್ಷಪುಟಿ' ಎಂಬ ಗ್ರಂಥವೊಂದು ಬೆಳಗಾವಿ ಆಬಾಜಿ ರಾಮಚಂದ್ರ ಸಾವಂತರ ಶ್ರೀರಾಮತತ್ವ ಪ್ರಕಾಶ ಅಚ್ಚುಕೂಟದಲ್ಲಿ ಶಾ. ಶ. ೧೮೦೯ ರಲ್ಲಿ ಅಚ್ಚಾಗಿದೆ. ಭಾಷೆ ಸಂಸ್ಕೃತ. ಅದರಲ್ಲಿ ಅಥರ್ವಣ ವೇದೋಕ್ತ ಮಂತ್ರಸಾಧನ ಅಂದರೆ ಚಾರಣ, ಮಾರಣ, ಉಚ್ಚಾಟನ, ಸ್ತಂಭನ, ಮೋಹನ, ವಶೀಕರಣ, ಜಲಸ್ತಂಭನ, ಸೇನಾಸ್ತಂಭನ, ಅನೇಕ ರೂಪಧಾರಣ, ಯಕ್ಷಿಣಿ ವಿದ್ಯಾಸಾಧನ, ಚೇಟಕ, ಅಂಜನ, ದಿವ್ಯದೃಷ್ಟಿ, ಅದೃಶ್ಯವಾಗುವುದು, ಪಾದುಕಾಸಾಧನ, ಗುಟಿಕಾಧಾರಣ, ಅಂತರಿಕ್ಷ ಗಮನ, ಇಂದ್ರಜಾಲವಿದ್ಯಾ, ಕ್ಷುತ್ಪಿಪಾಸಾನಿವಾರಣ, ಅಮೃತಸಂಜೀವನೀ ವಿದ್ಯಾ, ಶಾಬರಮಂತ್ರ ಇತ್ಯಾದಿ ಗುಹ್ಯ ವಿಷಯಗಳಿವೆ. ಯಾವ ಯಾವ ಗ್ರಂಥಗಳಿಂದವಿಷಯಗಳನ್ನು ಸಂಗ್ರಹಿಸಲಾಗಿದೆ ಎಂಬದನ್ನು ಗ್ರಂಥಕಾರನೇ ಸ್ವತಃ ಈ ಕೆಳಗಿನಂತೆ ಹೇಳಿರುವನು.

" ಅನ್ಯೈರ್ದೇವಗಣೈಃ ಸಿದ್ಧೈರ್ಮುನಿಭಿಃ ಸಾಧಕೋತ್ತಮೈಃ ।
ಯದುಕ್ತಂ ಹಿ ಶಾಸ್ತ್ರೇಷು ತತ್ಸರ್ವಮವಲೋಕಿತಂ ॥ ೫ ॥
**ಶಾಂಭವೇ ಹ್ಯಾಮಲೇ ಶಾಕ್ತೇ ವಕುಲೇ ಕಾಲೇಯ ಡಾಮರೇ।**
**ಸ್ವಚ್ಛಂದೇ ಲಾಕುಲೇ ಶೈವೇ** ರಾಜತಂತ್ರೇ ಅಮೃತೇಶ್ವರೇ ॥ ೬ ॥
ಉದ್ಗೀಶೇ ವಾತುಲೇ ತಂತ್ರೇ ಉಚ್ಛಿಷ್ಟೇ ಸಿದ್ಧಶಾಂಬರೇ ।
ಕಿಂಕಿಣೀಮೇರು ತಂತ್ರೇ ಚ ಕಾಲಚಂಡೀಶ್ವರೀಮತೇ ॥ ೭ ॥
ಶಾಕಿನೀ ಡಾಕಿನೀ ತಂತ್ರೇ ರೌದ್ರೇಽನುಗ್ರಹನಿಗ್ರಹೇ ।
ಕೌತುಕೇ ಶಕ್ತಿತಂತ್ರೇ ಚ ನಿರಾಕಾರ ಗುಣೋತ್ತರೇ ॥ ೮ ॥
ಹರಮೇಖಲೇ ತಂತ್ರೇ ಇಂದ್ರಜಾಲರಸಾರ್ಣವೇ ।
ಅಥರ್ವಣೇ ಮಹಾವೇದೇ ಚಾರ್ವಾಕೇ ಗಾರುಡೇಽಪಿ ಚ ॥ ೯ ॥
ಇತ್ಯೇವಮಾಗಮೋಕ್ತಂ ಚ ವಕ್ತ್ರಾದ್ವಕ್ತ್ರೇಣ ಯಚ್ಛ್ರುತಂ ।
ತತ್ಸರ್ವಂ ಸಮುದ್ಧೃತ್ಯ ದಧ್ನೋಧೃತಮಿವಾದರಾತ್ ॥ ೧೦ ॥

ಗ್ರಂಥದ ವಿಷಯಗಳು :

ಸಾಧಕಾನಾಂ ಹಿತಾರ್ಥಾಯ ಮಂತ್ರಖಂಡಮಿಹೋಚ್ಯತೇ ।
ವಶ್ಯಮಾಕರ್ಷಣಂ ಸ್ತಂಭೋ ಮೋಹ ಉಚ್ಚಾಟ
ಮಾರಣಂ ॥ ೧೧ ॥
ವಿದ್ವೇಷಂ ವ್ಯಾಧಿಕರಣಂ ಪಶುಸಸ್ಯಾರ್ಥನಾಶನಂ ।
ಕೌತುಕಂ ಚೇಂದ್ರಜಾಲಂ ಚ ಯಕ್ಷಿಣೀ ಮಂತ್ರಸಾಧನಂ ॥ ೧೨ ॥
ಚೇಟಕಾಂಜನಂ ಏವಮದೃಶ್ಯಂ ಪಾದುಕಾಗತಿಃ ।
ಗುಟಿಕಾ ಖೇಚರತ್ವ ಮೃತಸಂಜೀವನಾದಿಕಂ ॥ ೧೩ ॥
ತಥಾ ಕಕ್ಷಪುಟೀ ಸಿದ್ಧ ಸಾಂಗೋಪಾಂಗಮನೇಕಧಾ ।
ಸುಸಾಧ್ಯ ಪ್ರತ್ಯಯೋಪೇತಂ ಸಾಧಕಾನಾಂ ಹಿತಂ ಪ್ರಿಯೇ ॥ ೧೪ ॥

ಇತಿ ನಾಗಾರ್ಜುನ ವಿರಚಿತೆ ಕಕ್ಷಪುಟಿ ಮಂತ್ರತಂತ್ರ ಸಾಧನನಾಮ ಪ್ರಥಮ ಪಟಲ " ಇತ್ಯಾದಿ.

ಗ್ರಂಥಕಾರನು ಯಾವ ಕಾಲದ ನಾಗಾರ್ಜುನನೊ ತಿಳಿಯದು. " ಯದುಕ್ತಂ ಹಿ ಶಾಸ್ತ್ರೇಷು ತತ್ಸರ್ವಮವಲೋಕಿತಂ; " " ಇತ್ಯೇವಮಾಗಮೋಕ್ತಂ " ಎಂದಿರುವುದರಿಂದ, ಈ ತಂತ್ರ ಗ್ರಂಥಗಳಿಗೆ ಶಾಸ್ತ್ರವೆಂದೂ, ಆಗಮಗಳೆಂದೂ ಕರೆದಿದ್ದಾನೆ. ಈ ತಂತ್ರ ಶಾಸ್ತ್ರಗಳಲ್ಲಿ

" ಲಾಕುಲವು " ಒಂದಾಗಿದೆ. ಇದರಿಂದ ಲಾಕುಲಾಗಮವು ಸ್ವತಂತ್ರ ಆಗಮವಿದ್ದಂತೆ ತೋರುವುದು.*

ಹಡಗಲಿ ತಾಲೂಕ ಹಲಗೊಂಡಿಯ ಶಾಸನದಲ್ಲಿ (S. I. I. Md. No. 163; 1093) ಮುದಿನೀರ ತೀರ್ಥದ ರಾಮೇಶ್ವರದ ಮಲೆಯಾಳ ಪಂಡಿತ ದೇವರ ಶಿಷ್ಯ ಪರಂಪರೆಯ ಸಕಳೇಶ ಮುನಿಯನ್ನು ವರ್ಣಿಸುವಾಗ **"ಶ್ರೀ ಮಲ್ಲಕುಳೀಶ್ವರ ದೇವಮುಖ ಕಮಳ ವಿನಿರ್ಗತ ಸಕಳ ಶಾಸ್ತ್ರಾರ್ಥರಪ್ಪ"** ಎಂದಿರುವುದರಿಂದಲೂ, ಹರಪನಹಳ್ಳಿ ತಾಲೂಕಿನ ಗಡಿಹಳ್ಳಿಯ ಶಾಸನ ದಲ್ಲಿ (S. I. I. Md. No. 128-1065) ಶ್ರೀಪರ್ವತದ ಅಗಸ್ತೇಶ್ವರ ಸಂತತಿ ಮಠದ ತಪೋಧನರಾದ ದಿವ್ಯಶಕ್ತಿ ಪಂಡಿತ ಮತ್ತು ವಾಮಶಕ್ತಿ ಪಂಡಿತ ದೇವರನ್ನು ವರ್ಣಿಸುವಾಗ " **ಲಾಕುಳ ದೇವಾಗಮದೀಲೋಕ** ಜನ ಸ್ತುತ್ಯಮಾಗೆ " ಎಂದಿರುವುದರಿಂದಲೂ ಲಕುಳೀಶ್ವರನಿಂದ ಹೇಳಲ್ಪಟ್ಟ ತಂತ್ರಕ್ಕೆ ಶಾಸ್ತ್ರವೆಂದೂ, ಲಾಕುಳಾಗಮವೆಂದೂ ಎನ್ನುವ ರೂಢಿಯಿದ್ದಿ ತೆಂದು ಕಂಡುಬರುವುದು. ಕರ್ನೂಲ, ನಂದಿಕೊಟ್ಕೂರದ ಶಾಸನದಲ್ಲಿ (S. I. I. Md. No. 134-1064) ಶ್ರೀಪರ್ವತದ ಮೂಸಂಗಿಯ ಬ್ರಹ್ಮೇಶ್ವರದಾಚಾರ್ಯರ್ ಗಂಗರಶಿ ಭಟ್ಟಾರಕರ ಶಿಷ್ಯರಾದ ಸುರೇಶ್ವರ ಪಂಡಿತರನ್ನು **ಕಾಳಾಮುಖ ಸಮಯ** ಸರೋವರ ರಾಜಹಂಸರ್, **ಲಾಕುಳ**

---

* ಈ ಗ್ರಂಥದಲ್ಲಿಯ ಮೇಲಿನ ಜಾರಣಮಾರಣಾದಿ ವಿದ್ಯೆಗಳು ಪೂರ್ವಕಾಲದಲ್ಲಿ ರಾಜರಿಗೆ ಬೇಕಾಗುತ್ತಿದ್ದವು. ಚಾಣಕ್ಯನ ಅರ್ಥಶಾಸ್ತ್ರದಲ್ಲಿಯೂ ಮನುಸ್ಮೃತಿಯಲ್ಲಿಯೂ ಇಂಥ ವಿದ್ಯೆಗಳನ್ನು ಬಲ್ಲವರನ್ನು ಅರಸರು ಇಟ್ಟುಕೊಳ್ಳಬೇಕೆಂದು ಹೇಳಿರುವುದು. ಅರಸನು ಉಣ್ಣುವ ಅನ್ನವನ್ನು ವಿಷಸ್ತಂಭನ ಮಾಡಲಾಗುತ್ತಿತ್ತು. ಶತ್ರುಗಳಲ್ಲಿ ಭೇದವನ್ನುಂಟು ಮಾಡಲು ವಿದ್ವೇಷಣ, ಅದರಂತೆ ಸೇನಾಸ್ತಂಭನ ವಿದ್ಯೆ, ಶತ್ರುಗಳಲ್ಲಿ ಹೊಕ್ಕು ಸುದ್ದಿಯನ್ನು ತರುವುದಕ್ಕಾಗಿ ಅದೃಶ್ಯವಾಗುವುದು, ಅತಿ ವೇಗದಿಂದ ನಡೆಯುವುದಕ್ಕಾಗಿ ಪಾದುಕಾಸಾಧನ, ಹೀಗೆ ಈ ಎಲ್ಲ ವಿದ್ಯೆ ಮಂತ್ರ ತಂತ್ರಗಳ ಉಪ ಯೋಗವಾಗುತ್ತಿದ್ದಿತು.

ಪ್ರೊ. ಕುಂದಣಗಾರರು ತಮ್ಮ " Inscriptions in Northern Karnataka " ಎಂಬ ಗ್ರಂಥದಲ್ಲಿ ಲಾಕುಳಾಗಮದ ವಿಷಯದಲ್ಲಿ " In Search of reference for the term Lākulāgama one meets with a Passage in Vāyu Purāṅa (chapter 23) and Linga Purāṅa (Chapter 24)."(Introduction Page 20)

**ಸಿದ್ಧಾಂತ** ನೈಯಾಯಿಕ ನಳಿನೀದಿವಾಕರರ್ **ಮಧ್ಯಾಸ್ಥ ಕಲ್ಪವೃಕ್ಷರ್, ಗುರುಕುಳ ಸಮುದ್ಧರಣರ್, ಶ್ರೀಶೈಲ ಪಶ್ಚಿಮದ್ವಾರತೋರಣರ್** ಶ್ರೀ ಮಲ್ಲಿಕಾರ್ಜುನ ದೇವ ದರ್ಶನಕಾರಣಪುರುಷರ್ " ಮುಂತಾಗಿ ವರ್ಣಿಸಲಾಗಿದೆ. ಅರಸೀಕೆರೆ (No. 89-1149) ಶಾಸನದಲ್ಲಿ ನನ್ನೇಶ್ವರ ದೇವರ ಆಚಾರ್ಯರಪ್ಪ ಅಮಿತಶಿವ ಪಂಡಿತ, ಪದುಮಶಿವ ಪಂಡಿತರಿಗೆ, " **ಲಾಕುಳಾಗಮ ಸಮಯ** ಸಮುದ್ಧರಣರೆಂದೂ, " ಅದೇ ಅರಸಿಕೆರೆಯ (No. 62, 1100) ಶಾಸನದಲ್ಲಿ, " **ಲಾಕುಳಾಗಮ ಸಮಯ** ಸಮುದ್ಧರಣರುಂ ಎಕ್ಕೋಟಿ ಮುನೀಂದ್ರ ವಂದನಾನಂದರುಂ, **ಕಾಳಾಮುಖ ಪ್ರತಿಬದ್ಧರುಂ**, ಶ್ರೀ ರಾಮನಾಥ ದೇವರ ಪಾದಾರಾಧಕರುಮಪ್ಪ ಕೇತಜೀಯರ ಶಿಷ್ಯ ರಾಮಶಕ್ತಿ ದೇವೇಂದ್ರ ಪಂಡಿತರು, ಅವರ ಗುಡ್ಡಿ ಪ್ರತ್ಯಕ್ಷಗಂಗೆ ದೇಕವ್ವೆ, ದೇವೇಂದ್ರ ಪಂಡಿತರ ಶಿಷ್ಯ ರಾಮಶಕ್ತಿಯ ಶಿಷ್ಯ ಕಲ್ಯಾಣಶಕ್ತಿ, ಕಲ್ಯಾಣಶಕ್ತಿಯ ಶಿಷ್ಯ ವಾಮಶಕ್ತಿ, ವಾಮಶಕ್ತಿಯ ಶಿಷ್ಯ ಮಹದೇವಜೀಯ, ಮಹದೇವಜೀಯರ ಶಿಷ್ಯ ಚಿಕ್ಕಜೀಯನಿಂತೀ ಮುನಿಸಮೂಹದ ಕಾಲಂ ಕರ್ಚಿ ಕಲಿದೇವರ ನೈವೇದ್ಯ, ನಂದಾ........ಮಠಪತಿ ತಪೋಧನರಾಹಾರದಾನ"ಕ್ಕಾಗಿ ದತ್ತಿಯನ್ನು ಬಿಡಲಾಗಿದೆ. ಪ್ರಸಿದ್ಧವಾದ ಕೋಡಿಯ ಮಠದ ವರ್ಣನೆಯಲ್ಲಿ ಬಂದಿರುವ ಅನೇಕ ವಿಷಯಗಳೊಡನೆ, **ಲಾಕುಲ ಸಿದ್ಧಾಂತ** ಪಾತಂಜಲಯೋಗ ಶಾಸ್ತ್ರಸ್ಥಾನವೆನ್ನಲಾಗಿದೆ. ಮುತ್ತಗೆಯ ಸಂಗಮೇಶ್ವರನ ಶಾಸನದಲ್ಲಿ '' ನೈಷ್ಠಿಕ ಚೂಡಾಮಣಿ, **ಲಾಕುಳಾಗಮ** ಸುಧಾಂಭೋರಾಶಿತಾರಾಧಿಪಂ'' ಎಂದು ಲಕುಳೀಶ ಬ್ರತಿಯನ್ನು ಬಣ್ಣಿಸಲಾಗಿದೆ. ಮುನವಳ್ಳಿಯ ಶಾಸನ (1253 A. D.) ದಲ್ಲಿ ಯಮನಿಯಮ ಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾನ ಜಪತಪ ಸಮಾಧಿ ಶೀಲಗುಣ ಸಂಪನ್ನರುಂ ಯಜನ ಯಾಜನಾಧ್ಯಯನಾಧ್ಯಾಪನ ದಾನ ಪ್ರತಿಗ್ರಹ ಷಟ್ಕರ್ಮ ನಿಯತರುಂ, ಋಗುವೇದ, ಸಾಮವೇದ, ಅಥರ್ವಣ, ಯಜುರ್ವೇದ, ವೇದಾಂತ, ಷಟ್ತರ್ಕ, ವ್ಯಾಕರಣ, ಛಂದಸ್ಸು, ನಿಘಂಟು, ಕಾಬ್ಯ, ನಾಟಕ, ಸಕಳವಿದ್ಯಾ ವಿನೋದರುಂ, ಬ್ಯಾಸ, ಆಗಸ್ತ್ಯ, ದುರ್ವಾಸ, ವಿಶ್ವಾಮಿತ್ರ, ನಾರದಾದಿ ದಿಬ್ಯಮುನಿ ಚಾರಿತ್ರರುಂ, **ಭಸ್ಮೋದ್ಧೂಳಿತಗಾತ್ರರುಂ, ಕವುಪೀನಾಂಜರುಂ, ರುದ್ರಾಕ್ಷ ಮಾಲಾಧಾರರುಂ, ಲಾಕುಳಾಗಮ ಸಮಯ ಸಮುದ್ಧರಣರುಂ, ಜಂಗಮಲಿಂಗಾವತಾರರುಂ,** ಉಭಯಕುಳಸುದ್ಧರುಮಪ್ಪ ಶ್ರೀ ಕಾಳಾಮುಖಮಷಿಯ ಸಂಬಂಧ ಶ್ರೀಮತು ರಾಜಗುರು ಸರ್ವೇಶ್ವರ ದೇವರು'' ಮುಂತಾಗಿ ವರ್ಣಿಸಲಾಗಿದೆ. (ಸೊರಬ ನಂ. ೨೭೫)

ಶಾಸನದಲ್ಲಿ ಶ್ರೀ ಸ್ವಯಂಭೂ ಕೋಟಿನಾಥ ದಿಬ್ಯ ಶ್ರೀಪಾದ ಪದ್ಮಾರಾಧಕ ರಾದ ರುದ್ರಶಕ್ತಿ ದೇವರಿಗೆ **"ಎಕ್ಕೋಟಿ ಸಮಯ ಚಕ್ರವರ್ತಿ"** ಎನ್ನ ಲಾಗಿದೆ. ಕ್ರಿ. ಶ. ೧೨೦೦ ಅರಸಿಕೆರೆ (ನಂ. ೧೦೩) ಶಾಸನದಲ್ಲಿ ನಾಗರಾಶಿ ಮಗ ಬ್ರಹ್ಮದೇವನಿಗೆ, ತಿಪಟೂರಿನ (ನಂ. ೧೨೩, ಕ್ರಿ. ಶ. ೧೨೦೦) ಶಾಸನದಲ್ಲಿ ಸೋಮಜೀಯನ ಮಗ ವಾಮಜೀಯನಿಗೆ **"ವಾಗಿಲಾಕುಳಾ ಗಮ ಸಮಯಸಮುದ್ಧರಣರೆ"**ಂದು ವಿಶೇಷಣಗಳಿವೆ. ಇದರಂತೆ ಅಲ್ಲಾಳ ದೇವ ಸೋವಂಣ, ನಾಗಂಣ, ಸಿಂಗಂಣರಿಗೆ **"ವಾಗಿಲಾಕುಳಾಗಮ ಸಮುದ್ಧರಣರಪ್ಪ"** ಎಂದಿದೆ. ಅದೇ ತಿಪಟೂರು ( No. 12; 1285 A. D) ಶಾಸನದಲ್ಲಿ **"ವಾಗಿಲಾಕುಳ ಹೊಸ ಸಮಯ** ಸಮುದ್ಧರಣರಪ್ಪ" ಎಂದು ಸೆಟ್ಟಿರುಗಳಿಗೆ ಅಂದಿರುವುದಲ್ಲದೆ, ಅವರೇ ಸ್ಥಾನಿಕರಾಗಿರುವರು. ಅದರಂತೆ ಅರಸಿಕೆರೆ (No. 103, 1200 No. 46; 1153; No. 62-1178), ದಾವಣಗೆರೆ ( No 99; 1127), ಶಾಸನಗಳಲ್ಲೂ "ವಾಗಿಲಾಕುಳಾಗಮ ಸಮಯ ಸಮುದ್ಧರಣ" ಎಂದಿರುವುದು.

ಒಟ್ಟಿನ ಮೇಲೆ **ಲಾಕುಳಶಾಸ್ತ್ರ, ಲಾಕುಳಾಗಮ, ಲಾಕುಳಸಿದ್ಧಾಂತ, ಲಾಕುಳಸಮಯ, ಎಕ್ಕೋಟಿಸಮಯ** ಇವೆಲ್ಲ ಒಂದೇ ಸಂಪ್ರದಾಯದ ಪರ್ಯಾಯನಾಮಗಳೆಂದು ಶಾಸನ ಅಭ್ಯಾಸದಿಂದ ಕಂಡುಬರುತ್ತದೆ ಈ ಲಾಕುಳ ಸಂಪ್ರದಾಯವು ಕಾಳಾಮುಖ ಸಮಯವನ್ನೂ ಒಳಗೊಂಡಿದೆ. ಸುಮಾರು ಕ್ರಿ. ಶ. ೧೨೦೦ ರಿಂದ ಈ ಸಂಪ್ರದಾಯದಲ್ಲಿ ಪರಿವರ್ತನೆ ಯಾದಂತೆ ಕಂಡುಬರುವುದು. ಅದಕ್ಕಾಗಿ **ವಾಗಿಲಾಕುಳ ಸಮಯ, ವಾಗಿಲಾಕುಳ ಹೊಸ ಸಮಯ**ವೆಂದೂ, ಶಾಸನಗಳಲ್ಲಿ ಉಕ್ತವಾಗಿದೆ. ಈ ಹೊಸ ಲಾಕುಳ ಪಂಥದ ಲಕ್ಷಣವೇನೆಂಬುದನ್ನು ಮುಂದೆ ವಿವೇಚಿಸ ಲಾಗುವುದು.

ಲಾಕುಳ ಸಿದ್ಧಾಂತಿಗಳಲ್ಲಿ ಎಲ್ಲರೂ **ಕಾಳಾಮುಖರಲ್ಲ;** **ಕೆಲವರಿಗೆ** ಮಾತ್ರ ಕಾಳಾಮುಖರೆಂದು ವರ್ಣನೆ ಬರುವುದು. ಹಗರಟಿಗೆ ನಾಗೇಶ್ವರ ದೇವರ ಕುಂದಜೀಯರ ಪುತ್ರ ಪದ್ಮಶಿವ ಪಂಡಿತರ ಶಿಷ್ಯ **ಕಾಳಾಮುಖ ಪ್ರತಿಬದ್ಧ** ನಾಗರಾಶಿಯ ಶಿಷ್ಯ ಮಾದಜೀಯ (ಅರಸಿಕೆರೆ ನಂ. ೬೮, ೧೧೭೬) ಮತ್ತು **ಕಾಳಾಮುಖ ಪ್ರತಿಬದ್ಧರುಮಪ್ಪ** ನಾಗರಾಶಿ ಪಂಡಿತರ ಶಿಷ್ಯ ಶಿವ ಶಕ್ತಿ ದೇವರ ಶಿಷ್ಯ ಕಲ್ಯಾಣಶಕ್ತಿ ಪಂಡಿತರು (ಅರಸಿಕೆರೆ No. 48-1129),

ಕಾಳಾಮುಖ ದೀಕ್ಷಿತರಪ್ಪ ಶ್ರೀಮತು ಜಗತೇಶ್ವರ ಪಂಡಿತರು (ಅರಸಿಕೆರೆ No. 42; 1095) ಎಂದು ಬಂದಿರುವುದರಿಂದ ಕಾಳಾಮುಖ ದೀಕ್ಷಿತ, ಕಾಳಾಮುಖ ಪ್ರತಿಬದ್ಧ ಎಂಬೀ ಪ್ರಶಸ್ತಿಗಳು ವಿಶಿಷ್ಟ ದೀಕ್ಷೆ ಹೊಂದಿದವರಿಗೆ ಮಾತ್ರ ಇದ್ದವೆಂದು ತಿಳಿಯಬಹುದು. ಸೂತಸಂಹಿತೆಯಲ್ಲೂ ಕಾಳಾಮುಖ ದೀಕ್ಷೆ ಪಡೆದವನು ಬ್ರಾಹ್ಮಣಾಧಮನಾಗುವನೆಂದು ನಿಂದಿಸಲಾಗಿದೆ. ಲಾಕುಳ ಸಿದ್ಧಾಂತದ ಆ ವಿಶಿಷ್ಟ ದೀಕ್ಷೆಯ ಸ್ವರೂಪವೇನಿತ್ತೋ ಈಗ ತಿಳಿದುಕೊಳ್ಳಲು ಸಾಧ್ಯವಿಲ್ಲ. ಲಾಕುಳಾಗಮವು ದೊರೆತಾಗ ಮಾತ್ರ ಅದನ್ನು ತಿಳಿಯಬಹುದು. ಸೊರಬದ (No. 275) ಶಾಸನದಲ್ಲಿ "ನಿತ್ಯ ಜ್ಞಾನಾನಂದ ಪರಶಿವ ಸ್ವರೂಪಾವಲೋಕನ ತತ್ ಸ್ವರೂಪರುಂ, ಯತಿಸಾರ್ವಭೌಮರುಂ, ಯಕ್ಕೋಟಿ ಸಮಯ ಚಕ್ರವರ್ತಿ ಸಪ್ತಾಹತರಿಸ್ಥಾನಾಚಾರ್ಯರಾದ ಕಾಳಾಮುಖ ವ್ರತಾನ್ವಯ ಶೀಲಗುಣಂ, ಶಿವಕಥಾದ್ಯನೇಕ ಸ್ಮೃತ್ಯರ್ಥಾಳಂಕಾರ, ಸುವಾಕ್ಯಪಾಳಿತ, ಸಜ್ಜನವಿನುತಯತಿ ಸರ್ವೇಶಂ" ಎಂಬುದಾಗಿರುವುದರಿಂದ ಕಾಳಾಮುಖ ಸಮಯಕ್ಕೇನೆ ಎಕ್ಕೋಟಿ ಸಮಯ ಎಂದು ಕರೆಯಲಾಗಿದೆ. ಕಾಳಾಮುಖ ವ್ರತಾನ್ವಯವೆಂದರೆ, ಕಾಳಾಮುಖವೆಂಬ ವಿಶಿಷ್ಟ ದೀಕ್ಷೆ ಹೊಂದಿ ವ್ರತವನ್ನು ಆಚರಿಸುತ್ತಿರುವುದು ಎಂಬುದು ಸ್ಪಷ್ಟವಿದೆ. ಇಂಥವರು ಯತಿಗಳಾಗಿಯೂ ವ್ರತಿಗಳಾಗಿಯೂ ಇರುತ್ತಿದ್ದುದರಿಂದ, ಇಂತಹರಿಗೆ ಮುನಿಗಳೆಂದೂ, ಮುನೀಂದ್ರರೆಂದೂ ಕರೆಯಲಾಗಿದೆ. ಶಾಸನಗಳ ಫಲಶ್ರುತಿಯಲ್ಲಿ ಏಳ್ಕೋಟಿ ಮುನೀಂದ್ರರ ಕೊಂದ ದೋಷವನ್ನು ಹೇಳುವಾಗ ಇಂಥ ಕಾಳಾಮುಖ ಯತಿಗಳಾದ ಮುನಿಗಳೆಂದೇ ಅರ್ಥವು. ಎಕ್ಕೋಟಿ ಸಮಯ ಚಕ್ರವರ್ತಿ ಎಂದಲ್ಲಿ 'ಸಮಯ' ಶಬ್ದವು ಸಂಪ್ರದಾಯ ಎಂಬರ್ಥದಲ್ಲಿದೆ ಏಳುಕೋಟಿ ಮಂತ್ರಗಳನ್ನೂ ಮಂತ್ರೇಶ್ವರರನ್ನೂ ಪ್ರತಿಪಾದಿಸುವ ಸಮಯ ಅಥವಾ ಸಂಪ್ರದಾಯವು ಇದಾಗಿದೆ ಈಗಿನ ಶೈವ ಸಿದ್ಧಾಂತದಲ್ಲೂ ಈ ಪ್ರಕ್ರಿಯೆಗಳುಂಟು. ಇಂತಹ ಲಾಕುಳ ಯತಿಗಳಿಗೆ ವ್ರತಿ, ಮಹಾವ್ರತಿ, ಮುನಿಗಳು, ಗೊರವರ್ ಎಂದು ಹೆಸರು ಬರುತ್ತದೆ. ಶಾಸನಗಳಲ್ಲಿ. ಲಾಕುಳ ಸಿದ್ಧಾಂತದ ಅನುಯಾಯಿಗಳಾದ ಶೈವಗುರುಗಳ ಪಂಗಡವೊಂದಿದ್ದು ಆ ಪಂಗಡದವರಲ್ಲಿಯೇ ಯತಿ, ಮುನಿ, ಮಹಾವ್ರತಿಗಳಾಗುತ್ತಿದ್ದರು.

ನಿಜಗುಣ ಶಿವಯೋಗಿಯ ಅಭಿಪ್ರಾಯಾನುಸಾರ, ವಾಯುವೀಯ ಸಂಹಿತೆಯ ತಾಂತ್ರಿಕ ವೈದಿಕ ಮತವನ್ನು ಪ್ರತಿಪಾದಿಸುವ ಪ್ರಮಾಣ

ಗ್ರಂಥವಷ್ಟೆ ? ಈ ವಾಯುವೀಯ ಸಂಹಿತೆಯ ಪ್ರಕಾರ, ಶೈವಾಗಮಗಳು ಎರಡು ವಿಧ—ಶ್ರೌತ ಮತ್ತು ಅಶ್ರೌತ ಎಂದು. ಶ್ರುತಿಸಾರಮಯವಾದವುಗಳಿಗೆ ಶ್ರೌತ ಎಂದೂ, ಇತರಾಗಮಗಳಿಗೆ ಸ್ವತಂತ್ರಗಳೆಂದೂ ಹೇಳಿದೆ. ಪ್ರಥಮದಲ್ಲಿ ಸ್ವತಂತ್ರ ಆಗಮಗಳು ಹತ್ತು, ಅನಂತರ ಹದಿನೆಂಟು ಪ್ರಕಾರ. ಕಾಮಿಕಾದಿ ೧೮ ಆಗಮಗಳು **ಸಿದ್ಧಸಿದ್ಧಾಂತ** ಸಂಜ್ಞೆಯುಳ್ಳವುಗಳು. ಸ್ವತಂತ್ರಾಗಮಗಳನ್ನು ಹೇಳಿದಂತೆ ಶ್ರೌತಾಗಮಗಳನ್ನು ಹೆಸರಿಸಿಲ್ಲ. ಈ ವಾಯುವೀಯ ಸಂಹಿತೆಯಲ್ಲಿ "ಲಾಕುಳಾಗಮ"ದ ಉಲ್ಲೇಖವಿಲ್ಲದಿದ್ದರೂ, ನಕುಲೀಶನ ಅವತಾರ, ಶಿಷ್ಯಪರಂಪರೆಯ ಯೋಗಾಚಾರ್ಯರ ವರ್ಣನೆಯಿದೆ. "ಪಾಶುಪತವ್ರತ ಪರಮವ್ರತವು, ಶ್ರುತಿಸಾರಮಯವಾದದ್ದು; ಯುಗಾನುಸಾರ ಯೋಗಾಚಾರ್ಯರಿಂದ ಪ್ರವರ್ತಿಸಿದ್ದು. ರುರು, ದಧೀಚಿ, ಉಪಮನ್ಯು, ಆಗಸ್ತ್ಯ ಇವರು ಪಾಶುಪತರು; ದೊಡ್ಡ ದೊಡ್ಡ ಸಂಹಿತೆಗಳ ಪ್ರವರ್ತಕರು. ಅವರ ಸಂತತಿಗಳೇ ನೂರಾರು, ಸಾವಿರಾರು ಆಗಿರುವವು. ಈ ಪಾಶುಪತ ವ್ರತವು ಶ್ರುತಿಯಲ್ಲಿ ಪ್ರಸಿದ್ಧವಾದದ್ದು. ಅಥರ್ವಣ ವೇದದ ಶಿರೋಭಾಗದಲ್ಲಿದೆ. ಜಟಿಲ, ಮುಂಡ, ಶಿಖಿ, ಏಕಜಟಿ ಮುಂತಾದ ಅವಸ್ಥೆಯಲ್ಲಿದ್ದು,

"ಅಗ್ನಿರಿತ್ಯಾದಿಭಿರ್ಮಂತ್ರೈಃ ಷಡ್ಭಿರಾಥರ್ವಣೈಃ ಕ್ರಮಾತ್।
ಪೂಜನೀಯೋ ಮಹಾದೇವೋ ಲಿಂಗಮೂರ್ತಿಸನಾತನಃ॥"

ಎಂದು ಪಂಚಮುಖಲಿಂಗ ಪ್ರತಿಷ್ಠೆಯನ್ನು ಕಮಲಾಸನದಲ್ಲಿ ಮಾಡಿ, ಪೂಜೆಯ ನಂತರ ವಿಸರ್ಜನವನ್ನು ಹೇಳಲಾಗಿದೆ. ಈ ತರದ ಪಾಶುಪತ ವ್ರತವುಳ್ಳವರಿಗೆ ನೈಷ್ಠಿಕರೆನ್ನುತ್ತಾರೆ. ಇಂಥವರು ಅತ್ಯಾಶ್ರಮಿಯೆಂದೂ, ಮಹಾಪಾಶುಪತರೆಂದೂ ಕರೆಯಲ್ಪಟ್ಟಿರುವರು. ಇವರು ತಪಸ್ವಿಗಳಲ್ಲಿ ಶ್ರೇಷ್ಠರು. ಇವರೇ ಮಹಾವ್ರತಿಗಳು. ಯತಿಯಾಗಿದ್ದು ನೈಷ್ಠಿಕನಾದವನು ಯತಿನೈಷ್ಠಿಕ ಶ್ರೇಷ್ಠನು. ಅರ್ಧನಾರೀಶ್ವರ ಸ್ತೋತ್ರದಲ್ಲಿ ಶಿವಶಕ್ತಿಯಿಂದ ಕೂಡಿದ ಪಂಚಾರ್ಥಜ್ಞಾನದ ಮಹತ್ವವನ್ನು ಹೇಳಲಾಗಿದೆ. ಅಂದರೆ 'ಪಾಶುಪತಸೂತ್ರ' ಎಂಬ ಗ್ರಂಥದಲ್ಲಿ ಹೇಳಲ್ಪಟ್ಟ, ಮಾಧವಾಚಾರ್ಯನ 'ಸರ್ವದರ್ಶನ ಸಂಗ್ರಹ'ದಲ್ಲಿ ಸಂಗ್ರಹಿಸಲ್ಪಟ್ಟ ಪಂಚಾರ್ಥಕ್ಕೂ ವಾಯುವೀಯ ಸಂಹಿತೆಯಲ್ಲಿ ಹೇಳಿದ ಪಂಚಾರ್ಥಕ್ಕೂ ವ್ಯತ್ಯಾಸವಿದ್ದುದು ಸ್ಥೂಲವಾಗಿ ಕಂಡುಬರುತ್ತದೆ. ಒಂಬತ್ತನೆಯ ಅಧ್ಯಾಯದಲ್ಲಿ —

ವೇದಸಾರಂ ಶಿವಜ್ಞಾನಂ ಸ್ವಾಶ್ರಿತಾನಾಂ ವಿಮುಕ್ತಯೇ।
ಅಭಕ್ತಾನಾಮಬುದ್ಧಾನಾಮಯುಕ್ತಾನಾಮಗೋಚರಮ್ ॥

ಅರ್ಥೈರ್ದಶಾರ್ಥೈಃ ಸಂಯುಕ್ತಂ ಗೂಢಮಪ್ರಾಜ್ಞನಿಂದಿತಂ ।
ವರ್ಣಾಶ್ರಮಕೃತೈರ್ಧರ್ಮೈರ್ವಿಪರೀತಂ ಕ್ವಚಿತ್ಸಮಂ ॥
ವೇದಾತ್ ಷಡಂಗಾದುದ್ಧೃತ್ಯ ಸಾಂಖ್ಯಯೋಗಾಚ್ಚ ಕೃತ್ಸ್ನಶಃ ॥

ಇದೇ ವಾಯುಬೀಯ ಸಂಹಿತೆಯ ೨೬ ನೆಯ ಅಧ್ಯಾಯದಲ್ಲಿ ನಿತ್ಯ ಶಿವಲಿಂಗಪೂಜೆಯ ಕ್ರಮವನ್ನು ಹೇಳಿ ಅದಕ್ಕೆ ಶಿವಲಿಂಗ ಮಹಾವ್ರತವೆನ್ನಲಾಗಿದೆ. ಅದರಂತೆ ೨೭ ನೆಯ ಅಧ್ಯಾಯದಲ್ಲಿ ಶಿವಲಿಂಗಸ್ಥಾಪನೆಯ ಮಹತಿಯನ್ನು ಹೇಳಿದೆ.

ಸರ್ವೋ ಲಿಂಗಮಯೋ ಲೋಕಃ ಸರ್ವಂ ಲಿಂಗಂ ಪ್ರತಿಷ್ಠಿತಮ್ ।
ತಸ್ಮಾತ್ ಪ್ರತಿಷ್ಠಿತೇ ಲಿಂಗೇ ಭವೇತ್ಸರ್ವಂ ಪ್ರತಿಷ್ಠಿತಮ್ ॥

"ವ್ರತಂ ಪಾಶುಪತಂ ಶ್ರೌತಮಥರ್ವಶಿರಸಿ ಶ್ರುತಮ್"–ಶ್ರುತಿಯಲ್ಲಿ ಪ್ರಸಿದ್ಧವಾದ ಪಾಶುಪತವ್ರತವು ಅಥರ್ವಣಶ್ರುತಿಯ ಶಿರೋಭಾಗದಲ್ಲಿರುವುದು. ಸಂಕಲ್ಪ, ಯಜ್ಞೋಪವೀತ, ಅಗ್ನಿಯಾಧಾನ, ವಿರಾಜಾಹೋಮಕ್ಕಾಗಿ, ಮೂವತ್ತಾರು ತತ್ವಗಳ ಸ್ಮರಣೆ, ಹೋಮ, ಹವಿಷ್ಯಾನ್ನಭೋಜನ, ರುದ್ರಾಗ್ನಿಯ ಉಪಸಂಹಾರ ಮಾಡಿ; ಜಟಿಲ, ಮುಂಡ, ಶಿಖಿ, ಏಕಜಟಿ, ಅಥವಾ ನಗ್ನವಾಗಿ, ಇಲ್ಲವೆ ಕಾಷಾಯವಸ್ತ್ರ, ಚರ್ಮ, ಚೀರವಸ್ತ್ರ, ವಲ್ಕಲ ಉಟ್ಟು; ದಂಡ, ಮೇಖಲಾಯುಕ್ತವಾಗಿ; ವಿರಜಾಗ್ನಿ ಭಸ್ಮದಿಂದ ಅಥರ್ವಣ ವೇದದಲ್ಲಿ ಅಗ್ನಿ ಇತ್ಯಾದಿ ಆರು ಮಂತ್ರಗಳಿಂದ ಭಸ್ಮಧಾರಣ ಮಾಡಿ; ಶಿವಯೋಗಾಭ್ಯಾಸ ಮಾಡುವುದು — ಇದರಂತೆ ಮೂರು ವೇಳೆ ಮಾಡುವುದು.— ಇದಕ್ಕೆ ಪಾಶುಪತವ್ರತವೆನ್ನುತ್ತಾರೆ. ಅನಂತರ ಪಂಚಮುಖ ಶಿವಲಿಂಗಮೂರ್ತಿಯ ಪೂಜೆಯನ್ನು ವಿಧಾನಪೂರ್ವಕ ಮಾಡಿ, ಆವರಣ ದೇವತೆಗಳ ಪೂಜೆ ಮಾಡಿ, ಗುರುಪೂಜೆ ಮಾಡಿ, ಶಿವನ ಉದ್ವಾಸನ ಅಗ್ನಿಯ ವಿಸರ್ಜನ ಮಾಡುವುದು. ಇದರಂತೆ ಪ್ರತಿದಿನ ಮಾಡಿ ಆ ಲಿಂಗವನ್ನು ಗುರುವಿಗೆ ಕೊಡುವುದು, ಅಥವಾ ದೇವಾಲಯದಲ್ಲಿ ಸ್ಥಾಪಿಸುವುದು ಇದರಂತೆ ದೇಹವಿರುವವರೆಗೆ ಆತ್ಯಂತಿಕೀದೀಕ್ಷೆ ಪಡೆದು ವ್ರತ ಮಾಡುವವನೇ **ನೈಷ್ಠಿಕನು. ಅವನೇ ಅತ್ಯಾಶ್ರಮಿ, ಮಹಾಪಾಶುಪತ** ಎನಿಸಿಕೊಳ್ಳುತ್ತಾನೆ. **ಅವನೇ ಮಹಾವ್ರತಿಯು.** ಯತಿಯಾಗಿದ್ದು ನೈಷ್ಠಿಕನಾಗಿದ್ದರೆ ಯತಿಶ್ರೇಷ್ಠನು. ರುದ್ರಾಗ್ನಿಯ ಶ್ರೇಷ್ಠವೀರ್ಯವೇ ಭಸ್ಮವು. ಇದು ಶ್ರೌತಪಾಶುಪತವ್ರತವು.

---

# ನಾಲ್ಕನೆಯ ಪ್ರಕರಣ

## ಪಾಶುಪತದ ತತ್ವಜ್ಞಾನ

ಶಂಕರಾಚಾರ್ಯರು " ಪತ್ಯುರಸಾಮಂಜಸ್ಯಾತ್ " ಎಂಬ ಬ್ರಹ್ಮಸೂತ್ರಭಾಷ್ಯದಲ್ಲಿ ವೇದ ಬಾಹೇಶ್ವರ ಕಲ್ಪನೆಯು ಅನೇಕ ಪ್ರಕಾರವೆಂದು ಹೇಳಿ, ಕೆಲವರು ಸಾಂಖ್ಯಯೋಗವನ್ನು ಆಶ್ರಯಿಸಿಕೊಂಡು ಕೇವಲ ನಿಮಿತ್ತಕಾರಣ ಈಶ್ವರನನ್ನು ಹೇಳುತ್ತಾರೆಂದೂ, ಮಾಹೇಶ್ವರರು ಕಾರ್ಯ, ಕಾರಣ, ಯೋಗ, ವಿಧಿ, ದುಃಖಾಂತಾ ಎಂಬ ಪಂಚ ಪದಾರ್ಥಗಳನ್ನು ಮನ್ನಿಸಿ ಪಶುಪತಿಯಾದ ಈಶ್ವರನ ನಿಮಿತ್ತಕಾರಣತ್ವವನ್ನು ಹೇಳುತ್ತಾರೆಂದೂ ಅಂದಿರುವರು. ಈ ಎಲ್ಲರ ಅಭಿಪ್ರಾಯಗಳು ಸರಿಯಲ್ಲವೆಂದು ಮುಂದೆ ಆಕ್ಷೇಪಗಳನ್ನು ಹೇಳಿರುವರು ಸಾಂಖ್ಯಯೋಗ, ನ್ಯಾಯ ವೈಶೇಷಿಕರು, ಹೇತುಕರು ಯುಕ್ತಿಯಿಂದ ಈಶ್ವರನ ಸಿದ್ಧಿಯನ್ನು ಗೈದು, ಈಶ್ವರನ ನಿಮಿತ್ತ ಕಾರಣತ್ವವನ್ನು ಹೇಳುತ್ತಾರೆ. ಸೇಶ್ವರ ಸಾಂಖ್ಯವು ಪ್ರಾಚೀನವಾದದ್ದು. ಈಶ್ವರನು ಕೇವಲ ಅನುಗ್ರಾಹಕನು. ಅದುವೆ ಆಜ್ಞೆಯೆಂದು.ಅವರ ಮತ. ಶ್ವೇತಾಶ್ವೇತರ ಉಪನಿಷತ್ತಿನಲ್ಲಿ ಈ ಮತದ ಉಲ್ಲೇಖವು ಬರುವುದು. ಅದು ಈ ರೀತಿ : " ಸಾಂಖ್ಯಯೋಗಾದಿಗಮ್ಯಂ ಜ್ಞಾತ್ವಾ ದೇವಮುತೇ ಸರ್ವಪಾಶೈಃ " (ಅಧ್ಯಾಯ ೬ ). ಅದರಂತೆ ವಾಯುವೀಯ ಸಂಹಿತೆಯಲ್ಲಿ " ಸಾಂಖ್ಯಯೋಗಾದಿಗಮ್ಯಂ ತತ್ಕಾರಣಂ ಜಗತಃ ಪತಿಮ್ । " (ಅಧ್ಯಾಯ ೪. ಶ್ಲೋಕ ೧೨೯). ಅದೇ ವಾಯುವೀಯ ಸಂಹಿತೆಯಲ್ಲಿ ಪಂಚಾರ್ಥವನ್ನೂ ಹೇಳಲಾಗಿದೆ. ಶ್ವೇತಾಶ್ವೇತರ ಉಪನಿಷತ್ತಿನಲ್ಲಿ ಸಾಂಖ್ಯಶಾಸ್ತ್ರ ಪ್ರವರ್ತಕನಾದ ಕಪಿಲಋಷಿಯು ಹುಟ್ಟಿದ್ದನ್ನು ಹೇಳಿ, ಎಲ್ಲ ಕಾರಣಶಕ್ತಿಗಳಿಗೆ ಒಬ್ಬನೇ ಅಧಿಷ್ಠಿತನಾದವನ ಜ್ಞಾನವನ್ನು ಪಡೆದನೆಂದು ಹೇಳಿದೆ.

ಯೋ ಯೋನಿಂ ಯೋನಿಮಧಿಷ್ಠತ್ಯೇಕೋ
ಯೋನಿಶ್ಚ ಸರ್ವಾಃ ।
ಋಷಿಂ ಪ್ರಸೂತಂ ಕಪಿಲಂ ಯಸ್ತಮಗ್ರೇ ।
ಜ್ಞಾನೈರ್ಬಿಭರ್ತಿ ಜಾಯಮಾನಂ ಚ ಪಶ್ಯತ್ ॥ ೨ ॥

ಆದರಂತೆ —

ಪುಲ್ಲಿಂಗಮಖಿಲಂ ಧತ್ತೇ ಭಗವಾನ್ ಪುರಶಾಸನಃ ।
ಸ್ತ್ರೀಲಿಂಗಂ ಚಾಖಿಲಂ ಧತ್ತೇ ದೇವೀ ದೇವಮನೋರಮಾ ॥

(ಅಧ್ಯಾಯ ೨೫. ಶ್ಲೋಕ ೬೬)

ಪುಲ್ಲಿಂಗ ಸ್ತ್ರೀಲಿಂಗವೇ ಶಿವಶಕ್ತಿ ರೂಪವೆಂದು ಇದರ ತಾತ್ಪರ್ಯವು. " ಸಾಂಖ್ಯಯೋಗ ಸ್ವರೂಪಿಯಾದ........ ಅಥರ್ವ ಸ್ವರೂಪಿಯಾದ ಶಿವನೆಂ"ದು ಉಪಮನ್ಯುಋಷಿಯು ಮಹಾಭಾರತದಲ್ಲಿ ವರ್ಣಿಸಿರುವನು.

ವೈಶೇಷಿಕರಲ್ಲಿ ತಾರ್ಕಿಕ ವೈಶೇಷಿಕರು, ಮತ್ತು ಸೈದ್ಧಾಂತಿಕ ವೈಶೇಷಿಕರೆಂದು ಎರಡು ಭೇದಗಳಿವೆ. ತಾರ್ಕಿಕ ವೈಶೇಷಿಕರು ನಿಜವಾದ ತಾರ್ಕಿಕ-ವೈಶೇಷಿಕ ದರ್ಶನದ ಅನುಯಾಯಿಗಳು; ಇವರು ಜ್ಞಾನಕ್ಕೆ ಪ್ರಾಧಾನ್ಯ ಕೊಡುವವರು. ಸೈದ್ಧಾಂತಿಕ ವೈಶೇಷಿಕರು ಶಿವನನ್ನು ಆರಾಧಿಸುವವರು; ಭಕ್ತಿಗೆ ಮಹತ್ವವನ್ನು ಕೊಡುವವರು. ಸರ್ವಜ್ಞನಾದ ಶಿವನಿಂದ ದೀಕ್ಷೆಯನ್ನು ಹೊಂದಿದ ನಂತರದಲ್ಲಿ ಭಕ್ತಿಯಿಂದಲೇ ಮೋಕ್ಷವೆಂದು ಇವರ ಪ್ರತಿಪಾದನೆ. " ಸಕಲ ನಿಷ್ಕಲಾಪ್ತಮಂತ್ರತಂತ್ರಾಪೇಕ್ಷ ದೀಕ್ಷಾಲಕ್ಷಣಾಚ್ಛ್ರದ್ಧಾಮಾತ್ರಾನುಸಾರೇಣಾನ್ಮೋಕ್ಷಃ ಇತಿ ಸೈದ್ಧಾಂತ ವೈಶೇಷಿಕಾಃ " ( ಹಂಡುಕಿ Vol. II, Page 269 ) ಇಂಥವರನ್ನುದ್ದೇಶಿಸಿಯೇ ಶಂಕರಾಚಾರ್ಯರು " ತಥಾ ವೈಶೇಷಿಕಾದಯೋऽಪಿ ಕೇಚಿತ್ಕಥಂಚಿತ್ ಸ್ವಪ್ರಕ್ರಿಯಾನುಸಾರೇಣ ನಿಮಿತ್ತಕಾರಣಮೀಶ್ವರ ಇತಿ ವರ್ಣಯಂತಿ " ಎಂದಂತೆ ಕಂಡುಬರುವುದು.

ಈ ವೈಶೇಷಿಕ ಸೈದ್ಧಾಂತಿಕ ಮತವು ಎಂದಿನಿಂದ ಪ್ರಾರಂಭವಾಗಿದೆ ಎಂಬುದು ತಿಳಿಯುವುದಿಲ್ಲ. ಕ್ರಿ. ಶ. ೯ ನೆಯ ಶತಮಾನದ ವಿದ್ಯಾನಂದನು ತನ್ನ ' ಆಪ್ತ ಪರೀಕ್ಷಾ ' ಎಂಬ ಗ್ರಂಥದಲ್ಲಿ ವೃದ್ಧವೈಶೇಷಿಕರನ್ನು ಹೇಳಿರುವನು. ಈ ವೃದ್ಧ ವೈಶೇಷಿಕರು ಮಹೇಶ್ವರ ಅಥವಾ ಶಿವನ ಅಸ್ತಿತ್ವವನ್ನು ಇತರ, ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ ಮುಂತಾದ ಸತ್‌ಪದಾರ್ಥಗಳಂತೆ ಶಿವನೂ ಸತ್‌ಪದಾರ್ಥವೆಂದು ಹೇಳುವರೆಂದು ವರ್ಣಿಸಿರುವನು. " ಯಥೈವ ಹಿ ಮಹೇಶ್ವರಸ್ಯ ಸ್ವರೂಪತಃ ಸತ್ವಂ ವೃದ್ಧವೈಶೇಷಿಕರಿಷ್ಯತೆ. ತಥಾ ದ್ರವ್ಯಾಣಾಂ ರೂಪಾದಿ ಗುಣಾನಾಮುತ್-ಕ್ಷೇಪಣಾದಿ ಕರ್ಮಾಣಾಂ ಸಾಮಾನ್ಯ ವಿಶೇಷ ಸಮವಾಯಾನಾಂ ಚ

ಪ್ರಾಗಭಾವಾದಿನಾಮುಪಿಷ್ಯತ ಏವ " ( ಹಂಡೋಕಿಯವರ ಯಶಸ್ತಿಲಕ). ಹರಿಭದ್ರನು ಷಡ್ದರ್ಶನ ಸಮುಚ್ಚಯದಲ್ಲಿ ನೈಯಾಯಿಕರು ಮತ್ತು ವೈಶೇಷಿಕರು ಶಿವನನ್ನು ಆರಾಧಿಸುವರೆಂದು ಹೇಳಿರುವನು. ಗುಣರತ್ನನು ಕೂಡ ಷಡ್ದರ್ಶನ ಸಮುಚ್ಚಯದ ವ್ಯಾಖ್ಯಾನದಲ್ಲಿ ಶೈವ, ಪಾಶುಪತ, ಮುಂತಾದವುಗಳನ್ನು ಹೇಳಿ, ನೈಯಾಯಿಕರಿಗೆ ಶೈವರೆಂದೂ, ವೈಶೇಷಿಕರಿಗೆ ಪಾಶುಪತರೆಂದೂ ಕರೆಯುತ್ತಾನೆ. ಹರಿಭದ್ರನು ನೈಯಾಯಿಕರಿಗೆ ಸಾಮಾನ್ಯವಾಗಿ ಶೈವರೆನ್ನುತ್ತಾನೆ. ಈ ಎಲ್ಲ ಶೈವ, ಪಾಶುಪತ, ಲಾಕುಳ ಪಂಥಗಳು **ಸಾಂಖ್ಯಯೋಗ, ವೈಶೇಷಿಕ, ನೈಯಾಯಿಕ** ಈ ಒಂದಿಲ್ಲೊಂದು ದಾರ್ಶನಿಕ ಮತಗಳಲ್ಲಿ ಒಳಗೊಂಡವುಗಳೆಂದು ಈ ಪ್ರಾಚೀನ ಗ್ರಂಥಗಳಿಂದ ವ್ಯಕ್ತವಾಗುತ್ತದೆ. ಸಾಂಖ್ಯಯೋಗಾನುಸಾರವಾದ ಶೈವ ಮತ್ತು ನೈಯಾಯಿಕ ಶೈವ ಎಂದು ಶೈವ ಸಿದ್ಧಾಂತವು ಎರಡು ಬಗೆಯಾಗಿದೆ. ಶ್ವೇತಾಶ್ವೇತರ, ಮಹಾಭಾರತ, ವಾಯುವೀಯ ಸಂಹಿತೆಗಳಲ್ಲಿ, ವೇದಸಾರಮಯವಾದ, ಅಥರ್ವಣ ಶಿರೋಭಾಗದಲ್ಲಿರುವ ವೇದಷಡಂಗಗಳಿಂದ ಉದ್ಧೃತವಾದ ಸಾಂಖ್ಯಯೋಗದ ಶೈವವನ್ನು ವರ್ಣಿಸಲಾಗಿದ್ದುದನ್ನು ಹಿಂದಿನ ಪ್ರಕರಣದಲ್ಲಿ ನೋಡಿದ್ದಾಯಿತು. ನೈಯಾಯಿಕ ಶೈವವನ್ನು ಮುಂದೆ ವಿವೇಚಿಸಲಾಗುವುದು. ಇದುವೆ ಲಾಕುಳಶೈವವು.

### ಮುಕ್ತಿಯ ಕಲ್ಪನೆ:—

ಭಾಸ್ಕರಾಚಾರ್ಯನ ಅಭಿಪ್ರಾಯದಂತೆ ಪಾಶುಪತ ಮತ್ತು ಕಾಪಾಲಿಕರು ವೈಶೇಷಿಕರಂತೆ ಮುಕ್ತಾವಸ್ಥೆಯನ್ನು ಹೇಳುವವರು. ಅಂದರೆ ಮುಕ್ತಾತ್ಮನು ಪಾಷಾಣದಂತೆ ಗುಣರಹಿತನಾಗುತ್ತಾನೆ. (" ಪಾಶುಪತ ವೈಶೇಷಿಕ ನೈಯಾಯಿಕ ಕಾಪಾಲಿಕಾನಾಮು ಅವಶಿಷ್ಟಾಃ ಮುಕ್ತಾವಸ್ಥಾಯಾಂ ಪಾಷಾಣ.... ಆತ್ಮನೋ ಭವಂತೀತಿ ಸಾಂಖ್ಯಶೈವಯೋಶ್ಚರಶಿಷ್ಟಾ ಆತ್ಮನಾಂ.... ಸ್ವಭಾವಸ್ತಿಷ್ಠಂತಿ). " ಯಾಮುನಾಚಾರ್ಯನು ತನ್ನ ಆಗಮ ಪ್ರಾಮಾಣ್ಯದಲ್ಲಿ ಪಾಶುಪತರ ಮುಕ್ತಾವಸ್ಥೆಯ ವಿಷಯದಲ್ಲಿ ಇದೇ ಅಭಿಪ್ರಾಯವನ್ನು ತಾಳಿರುವನು. ದುಃಖಾಂತವೇ ಪಾಶುಪತರ ಮುಖ್ಯ ಸಿದ್ಧಾಂತವೆಂದು ಈತನೂ ಹೇಳುವನು.

"ಆತ್ಯಂತಿಕೀ ದುಃಖನಿವೃತ್ತಿರ್ದುಃಖಾಂತಶಬ್ದೇನೋಕ್ತಾತಾವೇವಂ ನಿಃಶೇಷ ವೈಶೇಷಾತ್ಮ ಗುಣೋಚ್ಛೇದ ಲಕ್ಷಣಾ ಮುಕ್ತಿಂ ಮನ್ಯಂತೇ"

ಗುಣರತ್ನನು ಗಣಕಾರಿಕೆಯಲ್ಲಿ ಇದನ್ನೇ ಹೇಳಿ ಶಿವನಂತೆ ಐಶ್ವರ್ಯವೆಂಬ ಸಿದ್ಧಿಯನ್ನು ಪಡೆಯುತ್ತಾನೆಂದು ಹೇಳುತ್ತಾನೆ. ಪಾಶುಪತರ ಮುಕ್ತಾವಸ್ಥೆಯ ಕಲ್ಪನೆಯ ವಿಷಯದಲ್ಲಿ ಭಾಸ್ಕರಾಚಾರ್ಯ ಮತ್ತು ಯಾಮುನಾಚಾರ್ಯರು ಹೇಳುವ ಮಾತಿಗೆ ಸ್ವತಃ ಪಾಶುಪತ ಸೂತ್ರ ಮತ್ತು ಕೌಂಡಿಣ್ಯ ಭಾಷ್ಯದ ಬೆಂಬಲ ದೊರೆಯುವುದಿಲ್ಲ. ಅದರಲ್ಲಿ ಸಾಂಖ್ಯಯೋಗದ ಪ್ರಕಾರ ಮುಕ್ತಾತ್ಮರು ಆತ್ಮಜ್ಞಾನವಿಲ್ಲದೆ ಮೂರ್ಛಾವಸ್ಥೆಯಲ್ಲಿರುವರೆಂದೂ, ಪಾಶುಪತರು ಮುಕ್ತಾವಸ್ಥೆಯಲ್ಲಿ ಜ್ಞಾನವುಳ್ಳವರಾಗಿರುವರೆಂದೂ ಹೇಳಲಾಗಿದೆ. ಪಾಶುಪತ ಮತವು ವಿಸ್ತೃತವಾಗಿ ಹಬ್ಬಿರುವುದರಿಂದ, ಭಾಸ್ಕರ ಮತ್ತು ಯಾಮುನಾಚಾರ್ಯರ ಅಭಿಪ್ರಾಯದಂತೆ ಮುಕ್ತಾವಸ್ಥೆಯನ್ನು ಹೇಳುವವರು ಇದ್ದಿರಬಹುದು. ಯಾಕೆಂದರೆ ಮಹಾಭಾರತದಲ್ಲಿ ಸಾಂಖ್ಯಯೋಗ, ಪಂಚರಾತ್ರದೊಡನೆ ಪಾಶುಪತರನ್ನು ಹೇಳಲಾಗಿದೆ. ಇಷ್ಟು ಪ್ರಾಚೀನ ಕಾಲದ ಮತದಲ್ಲಿ ಕಾಲಕಾಲಕ್ಕೆ ವಿಚಾರಗಳಲ್ಲಿ ಹೆಚ್ಚುಕಡಿಮೆಯಾಗುವುದು ಸಹಜವಿದೆ. ನಿಜಗುಣ ಶಿವಯೋಗಿಯು ಪಾಶುಪತ, ಕಾಪಾಲಿಕ, ಮಹಾವ್ರತ ಈ ಮೂವರನ್ನೇ ಹೇಳಿ, ಅವರಿಗೆ ಅತಿಮಾರ್ಗಿಕರೆಂದು ಕರೆದಿರುವನು. ಪಾಶುಪತರು ಮಾಯಾ, ಕರ್ಮಗಳೆಂಬ ಪಾಶದ್ವಯಗಳನ್ನು ಹೇಳುವ ಮಾಯಾತತ್ವವಾದಿಗಳೆಂದೂ, ಕಾಪಾಲಿಕರು ವಿದ್ಯಾತತ್ವವಾದಿಗಳೆಂದೂ, ಮಹಾವ್ರತಧರರು ಕಾಲತತ್ವವಾದಿಗಳೆಂದೂ ಹೇಳುವನು. ಈ ಮೂವರು "ಆತ್ಮನು ನಿತ್ಯ, ವ್ಯಾಪಕ, ಚೈತನ್ಯರೂಪವೆನ್ನುವರೆ"ಂದು ಅಭಿಪ್ರಾಯಪಟ್ಟಿರುವನು. ಅದೇ ಮಾತನ್ನೇ ಕ್ಷೇಮರಾಜನು ಸ್ವಚ್ಛಂದ ತಂತ್ರದ ವ್ಯಾಖ್ಯಾನದಲ್ಲಿ ಹೇಳಿರುವನು. ನಿಜಗುಣಶಿವಯೋಗಿಯಾದರೂ ಪಾಶುಪತ, ಕಾಪಾಲಿಕ, ಮಹಾವ್ರತರ ಮೋಕ್ಷದ ಕಲ್ಪನೆಯನ್ನು ಈ ಕೆಳಗಿನಂತೆ ಹೇಳಿರುವನು. "ಪಾಶುಪತರು ಪ್ರವಾಹೇಶ್ವರತ್ವದಿಂದೀಶ್ವರತ್ವವನನ್ಯರಿಗಿತ್ತು, ಆತ್ಮನು ಜ್ಞಪ್ತಿಮಾತ್ರದಿಂದಿಹುದೆ ಮೋಕ್ಷವೆನ್ನುವರು. ಕಾಪಾಲಿಕ, ಮಹಾವ್ರತರು ಕರ್ತೃತ್ವಾಭಿಮಾನವೇ ಸಂಸಾರವಪ್ಪುದರಿಂದದನುಳಿದು ಜ್ಞಪ್ತಿಮಾತ್ರದಿಂದಿಹುದೆ ಮೋಕ್ಷವೆನ್ನುವರು." ಕಾಳಾಮುಖರಾದ ಲಾಕುಳಶೈವರನ್ನು ಇವನು ಹೇಳುವುದಿಲ್ಲ. ಕಾಳಾಮುಖರ ಬದಲು ಮಹಾವ್ರತಧರರನ್ನು ಹೇಳಿರುವುದಿಲ್ಲ. ಆತ್ಮಂಗೆ ಷಡಧ್ವಾತೀತ ಶಿವ ಸಮಾನತ್ವವೇ ಮೋಕ್ಷವೆಂದು ತನ್ನ ಸಿದ್ಧಾಂತದ ಪ್ರಕಾರ ಮೋಕ್ಷದ ಕಲ್ಪನೆಯನ್ನು ಹೇಳುತ್ತಾನೆ.

## ನಿಮಿತ್ತೇಶ್ವರವಾದ

ಪಾಶುಪತ, ಶೈವ, ಕಾಳಾಮುಖ, ಕಾಪಾಲಿಕ ಇವರೆಲ್ಲರೂ ಒಂದಿಲ್ಲೊಂದು ರೀತಿಯಿಂದ ಸಾಂಖ್ಯಯೋಗ, ನೈಯಾಯಿಕ, ವೈಶೇಷಿಕ ದರ್ಶನಗಳನ್ನು ಅವಲಂಬಿಸಿರುವುದರಿಂದ ಇವರೆಲ್ಲರೂ ಹೈತುಕರು, ಯುಕ್ತಿಯಿಂದ ಈಶ್ವರನ ಸಿದ್ಧಿಗೈಯುವವರು. ನಿಮಿತ್ತೇಶ್ವರನನ್ನು ಪ್ರದಿಪಾದಿಸುವವರಾಗಿರುವರು ಅಂತೆಯೇ ವೇದಾಂತಿಗಳಾದ ಶಂಕರ ರಾಮಾನುಜ ಮಧ್ವ ಮುಂತಾದ ಆಚಾರ್ಯರೆಲ್ಲರೂ ತಂತಮ್ಮ ಪ್ರಕ್ರಿಯೆಗನುಸರಿಸಿ ಪಶುಪತಿ ರುದ್ರ ಅಥವಾ ಮಹೇಶ್ವರನ ಜಗತ್ಕರ್ತೃತ್ವವನ್ನು ನಿರಾಕರಿಸಿರುವರಲ್ಲದೆ ಪಾಶುಪತಸ್ಮೃತಿಗಳು ವೇದಾನುಸಾರವಾಗಿಲ್ಲವೆಂದು ಹೇಳಿರುವರು. ಕೇವಲಾಧಿಷ್ಠಾತ್ರೀಶ್ವರ ಕರ್ತೃವಾದವನ್ನು ಅಥವಾ ವೇದ ಬಾಹ್ಯನಿಮಿತ್ತೇಶ್ವರ ಕಾರಣದ ಕಲ್ಪನೆಯನ್ನು ಪ್ರತಿಷೇಧಗೈದಿರುವರು. ಈ ಎಲ್ಲ ಆಚಾರ್ಯರು ಪ್ರತಿಷೇಧಗೈಯುವಾಗ ವಾದದ ಸರಣಿಯಾದರೂ ಒಂದೇಯಾಗಿದೆ. ಉದಾಹರಣೆಯೆಂದು ರಾಮಾನುಜ ಭಾಷ್ಯದಲ್ಲಿಯ ಆಕ್ಷೇಪಗಳನ್ನು ಕೊಡಲಾಗಿದೆ "ಕುಲಾಲನು ಮೃತ್ತಿಕೆಯ ಅಧಿಷ್ಠಾನನಾದಂತೆ ಪಶುಪತಿಯು ಪ್ರಧಾನದ ಅಧಿಷ್ಠಾನನಾಗುವನೆಂದು ಹೇಳಲಾಗದು. ಯಾಕಂದರೆ ಪಶುಪತಿಯು ಅಶರೀರನು. ಶರೀರವುಳ್ಳವನಿಗೇನೇ ಕುಲಾಲನಂತೆ ಅಧಿಷ್ಠಾನ ಶಕ್ತಿಯುಳ್ಳವನೆಂದು ನೋಡಲ್ಪಡುತ್ತದೆ. ಈಶ್ವರನಿಗೆ ಶರೀರತ್ವವು ಕೂಡುವುದಿಲ್ಲ. ಅವನು ಶರೀರವುಳ್ಳವನಾದರೆ ಅವಯವವುಳ್ಳವನಾಗಿ ಅನಿತ್ಯನಾಗುವನು. ಜೀವನು ಅಶರೀರನಾಗಿದ್ದಾಗ್ಯೂ ಕರಕಲೇವರಾದಿಗಳ ಅಧಿಷ್ಠಾನ ಕೊಡುವಂತೆ, ಅಶರೀರನಾದ ಮಹೇಶ್ವರನು ಪ್ರಧಾನಾದಿಗಳ ಅಧಿಷ್ಠಾನ ಕೊಡುವದೆಂದರೆ ಅದು ಆಗದು. ಯಾಕಂದರೆ ಪುಣ್ಯ ಪಾಪರೂಪ ಕರ್ಮಫಲ ಭೋಗಾರ್ಥವಾಗಿ ಅವುಗಳಿದ್ದುದರಿಂದ, ಪಶುಪತಿಯಾದರೂ ಪಾಪ–ಪುಣ್ಯ ಫಲ ಭೋಗಿಸುವವನಾಗುತ್ತಾನೆ. ಪಶುಪತಿಯು ಜೀವನಂತೆ ಪುಣ್ಯ ಪಾಪ ಫಲರೂಪ ಭೋಗಿಯಾದರೆ, ಅವನು ಅಂತವಂತನಾಗುವನು. ಸೃಷ್ಟಿಸಂಹಾರಕ್ಕೆ ಅಸಮರ್ಥನಾಗುವನಲ್ಲದೆ ಸರ್ವಜ್ಞನೆನಿಸಿಕೊಳ್ಳಲಾರನು. ಆದುದರಿಂದ ಪಶುಪತಿ ಮತವು ಅನಾದರಣೀಯವು. ಯದ್ಯಪಿ ಪಾಶುಪತ ಶೈವವು ವೇದವಿರೋಧಿಯಲ್ಲದ ಕೆಲವು ಧರ್ಮಗಳನ್ನು ಪ್ರತಿಪಾದಿಸಿದಾಗ್ಯೂ, ವೇದವಿರುದ್ಧವಾದ ನಿಮಿತ್ತೋಪಾದಾನ ಭೇದ ಕಲ್ಪನಾ ಮೂಲಕವಾಗಿದ್ದುದರಿಂದ ಅಸಮಂಜಸವಾಗಿದೆ."

ಶಂಕರ, ರಾಮಾನುಜರು ಇಬ್ಬರೂ ನಿಮಿತ್ತೋಪಾದಾನ ಉಭಯ ಕಾರಣವನ್ನು ಹೇಳುವವರಾಗಿದ್ದು, ಕೇವಲ ನಿಮಿತ್ತಕಾರಣವಾದ ಈಶ್ವರ ಕಲ್ಪನೆಯನ್ನು ನಿರಾಕರಿಸುವುದು ಸರಿಯೆ. ಆದರೆ ಮಧ್ವಾಚಾರ್ಯರು ಕೂಡ ಪಶುಪತಿಯ ನಿಮಿತ್ತಕಾರಣಮೀಶ್ವರತ್ವವನ್ನು ನಿರಾಕರಿಸುತ್ತಾರೆ. ಶಂಕರ, ರಾಮಾನುಜರ, ಅವೇ ಆಕ್ಷೇಪಗಳನ್ನು ಎತ್ತಿ ಕೊನೆಗೆ ತಮ್ಮ ನಿಮಿತ್ತಕಾರಣನಾದ ಈಶ್ವರನ ಕಲ್ಪನೆಯು ವೇದಗಳಿಂದ ನಿರ್ವಹಿಸ ಲಾಗಿದೆಯೆಂದು ಸಮಾಧಾನ ಹೇಳಿರುವರು. ವೇದ ಪ್ರಾಮಾಣ್ಯವನ್ನು ಮುಖ್ಯವಾಗಿಟ್ಟುಕೊಂಡಿರುವುದರಿಂದ ಈ ರೀತಿ ಹೇಳಲು ಬರುವುದು. ಕೇವಲ ಯುಕ್ತಿಯು ಪ್ರಮಾಣವಾಗಲಾರದು.

ಎಲ್ಲ ಆಚಾರ್ಯರ ಅಭಿಪ್ರಾಯಗಳನ್ನು ಕ್ರೋಡೀಕರಿಸಿದರೆ, ಸಾಂಖ್ಯಯೋಗ, ನ್ಯಾಯ, ವೈಶೇಷಿಕ ಮುಂತಾದ ಹೈತುಕರು ತರ್ಕದಿಂದ ಈಶ್ವರನ ನಿಮಿತ್ತಕಾರಣತ್ವವನ್ನು ಹೇಳುವವರೆಂದು ದೃಢವಾಗುತ್ತದೆ. ಆಚಾರಮಾರ್ಗದಲ್ಲಂತೂ ವೈದಿಕಾಚಾರವಿಂದ, ಅವೈದಿಕಾಚಾರಗಳಾದ ಎಲ್ಲ ತಾಂತ್ರಿಕಾಚಾರಗಳು ಸಮಾವೇಶವಾದದ್ದು ಕಂಡುಬರುವುದು. ಈ ಪ್ರಾಚೀನ ಮತಗಳು ಸಾಮಾನ್ಯವಾಗಿ ಭೇದವಾದಿಗಳಾಗಿರುವವು. ಮುಂದೆ ಕಾಶ್ಮೀರ ಶೈವವು ಅದ್ವೈತವನ್ನು ಹೇಳುವುದಾದರೆ ಶ್ರೀಕಂಠ ಶಿವಾ ಚಾರ್ಯನು ರಾಮಾನುಜನಂತೆ ಶಕ್ತಿವಿಶಿಷ್ಟಾದ್ವೈತವನ್ನು ಪ್ರತಿಪಾದಿ ಸಿರುವನು. ಈ ಆಚಾರ್ಯನ ಕಾಲವಾದರೂ ಕ್ರಿ. ಶ. ೧೧ ನೆಯ ಶತಮಾನವೆಂದು ಪಂಡಿತರ ಅಭಿಪ್ರಾಯವಾಗಿದೆ.

## ಲಾಕುಳಶೈವರ ನೈಯಾಯಿಕರು

(೧) ಕನ್ನಡ ಶಾಸನಗಳಲ್ಲಿ ವರ್ಣಿತರಾದ ಲಾಕುಳಶೈವರ ದಾರ್ಶ ನಿಕ ಮತವು ಯಾವದಿತ್ತೆಂಬುದನ್ನು ನೋಡೋಣ. ಚಾಳುಕ್ಯ ಮೊದಲ ನೆಯ ಸೋಮೇಶ್ವರ ಮಹಾಮಾತ್ಯಂ ಪ್ರಧಾನಾಗ್ರಣಿಯಾದ ನಾಗದೇವನು ಶಕೆ ೯೮೧ (೧೦೫೨ A.D.) ರಲ್ಲಿ ನಾಗಗೊಂಡವನ್ನು ಕಟ್ಟಿಸಿ, ಸೂಂಡಿಯ ನಗರೇಶ್ವರ ಪ್ರತಿಬದ್ಧ ನಾಗೇಶ್ವರದ ಸೋಮೇಶ್ವರ ಪಂಡಿತ ದೇವರಿಗೆ ಕೊಟ್ಟಿರುವ ತಾಮ್ರಶಾಸನದಲ್ಲಿ ಸೋಮೇಶ್ವರನಿಗೆ "ವೈಶೇಷಿಕ ಚೂಡಾ ರತ್ನ, ನೈಯಾಯಿಕ ಸರಸಿಜ ಮಾರ್ತಾಂಡ, ಸಾಂಖ್ಯ ಪ್ರಭಾವಾಧಿಕ,

ಶಬ್ದಜ್ಞಾನ ಪದ್ಮಾಸನ, ಮೀಮಾಂಸಕ ಗೋತ್ರತ್ರಾನ" ಎಂದು ವರ್ಣಿಸಲಾಗಿದ್ದರೂ ಸೋಮೇಶ್ವರ ಪಂಡಿತನ ದಾರ್ಶನಿಕ ಮತವು ನಿರ್ದಿಷ್ಟವಾಗಿ ತಿಳಿಯುವಂತಿಲ್ಲ ಮೀಮಾಂಸಕರ ವಿರುದ್ಧಮತವುಳ್ಳವನು ಎಂಬುದು ಮಾತ್ರ ನಿಶ್ಚಿತವಾಗುವುದು.

(೨) ಬಳ್ಳಿಗಾವೆಯ ಪಂಚಲಿಂಗ ದೇವಸ್ಥಾನವು ಶಕ್ತಿಪರ್ಷೆಯ ಭುಜಂಗಾವಳಿಗೆ ಸೇರಿದ ಇಟ್ಟಗೆಯ ಸಂತತಿಯ ಕಾಳಾಮುಖರಿಗೆ ಸೇರಿದ್ದು. ಈ ದೇವಸ್ಥಾನದ ಅಧಿಪತಿಗಳಲ್ಲಿ ಮೊದಲನೆಯವನ ವರ್ಣನೆ– "ಸಮಸ್ತ ತರ್ಕಾದಿಶಾಸ್ತ್ರ ಪಾರಾವಾರ ತಾರಗಂ, ವಾದಿರುದ್ರವಾದೀಭ ಮಸ್ತಕ ನಖಾಸ್ಫಾಡನ ಕಿಶೋರ ಕೇಸರಿ, ವಾದಿಮಹಾರಣ್ಯದಾವದಹನಂ, ದುಷ್ಟವಾದಿನಿಷ್ಠುರ ಪಟಿಷ್ಠ ಶಾರ್ದೂಲಂ, ಬೌದ್ಧಾಬ್ಧಿ ಬಾಡವಾಮುಖಂ, ಮೀಮಾಂಸಧಾತ್ರೀಧರವಜ್ರಂ, ಲೋಕಾಯತ ಮಹಾತರುವಿದಾರಣ ಕ್ರಕಚಂ, ಸಾಂಖ್ಯಾಹೀಂದ್ರ ರುಂದ್ರ ವೈನತೇಯಂ, ಅದ್ವೈತವಾದಿಭುಜ ಕುಠಾರಂ, ಅಕಳಂಕ ತ್ರಿಪುರದಹನ ತ್ರಿಣೇತ್ರಂ, ವಾದಿಘರಟ್ಟ ಮಾಧವ ಭಟ್ಟ ಘರಟ್ಟಂ, ಜ್ಞಾನಾನಂದಮದಭಂಜನ ವಿಶ್ವಾನಳ ಪ್ರಳಯೋಗ್ರಾನಲಂ, ಅಭಯಚಂದ್ರಕಾಳಾನಳಂ, ವಾದೀಭಸಿಂಹಶರಭಂ, ವಾದಿರಾಜಮುಖ ಮುದ್ರನಯವಾದಿ ದಿಶಾಪಟ್ಟಂ, ನೈಯಾಯಿಕ ಸಂರಕ್ಷಣೈಕದಕ್ಷಂ, ಸ್ವಪಕ್ಷ ಪೋಷಣ ಪರಪಕ್ಷದೂಷಣ ಪಟುತರ ವಿರಿಂಚಂ, ವಾಗ್ವಧೂಮಂಡನಂ, ಆಸ್ಥಾನಪದ್ಮಾಸನಂ, ವಿವೇಕನಾರಾಯಣಂ, ಗಮಕಮಹೇಶ್ವರಂ, ಉಪನ್ಯಾಸಾಮರಾಪಗಾಪ್ರವಾಹಂ, ವ್ಯಾಖ್ಯಾನ ಕೇಳಿಲಂಪಟಮನೋಹರಂ, ಸರಸೀರುಹಭೃಂಗಂ, ಅವದಾತ ಕೀರ್ತಿಧ್ವಜಂ, ಅಮಳಿನ ಚರಿತ್ರಂ, ದರ್ಪಿಷ್ಟ ಪಂಡಿತಗಳಪಾಶಂ, ವಾದಿದಿಗಂಬರ ಧೂಮಕೇತುಂ, ವಾದಿರುದ್ರ ನಾಮಾಂಕಿತರಪ್ಪ ಶ್ರೀಮಲ್ಲಕುಲೀಶ್ವರ ಪಂಡಿತರ್."

ಈ ಲಕುಲೀಶ್ವರ ಪಂಡಿತರ ವರ್ಣನೆಯು ಅತಿಶಯೋಕ್ತಿಗಳಿಂದ ತುಂಬಿದ್ದರೂ ಬೌದ್ಧ, ಜೈನ, ಲೋಕಾಯತ, ಸಾಂಖ್ಯ, ಮೀಮಾಂಸ, ಅದ್ವೈತ ದರ್ಶನಗಳನ್ನು ನಿರಾಕರಿಸಿ, "ನೈಯಾಯಿಕ ಸಂರಕ್ಷಣೈಕದಕ್ಷಂ," ಎಂದು ನೈಯಾಯಿಕ ದರ್ಶನವನ್ನು ಎತ್ತಿಹಿಡಿಯಲಾಗಿದೆ. ಇದರಿಂದ ಈ ಕಾಳಾಮುಖ ಲಕುಲೀಶ ಪಂಡಿತನು ನೈಯಾಯಿಕ ಮತದವನೆಂದು ಸ್ಪಷ್ಟವಾಗುತ್ತದೆ.

ಕೋಡಿಯ ಮಠದ ಸೋಮೇಶ್ವರ ಪಂಡಿತ ದೇವರ ವರ್ಣನೆಯಲ್ಲಿದ್ದುದು,

" ಅಕಳಂಕಾಂಬ್ರುಮಹೀಜ ಚೈತ್ರಸಮಯಂ
ಲೋಕಾಯುತಾಂಭೋಧಿಶೀ ।
ತಕರಂ ಸಾಂಖ್ಯಧರಾವಿಶಾರದನಿ ಮೀಮಾಂಸಾಂಗನಾಕಂಬುಕಂ ॥
ಠಕಸನ್ಮೌಕ್ತಿಕ ಭೂಷಣಂ ಸುಗತನಿರೇಜಾತ ಚಂಡಾಂಶು ತಾ ।
ರ್ಕಿಕ ಸೋಮೇಶ್ವರ ಸೂರಿ ಪೆಂಪುವಡೆದಂ ನೈಯಾಯಿಕಾಗ್ರೇಸರಂ ॥

" ಲೋಕಾಯತ, ಸಾಂಖ್ಯ, ಮೀಮಾಂಸ, ಜೈನ ಸಿದ್ಧಾಂತಗಳಲ್ಲಿ ಪ್ರವೀಣನಾದ ತಾರ್ಕಿಕನಾದ ಸೋಮೇಶ್ವರ ಸೂರಿಯು ನೈಯಾಯಿಕರಲ್ಲಿ ಅಗ್ರೇಸರನು"— ಎಂದಿರುವುದರಿಂದ ಇವನೂ ನೈಯಾಯಿಕ ದರ್ಶನಾನುಯಾಯಿಯು.

ಸೊರಬ ೨೭೫ ನೆಯ ಶಾಸನದಲ್ಲಿ ರುದ್ರಶಕ್ತಿಯ ವರ್ಣನೆ—

" ಸ್ವಸ್ತಿಯಮನಿಯಮ ಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾನ ಜಪತಪ ಸಮಾಧಿ ಶೀಲಗುಣಸಂಪಂನರುಂ ಸಕಲ ವಿದ್ವಜ್ಜನ ಪ್ರಸನ್ನರುಂ, ಋಗ್ಯಜುಸ್ಸಾಮಾಥರ್ವಣ ಚತುರ್ವೇದ ವೇದಾರ್ಥ ಪ್ರವೀಣರುಂ, ಪ್ರತಿಪಕ್ಷತಾರ್ಕಿಕ ಮನೋಗತ ಪರ್ವತ ಭೇದನ ವಜ್ರರುಂ, ಉಪನ್ಯಾಸಗೀರ್ವಾಣವಾಣಿ ತರತ್ತರಂಗರುಂ, ಚತುರ್ದಶ ಪ್ರಮಾಣಾನ್ವಿತ ಪ್ರಸಿದ್ಧ ಪ್ರತಿಪತ್ಯನವದ್ಯ ಹೃದ್ಯ ನಿತ್ಯಜ್ಞಾನಾನಂದ ಪರಶಿವ ಸ್ವರೂಪಾವಲೋಕನ ತತ್ವರೂಪರುಂ, ಯತಿಸಾರ್ವಭೌಮರುಂ, ಯಕ್ಕೋಟಿ ಸಮಯ ಚಕ್ರವರ್ತಿ ಸಪ್ತಾಹತರೀಸ್ಥಾನಾಚಾರ್ಯರುಂ, ಶ್ರೀ ಸ್ವಯಂಭು ಕೋಟಿನಾಥ ದಿಬ್ಯ ಶ್ರೀಪಾದಪದ್ಮಾರಾಧಕರುಂ, ಕರ್ಮಬಾಧಕರುಮಪ್ಪ ರುದ್ರಶಕ್ತಿದೇವರ್. "

ಈ ವರ್ಣನೆಯಲ್ಲಿ ರುದ್ರಶಕ್ತಿಯನ್ನು " **ಪ್ರತಿಪಕ್ಷ ತಾರ್ಕಿಕ ಮನೋಗತ ಪರ್ವತವನ್ನು ಭೇದನ ಮಾಡುವ ವಜ್ರದಂಡ**"ನಾಗಿದ್ದನೆಂದು ಕರೆಯಲಾಗಿದೆ. ಕೋಡಿಯ ಮಠದ ಸೋಮೇಶ್ವರನಿಗೆ **ತಾರ್ಕಿಕನೆಂದೂ ನೈಯಾಯಿಕ ಅಗ್ರೇಸರನೆಂದಿದ್ದು**, ಈ ಶಾಸನದಲ್ಲಿ ರುದ್ರಶಕ್ತಿಗೆ ಪ್ರತಿಪಕ್ಷ ತಾರ್ಕಿಕ ಮನೋಗತ ಪರ್ವತ ಭೇದನ ವಜ್ರದಂಡನೆನ್ನಬೇಕಾಗಿದ್ದರೆ, ಈ

ತಾರ್ಕಿಕರಾದ ನೈಯಾಯಿಕರು ಪ್ರತಿಪಕ್ಷ ತಾರ್ಕಿಕರೂ ಇದ್ದಂತೆ ನಾವು ಊಹಿಸಬಹುದು. ರುದ್ರಶಕ್ತಿಯು ವೇದಾರ್ಥಪ್ರವೀಣನೆಂದೂ, ಚತುರ್ದಶ ಪ್ರಮಾಣಾನ್ವಿತ ಪ್ರಸಿದ್ಧ ಪ್ರತಿಪತ್ಯನವದ್ಯ ನಿತ್ಯಜ್ಞಾನಾನಂದ ಪರಶಿವಸ್ವರೂಪಾವಲೋಕನತತ್ವರೂಪನೆಂದೂ ಬಣ್ಣಿಸಲಾಗಿದೆ. ಚತುರ್ದಶ ಪ್ರಮಾಣಗಳೆಂದರೆ,

ಪುರಾಣ ನ್ಯಾಯ ಮೀಮಾಂಸಾ ಧರ್ಮಶಾಸ್ತ್ರಾಂಗಮಿಶ್ರಿತಃ ।
ವೇದಾಃ ಸ್ಥಾನಾನಿ ವಿದ್ಯಾನಾಂ ಧರ್ಮಸ್ಯ ಚ ಚತುರ್ದಶ ॥ "

ಎಂದು ಯಾಜ್ಞವಲ್ಕ್ಯ ಸ್ಮೃತಿಯು ಉಪೋದ್ಘಾತ ಪ್ರಕರಣದಲ್ಲಿ ಹೇಳಿದೆ. ಅಂದರೆ, " ಪುರಾಣಂ ಬ್ರಾಹ್ಮಾದಿ । ನ್ಯಾಯಸ್ತರ್ಕವಿದ್ಯಾ । ಮೀಮಾಂಸಾ ವೇದವಾಕ್ಯವಿಚಾರಃ । ಧರ್ಮಶಾಸ್ತ್ರ ಮಾನವಾದಿ । ಅಂಗಾನಿ ವ್ಯಾಕರಣಾದೀನಿ ಷಟ್। ಏತ್ತೈರುಪೇತಾಶ್ಚತ್ವಾರೋ ವೇದ ವಿದ್ಯಾಃ। ಪುರುಷಾರ್ಥಸಾಧನಾನಿ । ತಾಸಾಂ ಸ್ಥಾನಾನಿ ಚತುರ್ದಶ । ಧರ್ಮಸ್ಯ ಚತುರ್ದಶ ಸ್ಥಾನಾನಿ ಹೇತವಃ ॥ " ಇದರಿಂದ (೧) ಪುರಾಣಗಳು ೧೮, (೨) ತರ್ಕವಿದ್ಯಾ, (೩) ಮೀಮಾಂಸಾ ಅಂದರೆ ವೇದಾರ್ಥವಿಚಾರ, (೪) ಧರ್ಮಶಾಸ್ತ್ರ ಮಾನವಾದಿ ಷಡಂಗಗಳು (ವ್ಯಾಕರಣ, ಶಿಕ್ಷೆ, ಕಲ್ಪ, ಛಂದಸ್ಸು, ಜ್ಯೋತಿಷ, ನಿರುಕ್ತ) ೬, (೫) ವೇದಗಳು ೪, ಈ ರೀತಿ ಒಟ್ಟು ೧೪ ಪ್ರಮಾಣಗಳು. ಈ ೧೪ ಪ್ರಮಾಣಗಳಿಂದ ನಿರ್ಣೀತವಾದ ಮತ್ತು ಜ್ಞಾನಸ್ವರೂಪವುಳ್ಳವನಾದ ಪರಶಿವನ ವರ್ಣನೆ ಇರುವುದರಿಂದ ಇವರು ವೇದವಿರೋಧಿಗಳಲ್ಲವೆಂದು ನಿಶ್ಚಿತವಾಗುತ್ತದೆ

ಹೊಂಬಳದ ಶಾಸನದಲ್ಲಿ ಬೆಳ್ಳಿಯ ಸಂತಾನದ ಕಾಲಾಮುಖ ಮುನೀಶ್ವರನಾದ ಬೊಂತೆಯ ಮುನಿಯನ್ನು ಲಕುಲೀಶ್ವರಾಪರನಾಮ ಧೇಯನೆನಿಸಿದ ಮಹಾನುಭಾವನನ್ನು ವರ್ಣಿಸುವಾಗ —

" ಸುಡಿಕರ್ತೃವಾದಮಂ ತೊಡ ।
ರ್ದಡೆ ದೇವ ಮನುಷ್ಯ ಯಕ್ಷ ರಾಕ್ಷಸರೊಡನಾ ॥
ದಡಮೊಂದನುಗ್ರಹಂ ಗೆ ।
ಯ್ದಡೆ ದಿನಪಂ ಪಡೆದನಲ್ತೆ ಬೊಂತೆಯಮುನಿಪ ॥

ದೇವ, ಮನುಷ್ಯ, ಯಕ್ಷ, ರಾಕ್ಷಸರೊಡನೆ, ತೊಡರಿದಾಗ— "ಕರ್ತೃವಾದ"ವನ್ನು ನುಡಿಯೆಂದು ಸೂರ್ಯನು ಅನುಗ್ರಹ ಗೈಯಲು, ಬೊಂತೆ ಮುನಿಯು ಅದನ್ನು ಪಡೆದನಂತೆ. ಇದರಿಂದ ಕಾಲಾಮುಖನಾದ ಈ ಬೊಂತೆಮುನಿಯು "ಕರ್ತೃವಾದವನ್ನು ಹೇಳುವವನಾಗಿದ್ದನು" ಎಂದು ತೋರುತ್ತದೆ. ಸತ್ಕಾರ್ಯವಾದ, ವಿವರ್ತವಾದ, ಪರಿಣಾಮವಾದ, ಕರ್ತೃವಾದ ಮುಂತಾದ ಅನೇಕ ವಾದಗಳು ದಾರ್ಶನಿಕ ಶಾಸ್ತ್ರಗಳಲ್ಲಿ ಬಳಕೆಯಲ್ಲಿವೆ. ಅವುಗಳಲ್ಲಿ ಈಶ್ವರಕರ್ತೃವಾದವೆಂಬುದು ನೈಯಾಯಿಕ ಪ್ರಕ್ರಿಯೆ. ಈ ಕರ್ತೃವಾದದಲ್ಲೂ ಅವಾಂತರ ಭೇದಗಳುಂಟು. ಘಟ ನಿರ್ಮಾಣಕ್ಕೆ ಕುಲಾಲನು ನಿಮಿತ್ತಕಾರಣನು ಮತ್ತು ಮೃತ್ತಿಕೆಯು ಉಪಾದಾನ ಕಾರಣವು. ಘಟದಂತಿರುವ ಈ ಸೃಷ್ಟಿಗೆ ನಿಮಿತ್ತ ಕಾರಣನು ಈಶ್ವರನು. ಮತ್ತು ಜಡ ಪ್ರಕೃತಿಯು ಉಪಾದಾನ ಕಾರಣವು. ನಿಮಿತ್ತ ಕಾರಣನಾದ ಈಶ್ವರನೇ ಈ ಸೃಷ್ಟಿಗೆ ಕರ್ತೃವು.

## ಈಶ್ವರನ ರೂಪು

ಇನ್ನು ಕರ್ತೃವಾದ ಈಶ್ವರನ ರೂಪವನ್ನು ನೈಯಾಯಿಕರಾದ ಈ ಕಾಳಾಮುಖರು ಹೇಗೆ ತಿಳಿಯುತ್ತಿದ್ದರೆಂಬುದು, ಅದೇ ಹೊಂಬಳ ಶಾಸನದ ಇನ್ನೊಂದು ಪದ್ಯದಿಂದ ತಿಳಿಯುವಂತಿದೆ. ಅದೇ ಬೊಂತೆ ಮುನೀಂದ್ರನು ಜಯಸಿಂಹನ ಸಂಗಡ ಅರಮನೆಯಲ್ಲಿರುವಾಗ ಎಲ್ಲ ತಾರ್ಕಿಕರ ಸಭೆ ಸೇರಿತ್ತು. ಆ ನರೇಶ್ವರ ಸಭೆಯೊಳು ಕರ್ತೃವಿನ ರೂಪ ಎಂತಹದೆಂದು ಪ್ರಶ್ನೆಯೆದ್ದಿರುವಾಗ ಬೊಂತೆಮುನಿಯು ಅದನ್ನು ನಿರ್ಣಯಿಸಿದನೆಂದು ಈ ಕೆಳಗಿನ ಪದ್ಯದಲ್ಲಿ ಹೇಳಿದೆ.

"ಕಟಕದೊಳ್ ವಿಹಾರಿಸುತ್ತಂ ಜಯಸಿಂಹದೇವನ ಅರಮನೆಯೊಳ್ ಚಕ್ರವರ್ತಿಗೆ ಪುರೋವರ್ತಿಯಾಗಿರ್ಪ ಸಮಯದೊಳು,

ಪರಸಮಯಂಗಳೊಳ್ ನೆಗರ್ದ ತಾರ್ಕಿಕರೆಲ್ಲರುಮಿರ್ದು ತನ್ನರೇ।
ಶ್ವರಸಭೆಯೊಳ್ ಸಮರ್ಥಿಸುವ ಕರ್ತೃವಿನರೂಪಮದೆಂತುಟೆಂದನೂ॥
ರ್ವರೊಳಮನಿತ್ಯರೂಪೆನಿಸಿ ನಿಂದು ನಿರುತ್ತರರಾಗಿ ಮಾಡಿ ಬಿ।
ತ್ತರಿಸಿದನಲ್ತೆ ಬೊಂತೆ ಮುನೀಶ್ವರ ಕರ್ತೃವಾದಮಂ॥

ಅಂತು ಚಕ್ರವರ್ತಿಯ ಸಭೆಯೊಳ್ ಸಕಲ ಸಮಯ ನಿರಾಕರಣ ಮುಖದಿಂ ಕರ್ತೃವಾದಿ ಚಕ್ರವರ್ತಿಯೆಂಬ ಪೆಸರಂ ಪೆತ್ತು;" ಇದೇ

ಮುನಿಗೆ ಮತ್ತೊಂದೆಡೆಯಲ್ಲಿ "ಕರ್ತೃವಾದಿ ಮುಖರಂದ" ಎಂದೂ, ಈತನ ಶಿಷ್ಯನಾದ "ಅವಧೂತ ದೇವನ" ಅನುಜನಾದ ವಾಮಶಕ್ತಿಯನ್ನು "ಕರ್ತೃವಾದೀಶ್ವರ''ನೆಂದೂ ವರ್ಣಿಸಲಾಗಿದೆ. ಮುತ್ತಗೆಯ ಸಂಗಮೇಶ್ವರ ಶಾಸನದಲ್ಲಿ **"ಕಾಶ್ಮೀರ ಮುನೀಂದ್ರನೊಳು ಸೋಲದವರಾರ್ ತಾರ್ಕಿಕರ್"** ಎಂದಿದೆ. ಈ ದಿಬ್ಯ ಮುನಿಗೆ "ಶಿಷ್ಯರ್ ವೇದಾಂತವಿದರ್" ಎಂದೂ ಲಕುಳೀಶ ವ್ರತಿಗೆ ''ಮನುಮಾರ್ಗಚರಿತಂ'' ಎಂದೂ ಇದೆ. ಈ ಎಲ್ಲ ವಿವೇಚನೆಯಿಂದ ಲಾಕುಳಶೈವರಾದ ಕಾಳಾಮುಖರೂ, ನೈಯಾಯಿಕರೂ, ಈಶ್ವರ ಕರ್ತೃವಾದವನ್ನು ಸಮರ್ಥಿಸುವ ತಾರ್ಕಿಕರೂ, ಚತುರ್ದಶ ಪ್ರಮಾಣಗಳನ್ನು ಅಂಗೀಕರಿಸುವವರೂ, ಈಶ್ವರನ ರೂಪ ಅನಿತ್ಯವೆಂದು ಪ್ರತಿಪಾದಿಸುವವರೂ, ಮನುಮಾರ್ಗಚರಿತರೂ ಆಗಿದ್ದುದರಿಂದ ವೇದಾವಿರೋಧಿಗಳೆಂದು ಕಂಡುಬರುವುದು.

ಇದೇ ಸಂದರ್ಭದಲ್ಲಿ ಇನ್ನೊಂದು ವಿಷಯವನ್ನು ಸ್ಪಷ್ಟಗೈಯ ಬೇಕಾಗಿದೆ. ಈಶ್ವರನ ರೂಪು ಅನಿತ್ಯವೆಂದುದು ಹೇಗೆ? ಪರಮಾತ್ಮನು ಒಂದು ರೂಪದಿಂದ ಸೃಷ್ಟಿಕಾರ್ಯ, ಇನ್ನೊಂದು ರೂಪದಿಂದ ಪಾಲನ ಕಾರ್ಯ, ಮತ್ತೊಂದು ರೂಪದಿಂದ ಸಂಹಾರ ಕಾರ್ಯ, ಈ ರೀತಿ ಬೇರೆ ಬೇರೆ ರೂಪುಗಳಿಂದ ಬೇರೆ ಬೇರೆ ಕಾರ್ಯಗಳನ್ನು ಮಾಡುವುದರಿಂದ ಈಶ್ವರನ ರೂಪು ಅನಿತ್ಯ ಎನ್ನಲಾಗಿದೆ. ಇದು ನೈಯಾಯಿಕರ ಪ್ರಕ್ರಿಯೆಯು. ಗುಣರತ್ನ ಸೂರಿಯು ಶೈವರಿಗೆ ನೈಯಾಯಿಕರೆಂದು ಹೇಳಿರುವುದಾದರೂ, ಈ ಲಾಕುಳಶೈವರನ್ನು ಅನುಲಕ್ಷಿಸಿಯೆ ಇರಬಹುದು.

ಮಾಧವಾಚಾರ್ಯನ ಸರ್ವದರ್ಶನ ಸಂಗ್ರಹದಲ್ಲಿ ಮಾಹೇಶ್ವರ ದರ್ಶನಗಳಲ್ಲೊಂದಾದ ಶೈವಮತವನ್ನು ಹೇಳಿದೆ. ಅದರಲ್ಲಿ ಪಶುಗಳಲ್ಲಿ ಮೂರು ಭೇದಗಳು (೧)ವಿಜ್ಞಾನಕಲ. (೨) ಪ್ರಯಾಯಕಲ. (೩) ಸಕಲ. ವಿಜ್ಞಾನಕಲರು ಮಲಯುಕ್ತರು, ಪ್ರಲಯಾಕಲರು ಮಲಕರ್ಮಯುಕ್ತರು, ಸಕಲರು ಮಲಮಾಯಾ ಕರ್ಮಸಂಯುಕ್ತರು. ಇವುಗಳಲ್ಲಿ ಮೊದಲನೇ ವರ್ಗದ ವಿಜ್ಞಾನಕಲದಲ್ಲಿ ಪುನಃ ಎರಡು ಬಗೆ— ಸಮಾಪ್ತ ಕಲುಷರು, ಮತ್ತು ಅಸಮಾಪ್ತಕಲುಷರು. ಸಮಾಪ್ತಕಲುಷರೇ ಪರಮೇಶ್ವರನ ಅನುಗ್ರಹದಿಂದ ವಿದ್ಯೇಶ್ವರ ಪದವಿಗೆ ಬರುವರು. ಅಸಮಾಪ್ತ ಕಲುಷರು ಮಂತ್ರಗಳಾಗುವರು. ಈ ಮಂತ್ರಗಳು ಏಳು ಕೋಟಿಗಳು.

ಮಂತ್ರೇಶ್ವರರು ಏಳು ಕೋಟಿ ಕೋಟಿಗಳು. ಅಂತೆಯೇ ಈ ಮತಕ್ಕೆ ಏಕ್ಕೋಟಿಸಮಯವೆಂದು ಹೆಸರು. ಇಂದಿಗೂ ಕರ್ನಾಟಕದಲ್ಲಿ ಮೈಲಾರನ ಒಕ್ಕಲರು " ಏಳುಕೋಟಿ ಏಳುಕೋಟಿ ಉಘೇ ಚಾಂಗು ಭಲಾ" ಎಂದು ಶಿವನ ಜಯಘೋಷ ಮಾಡುತ್ತಾರೆ. ಇದುವೆ ಪೂರ್ವದ ಲಾಕುಳಸಿದ್ಧಾಂತ ವಿದ್ದಂತೆ ತೋರುವುದು. ಶಾಸನಗಳಲ್ಲಿ ಇದಕ್ಕೆ ಏಕ್ಕೋಟಿ ಸಮಯವೆಂದು ಕರೆಯಲಾಗಿದೆ. ಸರ್ವದರ್ಶನಕಾರನ ಮಾಹೇಶ್ವರರಲ್ಲಿಯು ಶೈವ ಸಿದ್ಧಾಂತವು ಇದೇ. ಈ ಸಂಪ್ರದಾಯವೇ ಮುಂದೆ ಶ್ರೀಕಂಠ ಶಿವಾ ಚಾರ್ಯನಿಂದ ನಿರೂಪಿಸಲ್ಪಟ್ಟ ಶಕ್ತಿವಿಶಿಷ್ಟಾದ್ವೈತದಲ್ಲಿ ಪರಿಣಾಮ ವಾಯಿತೆಂದು ಡಾಕ್ಟರ ಭಾಂಡಾರಕರರು ಅಭಿಪ್ರಾಯಪಟ್ಟಿದ್ದಾರೆ.—

"The Saiva School that developed in later times and is represented by Sambhudeva and Shrikantha Sivacharya to be noticed hereafter and supported also by texts in Vayaviya Samhita, hold that Siva possesses or develops in himself a Sakti or Power,consisting of the rudiments of the individual soul and the material world and from this power the whole world is developed. This doctrine may therefore be called qualified Spiritual mouism like that of Ramanuja in as much as Siva characterised by the Shakti creates. This last is lenet of Lingayat school also." *

ನಿಜಗುಣಶಿವಯೋಗಿಯು ವಿವೇಕ ಚಿಂತಾಮಣಿಯ ಜ್ಞಾನಪಾದ ದಲ್ಲಿ ವಿಸ್ತೃತವಾಗಿ ಹೇಳಿರುವ ಸಿದ್ಧಾಂತವಾದರೂ ಇದೇ ಪ್ರಕ್ರಿಯೆಗಳುಳ್ಳ ದ್ದಾಗಿದೆ.

ಮೋಕ್ಷದ ಸ್ವರೂಪದ ವಿಷಯವಾಗಿ ನಿಜಗುಣಶಿವಯೋಗಿಯು ಶಿವಸಮಾನತ್ವವನ್ನೇ ಹೇಳಿರುವನು. ಕನ್ನಡ ಕವಿಯಾದ ಹರಿಹರನಾದರೂ ಶಿವಸಮಾನತೆಯನ್ನೇ ಹೇಳಿರುವನು.

---

* Shaivism & Vaishnavism and other mino religions, Page 181.

ಅವಿದಿತ್ವಾ ಪರಂ ತತ್ವಂ ಶಿವತ್ವಂ ಕಲ್ಪಿತಂ ತು ಯೈಃ।
ತ ಆತ್ಮೋಪಾಸಕಾಃ ಶೈವೇ ನ ಗಚ್ಛಂತಿ ಪರಂ ಶಿವಮ್ ॥

(ಸ್ವಚ್ಛಂದ ತಂತ್ರ)

ಈ ಶ್ಲೋಕ ವ್ಯಾಖ್ಯಾನದಲ್ಲಿ ಕ್ಷೇಮರಾಜನು " ಶೈವ, ಪಾಶುಪತ, ಲಾಕುಲಾದಿಭಿರ್ನಾನಾತ್ಮವಾದಿಭಿಃ ಶಿವತ್ವಂ ಕಲ್ಪಿತಮಾತ್ಮನಾಂ ವ್ಯಾಪಕತ್ವ, ನಿತ್ಯತ್ವಾಮೂರ್ತತ್ವ, ಚಿತ್ವ, ಸ್ವಷ್ಟತ್ವಾದ್ಯನಂತ ಅನಂತಧರ್ಮಸಾಮ್ಯೇನ ಶಿವೈಕರೂಪಾಣಾಮಪಿ, ಕೇನ ಚಿತ್ಕಲ್ಪನಾಮಾತ್ರೇಣ ನಿರ್ಯುಕ್ತೇನ ಭಿನ್ನಶಿವರೂಪತ್ವಮುಚ್ಯತೇ । ತೇ ಸರ್ವೇ ವ್ಯಾಖ್ಯಾತ ವ್ಯಾಪ್ತಿಕಾತ್ಮೋಪಾಸಕಾಃ ಶೈವೇಽಸ್ಮಿನ್ ಅದ್ವಯ ನಯೇ ಪರಂ ಶಿವಂ ವ್ಯಾಖ್ಯಾತ ಸ್ವರೂಪಂ ನ ಗಚ್ಛಂತಿ, ನ ತನ್ಮಯೀ ಭವಂತಿ; ಸಾಂಖ್ಯಯೋಗ ವೇದಾಂತವಾದ್ಯಾದಯಸ್ತು ಅಪರಪದಸ್ಥಾ ಏವೇತಿ ಕೇನ ತೇಷಾಮುಯತ್ಪದಪ್ರಾಪ್ತಿಃ ಸಂಭಾವನಾಪಿ । ಅಥ ಚ ಸರ್ವೇ ಏವ ಆತ್ಮೋಪಾಸಕಾಃ ಶೈವೇ ನ ಪಾರಮೇಶ್ವರಾದ್ವಯದರ್ಶನೋಕ್ತೇನ ಜ್ಞಾನೇನ ಪರಂ ಶಿವಂ ಗಚ್ಛಂತೀತಿ । " ಎಂದು ವಿವರಿಸಿದ್ದಾನೆ. ಅದೇ ಗ್ರಂಥದ ಪಾನು ೨೮ ರಲ್ಲಿ " ಪಾಶುಪತಾದ್ಯಾಃ ತ ಆತ್ಮನೊ ಯ ತತ್ವ ಶುದ್ಧವಿದ್ಯಾಜ್ಞಾನ ಕೇವಲರೂಪಂ ತದಗಶಿಂ ಲಭಂತೇ ನ ತು ತಾತ್ವಿಕೀಂ ಮುಕ್ತಿಂ ಭೇದಸ್ಯ ಪರಿತ್ಯಾಗಾದಿತಿ " ॥ ( ಪಾನು ೪೯೨ ) ಎಂದಿದೆ.

ಈ ಅವತರಣಿಕೆಯು ಮೇಲಿಂದಲೂ, ಅದ್ವಯ ಶಾಸ್ತ್ರವನ್ನು ಹೇಳುವ ಕ್ಷೇಮರಾಜನ ಅಭಿಪ್ರಾಯವಾದರೂ, ಶೈವ, ಪಾಶುಪತ, ಲಾಕುಲಾದಿಗಳು ಆತ್ಮನಿಗೆ ವ್ಯಾಪಕತ್ವ, ನಿತ್ಯತ್ವ, ಅಮೂರ್ತತ್ವ, ಚಿತ್ವ, ಸ್ವಷ್ಟತ್ವ ಮುಂತಾದ ಅನಂತ ಧರ್ಮಸಾಮ್ಯಗಳಿಂದ ಶಿವೈಕರೂಪನೆಂದು, ಚಿತ್ಕಲ್ಪನಾ ಮಾತ್ರದಿಂದ ಭಿನ್ನ ಶಿವರೂಪತ್ವವನ್ನು ಹೇಳುವವರು. ಇಂಥ ಆತ್ಮೋಪಾಸಕರಾದ ಶೈವರು ಪಾರಮೇಶ್ವರಾದ್ವಯ ಪರಶಿವಸ್ವರೂಪವನ್ನು ಹೊಂದುವುದಿಲ್ಲ ಮತ್ತು ತನ್ಮಯರಾಗುವುದಿಲ್ಲ. ಇವನ ಅಭಿಪ್ರಾಯದಲ್ಲೂ ಪಾಶುಪತ, ಶೈವ, ಲಾಕುಳರು ಶಿವಸಮಾನತೆಯೇ ಮೋಕ್ಷವೆಂದು ಹೇಳುವವರಾಗಿರುವರು. ಇದೇ ಕ್ಷೇಮರಾಜನು, ಪೂರ್ವದಲ್ಲಿ ಸ್ವಚ್ಛಂದ ಮುಂತಾದವುಗಳಿಗೆ ಅದ್ವಯಪರವಾಗಿ ಅರ್ಥ ಮಾಡುತ್ತಿರಲಿಲ್ಲವೆಂದೂ, ಆದುದರಿಂದ ತನಗೆ ಅದ್ವಯಪರವಾಗಿ ವ್ಯಾಖ್ಯಾನ ಮಾಡಬೇಕಾಯಿ

ತೆಂದೂ ಪ್ರಾರಂಭದಲ್ಲೇ ಹೇಳಿಕೊಂಡಿರುವನು. ಇದರಿಂದ ಕಾಶ್ಮೀರ ಅದ್ವಯಪರವಾದ ಶೈವದ ಪ್ರಾದುರ್ಭಾವಕ್ಕಿಂತ ಮೊದಲು ಎಲ್ಲ ಶೈವ ಶಾಸ್ತ್ರಗಳು ಭೇದಪರವಾಗಿಯೇ ಇದ್ದುವೆಂಬುದು ಒಡೆದುಕಾಣುವುದು. ಕಾಶ್ಮೀರ ಅದ್ವಯಶೈವವು ಕ್ರಿ. ಶ. ೯ ನೆಯ ಶತಮಾನದಿಂದ ಬೆಳಕಿಗೆ ಬಂದಿದೆ. ಕ್ಷೇಮರಾಜನು ಶೈವ, ಲಾಕುಳರನ್ನು ಬೇರೆ ಬೇರೆಯಾಗಿ ಹೇಳುತ್ತಾನೆ. ನಿಜಗುಣಶಿವಯೋಗಿಯಾದರೂ, ಪಾಶುಪತ, ಕಾಪಾಲಿಕ, ಮಹಾವ್ರತಧರರನ್ನು ಹೇಳಿರುವನು. ಲಾಕುಳ ಕಾಳಾಮುಖರನ್ನು ಹೆಸರಿಸಿಲ್ಲ. ಮಹಾವ್ರತಧರರನ್ನು ಕಾಳಾಮುಖರ ಬದಲಾಗಿ ಹೇಳುತ್ತಾನೆ. ಸರ್ವದರ್ಶನ ಸಂಗ್ರಹದಲ್ಲಿ ಲಾಕುಲದ ಹೆಸರಿಲ್ಲ. ಪ್ರತ್ಯಭಿಜ್ಞಾ ಶಾಸ್ತ್ರವನ್ನು ಹೇಳಿದೆಯಷ್ಟೆ. ಸರ್ವದರ್ಶನ ಸಂಗ್ರಹದಲ್ಲಿ ಹೇಳಿರುವ ಶೈವವು ಲಾಕುಳ ಶೈವವೊ ಏನೋ ? ನಿಜಗುಣಶಿವಯೋಗಿ ಹೇಳುವ ಶುದ್ಧ ಶೈವಕ್ಕೂ, ಲಾಕುಳಶೈವಕ್ಕೂ ತಾತ್ವಿಕ ಅಂತರವು ವಿಶೇಷವಿದ್ದಿರಲಿಕ್ಕಿಲ್ಲ. ಆಚಾರ ಮಾರ್ಗದಲ್ಲಿ ಕೆಲವು ಹೆಚ್ಚುಕಡಿಮೆ ಇದ್ದಿರಬಹುದು. ನಿಜಗುಣಶಿವಯೋಗಿಯು ಹೇಳಿದಂತೆ ಶುದ್ಧಶೈವವು ವೈದಿಕ ತಾಂತ್ರಿಕವು, ಅಂದರೆ ವೈದಿಕಾಚಾರಕ್ಕೂ ತಾಂತ್ರಿಕಾಚಾರಕ್ಕೂ ಅವಿರೋಧವಾಗಿ ಸಮನ್ವಯ ಮಾಡಿಕೊಂಡಿದೆ. ಆದರೆ ಲಾಕುಳಶೈವವು ಕೇವಲ ತಾಂತ್ರಿಕವಾಗಿದ್ದಿರಬಹುದು. ವಾಯುಪೀಯ ಸಂಹಿತೆಯಲ್ಲಿ ವರ್ಣಿಸಿರುವ ಶೈವವಾದರೂ ತಾಂತ್ರಿಕ ವೈದಿಕವಂತೆ; ಅಂದರೆ ತಾಂತ್ರಿಕ ಆಚಾರಕ್ಕೆ ಪ್ರಾಧಾನ್ಯ ಕೊಟ್ಟು, ವೈದಿಕಾಚಾರವನ್ನು ಸಮನ್ವಯಗೊಳಿಸಲಾಗಿದೆ. ಅಂತೆಯೇ ಪೈತಾಮಹ ಧರ್ಮಕ್ಕೂ, ಅದರಲ್ಲಿಯ ಪಾಶುಪತವ್ರತಕ್ಕೂ ಕ್ವಚಿತ್ ಸಮವಾಗಿ ಕ್ವಚಿತ್ ಭಿನ್ನವಾಗಿದೆಯೆಂದು ಹೇಳಲಾಗಿದೆ. ಲಾಕುಳಶೈವರು ಕೇವಲ ತಾಂತ್ರಿಕಾಚಾರವುಳ್ಳವರಾಗಿದ್ದರೂ, ಶೈವಪುರಾಣಾದಿಗಳಿಗೆ ಮನ್ನಣೆ ಕೊಡುವವರಾಗಿದ್ದು, ವೈದಿಕ ವಾಙ್ಮಯ ಪರಂಪರೆಯನ್ನು ಆತ್ಮೀಯತೆಯಿಂದ ಹೇಳಿಕೊಳ್ಳುತ್ತಾರೆ ವೈದಿಕ ಮತಾಚಾರಗಳ ಅವಿರೋಧಿಗಳಾಗಿದ್ದುದು ಶಾಸನಗಳಿಂದ ವ್ಯಕ್ತವಾಗುತ್ತದೆ.

ಚಾಳುಕ್ಯ ತ್ರಿಭುವನಮಲ್ಲ ಸೋಮೇಶ್ವರನ ಕಾಲದಲ್ಲಿ ಆತನ ಮಹಾಸಾಮಂತ ಮಹಾಮಂಡಳೇಶ್ವರನಾದ ಕಾಮರಸನು ಬನವಾಸಿ ಪನ್ನಿರ್ಚ್ಛಾಸಿರವನ್ನೂ ಹಾನುಗಲ್ಲು ಐನೂರನ್ನೂ ಉಭಯ ಸಾಮ್ಯದಿಂದ ದುಷ್ಟನಿಗ್ರಹ ಶಿಷ್ಟಪ್ರತಿಪಾಲನೆ ಮಾಡುತ್ತಿರುವಾಗ, ಬನವಾಸಿ ನಾಡಿಗೆ ತೊಡವೆನಿಸಿದ

ಕುಪ್ಪಗಡ್ಡೆಯ ಗ್ರಾಮವು ಸಾಸಿರ ಬ್ರಾಹ್ಮಣರ ಅಗ್ರಹಾರವಾಗಿತ್ತು. ಅಲ್ಲಿ ಪೆರ್ಬಾರು (ಹೆಬ್ಬಾರು) ರಾಮಯ್ಯ, ಭೀಮಣ್ಣರು ಸುಖದಿಂದಿರುವಾಗ ಕೋಡಿಮಠದಿಂದ, ಕಂತುಹರನು ಬರ್ಪಂತೆ, ಅನಂತಗುಣ ವಾಮಶಕ್ತಿ ಮುನಿಯು ಅಲ್ಲಿಗೆ ಬಂದನು. ಆ ಮುನಿಯು ಬರವನ್ನು ಕಂಡು ಇದಿರೆದ್ದು, ಅಭಿವಂದನ ಮಾಡಿ, ಉಚ್ಚಾಸನದಲ್ಲಿ ಕುಳ್ಳಿರಿಸಿ, ಪಾದಪ್ರಕ್ಷಾಲನಂಗೈದು ದೇವತಾ ಪ್ರತಿಷ್ಠೆಯ ಫಲವು ಆವುದೆಂದು ಕೇಳಲು,—

"ಲಿಂಗಪ್ರತಿಷ್ಠೇನ ಸರ್ವದೇವತಾಃ ಪ್ರತಿಷ್ಠಿತಾಃ" ಎಂಬುದು ಶ್ರುತಿಯೆಂದು ಮುನಿಯು ಹೇಳಿದನು. ಅದನ್ನು ಕೇಳಿ ವೈಭವದಿಂದ ವಿದ್ವತ್ಸಭೆಯನ್ನು ನೆರೆಯಿಸಿ, ಆ ಮುನಿಪತಿ ಸಹಿತ ಶುಭಲಗ್ನದಲ್ಲಿ ಲಿಂಗ ಪ್ರತಿಷ್ಠೆಯನ್ನು ಮಾಡಿ, ಸಮಸ್ತ ಜನರನ್ನು ಸುವರ್ಣ ದಿವ್ಯಾನ್ನದಿಂದ ತಣಿಸಿ, ಆಶೀರ್ವಚನಗಳಿಂದ ಪರಸಿ, ಆ ದೇವಂಗೆ ರಾಮೇಶ್ವರ ದೇವರೆಂಬ ಅಭಿಧಾನವನ್ನು ಮಾಡಲಾಯಿತು ಈ ಸಂಗತಿಯನ್ನು ಹೆಗ್ಗಡೆ ರಾಮಯ್ಯನು ತನ್ನ ಸ್ವಾಮಿಯಾದ ಕಾಮಭೂಪನಿಗೆ ಅರುಹಿದನು. ಅದನ್ನು ಕೇಳಿ ಸಂತೋಷಬಟ್ಟು ದೇವತಾದರ್ಶನ ನಿಮಿತ್ತವಾಗಿ ಕುಮಾರ ರೊಡನೆ ಮಂತ್ರಿ ಸಹಿತವಾಗಿ ಕುಪ್ಪಗಡ್ಡೆಗೆ ಬಂದು, ಆ ದೇವನನ್ನು ನೋಡಿ ಸಂತೋಷಬಟ್ಟು ರಾಮಯ್ಯ ಹೆಬ್ಬಾರು ಅಣ್ಣ ಭೀಮಯ್ಯರನ್ನು ಕರೆದು, ದೇವರಂಗಭೋಗ, ರಂಗಭೋಗ, ನಿತ್ಯನಿವೇದ್ಯ ಮಹಾದಾನಕ್ಕೆಂದು ಕೈಯಡಿವಳ್ಳಿಯನು ಆ ರಾಮಯ್ಯನ ರಾಮೇಶ್ವರಕ್ಕೆ ಕೊಟ್ಟನು (ಶಿವಮೊಗ್ಗ ಜಿಲ್ಲೆ, ಸೊರಬ ಶಾಸನ-೧೧೮೯). ಅದರಂತೆ ಹಿಡಂಬೇಶ್ವರ ಪಾದಾರಾಧಕ ಪಾಂಡ್ಯರಾಜ್ಯಾಭರಣನು ಪರಮ ಮಾಹೇಶ್ವರನು. ಮಹಾ ಸಾಮಂತ ಕಾಮನಾಯಕನು ಬೆಮಚ್ಚೂರು ನೆಲೆವೀಡಿನಲ್ಲಿರುವಾಗ ಹೆಗ್ಗಡೆ ಮಾಚಯ್ಯನ ಮಗಳು ಪಂಚಗಾಲವನೆಯುಮೆನಿಸಿದ ಗಂಗವ್ವೆ, "ಶಿವ ಧರ್ಮೋತ್ತರದಲ್ಲಿ ಲಿಂಗಪ್ರತಿಷ್ಠೆಯ ಮಾಹಾತ್ಮೆಯುಂ ಕೇಳ್ದು ಲಿಂಗ ಪ್ರತಿಷ್ಠೆಯಂ ಮಾಡಿ, ಕಾಮನಾಯಕನನ್ನು ಬೇಡಿಕೊಂಡು, ಶೀಲಗುಣ ಸಂಪನ್ನರಪ್ಪ ಮನುಮಾರ್ಗಚರಿತರುಮಪ್ಪ ಸೋಮರಾಶಿ ಪಂಡಿತರ ಕಾಲಂ ಕರ್ಚಿ ಧಾರಾಪೂರ್ವಕಂ" ಕೊಟ್ಟಿದ್ದಾಳೆ (ಚಿತ್ರದುರ್ಗ ನಂ. ೪೪–೧೧೮೭). ಹನ್ನೆರಡನೆಯ ಶತಮಾನದ ಕೊನೆಯ ಕಾಲವಲ್ಲಿಯ ಈ ಶಾಸನ ಗಳಿಂದ ಲಾಕುಳಶೈವರಾದ ಮಾಹೇಶ್ವರರು ಪುರಾಣೋಕ್ತ ಧರ್ಮಾಚರಣೆ ಯಲ್ಲಿ ನಂಬುಗೆಯುಳ್ಳವರಾಗಿದ್ದರೆಂದು ಗೋಚರವಾಗದಿರದು.

---

## ಐದನೆಯ ಪ್ರಕರಣ

ಶಿಶು ಅಂದರೆ ಶಿಷ್ಯನಿಗೆ ದೇಶಿಕನು ಶಿವಾಚಾರ್ಯ ಪದವಿಯನ್ನು ಕೊಡುವ ವಿಧಿಯನ್ನು ಹೇಳುವ ಸಂದರ್ಭದಲ್ಲಿ, ರಾಜಕೀಯ ಉಪಕರಣಗಳೆಲ್ಲವನ್ನು ಶಿಷ್ಯನಿಗೆ ಕೊಡಬೇಕೆಂದು ವಾಯುವೀಯ ಸಂಹಿತೆಯ ಉತ್ತರ ಭಾಗದ ೧೭ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ. ಯಾಕೆಂದರೆ, ಆಚಾರ್ಯ ಪದವಿಯನ್ನು ಪಡೆದವನು ರಾಜ್ಯವನ್ನು ಮಾಡಲು ಯೋಗ್ಯತೆಯುಳ್ಳವನಾಗುತ್ತಾನೆ.

ಅಥ ತಸ್ಮೈ ಗುರುರ್ದದ್ಯಾದ್ರಾಜೋಪಕರಣಾನ್ಯಪಿ ।
ಆಚಾರ್ಯಪದವೀಂ ಪ್ರಾಪ್ತೋ ರಾಜ್ಯಂ ಚಾಪಿ
ಯತೋಽರ್ಹತಿ ॥ ೧೬ ॥

ಅನಂತರ ಆಚಾರ್ಯನಾದವನು ಪೂರ್ವಜರ ಆಚರಣೆಯ ಪರಂಪರೆಗನುಸಾರವಾದ ನಡತೆಯಿಂದ, ಶಿವಶಾಸ್ತ್ರೋಕ್ತಾಚರಣೆಯಿಂದ ಲೋಕದಲ್ಲಿ ಪೂಜ್ಯನಾಗಬೇಕು ॥ ೧೭ ॥

ಹೊಂಬಳದ ಶಾಸನದಲ್ಲಿ ವಾಮಶಕ್ತಿಯ ವಿಷಯವಾಗಿ—

"ಇಂತು ಅವಧೂತದೇವರ್ ಪ್ರಮುಖಶಿಷ್ಯಸಂಸೇವ್ಯಮಾನ ಪಾದಾರವಿಂದರುಂ ಪರಿವೃತಮುನೀಂದ್ರರುಮಾಗಿ—

ಸೃಜಿಯಿಸಿದರ್ ಸಕಲಗುಣ ।
ವ್ರಜಮುಂ ತಂದೊಂದುಮಾಡಿ ಕಂಥಾಚಾರ್ಯರ್ ॥
ನಿಜಮಹಿಮೆಯಿನೊಸೆದೆಸೆವಂ ।
ತು ಜಗನ್ನುತನೆನಿಪ ವಾಮಶಕ್ತಿಯಂ........ ॥"

ಎಂದಿದೆ. ಕಂಥಾಚಾರ್ಯನನ್ನು ಮಾಡುವುದೂ ಆಚಾರ್ಯ ಪದವಿಯನ್ನು ಕೊಡುವುದೂ ಒಂದೇ ಎಂದು ತೋರುವುದು.

ಅದೇ ವಾಯುವೀಯ ಸಂಹಿತೆಯ ಇನ್ನೊಂದು ಕಡೆ,

"ಆಲಯಂ ಚ ಮಹೇಶಸ್ಯ ಶಿವಸ್ಯ ಪರಮಾತ್ಮನಃ ।
ರಾಜಾವಸಥವತ್ಕಲ್ಪ್ಯಂ ಶಿಲ್ಪಶಾಸ್ತ್ರೋಕ್ತಲಕ್ಷಣಂ ॥

(ಅಧ್ಯಾಯ ೨೦ ಶ್ಲೋಕ ೧೦೪)

ಅರಮನೆಯಂತೆ ಶಿವಾಲಯವು ಇರಬೇಕಂತೆ. ಇಂತಹ ಅರಮನೆ ಯಂತಿರುವ ಶಿವಾಲಯದ ಕಾರ್ಯಕಲಾಪಗಳನ್ನು ಸಾಗಿಸುವ ಮೇಲಧಿಕಾರಿಯು ಶೈವಾಚಾರ್ಯನು. ಅವನ ರಾಜ್ಯವು ಧಾರ್ಮಿಕ ಕ್ಷೇತ್ರವು. ಅವನ ಧನವು ತಪೋಧನ ಆದುದರಿಂದ ಶಿವಾಲಯಗಳಿಗೆ ಸಂಬಂಧಿಸಿದ ಸ್ಥಾನಾಚಾರ್ಯರಿಗೆ ಸಾಮಾನ್ಯವಾಗಿ ತಪೋಧನರೆಂಬ ಸಂಬೋಧನೆ ಶಾಸನಗಳಲ್ಲಿ ಬರುತ್ತದೆ. ಅದೇ ಹೊಂಬಳ ಶಾಸನದಲ್ಲಿ ರುದ್ರಶಕ್ತಿಯನ್ನು ವರ್ಣಿಸುವಾಗ ಆತನ ಆಭರಣಗಳನ್ನು ಈ ಕೆಳಗಿನಂತೆ ಹೇಳಲಾಗಿದೆ.

ಗುರುಧರ್ಮಾಚರಣಂ ದಯಾನುಸರಣಂ ಪ್ರೋದ್ಭೂತ
ದುಷ್ಕರ್ಮಸಂ ।
ಹರಣಂ ಸಂಶ್ರಿತ ಸಾಧುವರ್ಗ ಭರಣಂ ವಿಶ್ವೇಶ್ವರಾಂಘ್ರಿದ್ವಯ-॥
ಸ್ಮರಣಂ ಸರ್ವಜನೋಪಕಾರ ಕರಣಂ ನೋಟ್ಪಾಗಳೀಯಾಭುವಾ ।
ಭರಣಂಗಳ್ ಸಲೆ ರುದ್ರಶಕ್ತಿ ಮುನಿಪಂಗೊಪ್ಪೇಟ್ಟಿದೇಂ
ಧಾತ್ರಿಯೊಳ್ ॥

ಆತನ ಘನತೆಯನ್ನು ನೋಡಿ—

" ಕ್ಷಮೆ ತನ್ನೊಳ್ ಮೂರ್ತಿಗೊಂಡುಂ ಸಲೆ ಬೆಳೆದು ನಯಂ
ಗೊಂಡು ಬಿಂಕ್ಕಾರ್ವು ಕೆಯ್ಕೊಂ ।
ಡು ಮಹತ್ವಂ ಬಿಣ್ಪುಗೊಂಡುಂ ಪ್ರಭುತೆಯನೊಡಗೊಂಡೀಶತತ್ವಂ
ಮನಂಗೊಂ ॥
ಡಮಲಶ್ರೀ ಕೂರ್ಮೆಗೊಂಡುಜ್ವಲಘನಯಶಮುಂ
ತಾಳ್ದಿ ಕೊಂಡಿಂತು ಲೋಕೋ।
ತ್ತಮನಾದಂ ವಾಮಶಕ್ತಿ ವ್ರತಿಪತಿತನುಜಂ ರುದ್ರಶಕ್ತಿ ವ್ರತೀಂದ್ರಂ॥

ಆತನ ಧನವನ್ನು ಕೇಳಿ—

"ಆ ಮಹಾನುಭಾವನ ತಪಃಪ್ರಭಾವ ಪ್ರಾದುರ್ಭಾವಮೆಂತೆಂದೊಡೆ-

'' ಪರಮಜ್ಞಾನಧನಂ ತಪೋಧನನಭೀಷ್ಟಾರ್ಥಪ್ರದಾನಂ ಧನಂ ।
ಸ್ಥಿರಸತ್ಯಂ ಧನಮೂರ್ಜಿತವ್ರತಧನಂ ಶಾಂತತ್ವದೊಳ್ ತದ್ಧನಂ॥
ಪರಮಾರ್ಗಂ ಧನಮೋಶತತ್ವಧನನುದ್ಯತ್ತೇಜವಾದಂ ಧನಂ ।
ಧರೆ ಮೋಕ್ಷಂ ಧನನೆಂದು ಬಣ್ಣಿಸುವುದಾ [ಶ್ರೀ] ರುದ್ರಶಕ್ತೀಶನಂ ॥

ಅಂಗಜನ ಪ್ರತಾಪದೊದವಂ ನೆಱೆ ಭಂಗಿಸಿ ತನ್ನೊಳಾದ ಸಂ।
ಗಂಗಳ ವಾಂಛೆಯುಂ ತೊಱೆದುಮಿಂದ್ರಿಯುವರ್ಗದ
ಬೇರ ಕಿತ್ತು ಮೋ॥
ಹಂಗಳ ಪಾಶಮುಂ ಪರಿದು ಚಿತ್ತದೊಳೀಶನನೊಲ್ದು ತಾಳ್ದಿದರ್।
ಜಂಗಮರುದ್ರನುರ್ವರೆಯೊಳೆಂದೆನೆ ಬೊಂತೆಯ ರುದ್ರಶಕ್ತಿಗಳ್॥

ಮೇಲಿನ ಪದ್ಯಗಳಲ್ಲಿ ರುದ್ರಶಕ್ತಿಯ ವರ್ಣನೆಯು ಕವಿಯ ಚಾತುರ್ಯದ ಮಾತುಗಳೆಂದು ಇಟ್ಟುಕೊಂಡರೂ, ಅವುಗಳಲ್ಲಿಯ ಮೂಲ ತಾತ್ವಿಕ ಕಲ್ಪನೆಯ ಮಾತುಗಳಾದ "ಗುರುಧರ್ಮಾಚರಣಂ," "ಪ್ರಭುತೆಯನೊಡಗೊಂಡು, ಲೋಕೋತ್ತಮನಾದಂ" ಎಂಬ ವಚನಗಳನ್ನು ವಾಯುವೀಯ ಸಂಹಿತೆಯಲ್ಲಿ ಆಚಾರ್ಯಪದವಿಯ ದೀಕ್ಷೆಯನ್ನು ಕೊಡುವಾಗ ಹೇಳಿದ ಮಾತುಗಳೊಡನೆ ಹೋಲಿಸಿದಾಗ ಎರಡರಲ್ಲಿಯೂ ಒಂದೇ ತತ್ವ ಅಡಕವಾದದ್ದು ಕಂಡುಬರುವುದು. ಲೋಕವ್ಯವಹಾರದಲ್ಲಿ ರಾಜ್ಯಾಧಿಕಾರವು-ರಾಜನು-ಲೋಕಪೂಜ್ಯತೆ ಹೊಂದಿರುವಂತೆ, ಧಾರ್ಮಿಕ ಕ್ಷೇತ್ರದಲ್ಲಿ ಅರಮನೆಯಂತಿರುವ ಶಿವಾಯತನಕ್ಕೆ ಸಂಬಂಧಪಟ್ಟವನಾದ ಆಚಾರ್ಯನು ತಪೋನಿಷ್ಠನಾಗಿದ್ದು ರಾಜನಂತೆ ಪೂಜ್ಯನು. ಶಿವದೀಕ್ಷೆ ಮುಂತಾದವುಗಳಲ್ಲಿ ಅವನದೇ ಅಧಿಕಾರವು. ಅಂತೆಯೇ ಕನ್ನಡ ಶಾಸನಗಳಲ್ಲಿ ಲಾಕುಳಶೈವಗುರುಗಳಿಗೆ, ರಾಜಗುರು, ಮಂಡಳಾಚಾರ್ಯ, ಕಂಪಣಾಚಾರ್ಯ, ನೂರಿಪ್ಪತ್ತು ಸ್ಥಾನಾಚಾರ್ಯರು ಮುಂತಾದ ಪ್ರಾದೇಶಿಕ ಅಧಿಕಾರವನ್ನು ಸೂಚಿಸುವ ಶಬ್ದಗಳು ಪ್ರಯೋಗವಾಗಿವೆ. ಹಿಂದೆ ಹೇಳಿದ ಕುಂಜೇಶ್ವರಕ್ಕೆ, ಎಲ್ಲ ಪ್ರಾದೇಶಿಕ ಧಾರ್ಮಿಕ ಅಧಿಕಾರವುಳ್ಳ ಅಸಂಖ್ಯಾತ ಮಹಾಗಣಂಗಳೂ ನೆರೆದು ತಂತಮ್ಮ ಮಠದೆಱೆ ತೆಱೆಯನ್ನು ಬಿಟ್ಟುಕೊಟ್ಟಿರುವರು. ರಾಜರು, ಮಂಡಳಿಕರು, ಸಾಮಂತರು, ಮಹಾಮಂಡಳೇಶ್ವರರು, ದಂಡನಾಯಕರು, ಗೌಡರು, ಮುಂತಾದವರು ರಾಜ್ಯದಲ್ಲಿ ಪ್ರಾದೇಶಿಕ ಅಧಿಕಾರಿಗಳಾಗಿದ್ದಂತೆ, ಈ ಲಾಕುಳಶೈವ ಗುರುಗಳು ಮಠದಲ್ಲಿದ್ದು, ಅಲ್ಲಲ್ಲಿಯ ಶಿವಾಲಯುಗಳನ್ನು ನೋಡಿಕೊಳ್ಳುತ್ತಿದ್ದರು. ಶಿವಾಲಯುಕ್ಕೆ ಬಿಟ್ಟ ಭೂಮಿ ಮುಂತಾದ ಅನೇಕ ತರದ ಆಸ್ತಿಗೆ ಇವರು ಅಧಿಕಾರಿಗಳು. ಈಗಿನ ಕಾಲದ ಶಬ್ದದಲ್ಲಿ ಹೇಳುವುದಾದರೆ ಇವರಿಗೆ "ಟ್ರಸ್ಟಿ" ಯೆಂದು ಕರೆಯುಬಹುದು. ದೇವಾಲಯುದ

ತಳವೃತ್ತಿಗೆ ಇವರು ಒಡೆಯರು. ರಾಜ್ಯಾಧಿಕಾರ ನಡೆಯಿಸುವವರಿಗೂ, ಈ ಸ್ಥಾನಾಚಾರ್ಯರಿಗೂ ಪರಸ್ಪರ ಸಂಬಂಧ ಯಾವಾಗಲೂ ಇರುತ್ತಿದ್ದಿತು. ಇರಬೇಕಾದದ್ದು ಅನಿವಾರ್ಯ. ಆಗಿನ ಕಾಲದಲ್ಲಿ ಇಂತಹ ಧಾರ್ಮಿಕ ಕೃತಿಗಳನ್ನು ಸಂರಕ್ಷಿಸುವ ಭಾರವು ರಾಜರದು. ಅಂತೆಯೇ ಶಾಸನಗಳ ಅಂತದಲ್ಲಿ,

"ಸಾಮನ್ಯೋऽಯಂ ಧರ್ಮಸೇತುರ್ನೃಪಾಣಾಂ ।
ಕಾಲೇ ಕಾಲೇ ಪಾಲನೀಯೋ ಭವದ್ಭಿಃ ।
ಸರ್ವಾನೇತಾನ್ಭಾವಿನಃ ಪಾರ್ತ್ಥಿವೇಂದ್ರಾ
ನ್ಭೂಯೋ ಭೂಯೋ ಯಾಚತೇ ರಾಮಚಂದ್ರಃ ॥
ಬಹುಭಿರ್ವಸುಧಾ ದತ್ತಾ ರಾಜಭಿಃ ಸಗರಾದಿಭಿಃ ।
ಯಸ್ಯ ಯಸ್ಯ ಯದಾ ಭೂಮಿಸ್ತಸ್ಯ ತಸ್ಯ ತದಾ ಫಳಂ ॥
ಸ್ವದತ್ತಾಂ ಪರದತ್ತಾಂ ವಾ ಯೋ ಹರೇತಿ ವಸುಂಧರಾಂ ।
ಷಷ್ಟಿರ್ವರ್ಷ ಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ॥"

ಎಂಬ ಪ್ರಾರ್ಥನೆ ಬರುವುದು.

ಈ ಫಲಶ್ರುತಿಯಲ್ಲಿ ಎರಡು ಭಾಗಗಳಿವೆ. ರಾಜರನ್ನುದ್ದೇಶಿಸಿ ಪಾಲಿಸಬೇಕೆಂಬ ಪ್ರಾರ್ಥನೆಯೊಂದು, ಶಿವಾಯತನಕ್ಕೆ ಬಿಟ್ಟ ದತ್ತಿಯನ್ನು ಅಪಹಾರ ಮಾಡಬಾರದೆಂದು ಇನ್ನೊಂದು. ಇಂತಹ ಧರ್ಮದತ್ತಿಯನ್ನು ಸಂರಕ್ಷಣ ಮಾಡಬೇಕಾದರೆ ಆಯಾ ಸ್ಥಳದ ರಾಜಕೀಯ ಅಧಿಕಾರಿಗಳಿಂದಲೇ ಸಾಧ್ಯ. ಗ್ರಾಮಗಳಲ್ಲಿ ರಾಜ್ಯದ ಪ್ರತಿನಿಧಿಗಳೆಂದರೆ ಗೌಡರು. ಪಟ್ಟಣಗಳಲ್ಲಿ ಸೆಟ್ಟರು, ಅಗ್ರಹಾರಗಳಲ್ಲಿ ಅಶೇಷ ಮಹಾಜನರಾದ ಬ್ರಾಹ್ಮಣರು ಅಧಿಕಾರಿಗಳು. ಅಂತೆಯೇ ಹಿಂದೆ ಹೇಳಲ್ಪಟ್ಟ ಸೂಂಡಿಯ ಶಾಸನದಲ್ಲಿ "ಇಂತೀ ಧರ್ಮಂ ಸೂಂಡಿಯಱುವಗ್ಗಾವುಂಡಗಳುಮೆಣ್ಬರ್ ಸೆಟ್ಟಿಯರುಂ ಕೈಕೊಂಡು ಸ್ವಧರ್ಮದಿಂ ರಕ್ಷಿಸುತ್ತಮಿರ್ಪರ್" ಎಂದೂ ಹೊಂಬಳ ಶಾಸನದಲ್ಲಿ "ಇಂತೀ ಧರ್ಮಂ ನೂಱಿಪ್ಪದಿರುಂ ಸ್ವಧರ್ಮದಿಂ ಕಾಯ್ದು ಪ್ರತಿಪಾಲಿಸಿ ನಡೆಯಿಸುವುದು," ಎಂದೂ ಎನ್ನಲಾಗಿದೆ. ರಾಜಕೀಯ ಅಧಿಕಾರಿಗಳು ಶಿವಾಲಯಗಳಿಗೆ ಬಿಟ್ಟ ಎಲ್ಲ ತರದ ದತ್ತಿಯನ್ನು ಪಾಲಿಸುವರಲ್ಲದೆ, ಬ್ರಹ್ಮಚರ್ಯವುಳ್ಳವರನ್ನೇ ಶಿವಾಲಯದ ಸ್ಥಾನಿಕರನ್ನಾಗಿ ಇರಿಸುವ ನಿಯಮವಿದ್ದಲ್ಲಿ, ಸ್ಥಾನಿಕರು ನಡತೆ ಕೆಟ್ಟು ನಡೆದರೆ, ಅಂತಹ ಸ್ಥಾನಿಕರನ್ನು ತಳ್ಳಿ ಅವರ ಸಂತತಿಯವರಾದ ಬ್ರಹ್ಮಚರ್ಯ

ವುಳ್ಳವರನ್ನೇ ಇರಿಸುವ ಅಧಿಕಾರವು ರಾಜಕೀಯ ಅಧಿಕಾರಿಗಳಿಗೆ ಇದ್ದುದು ಕಂಡುಬರುತ್ತದೆ. ಧಾರ್ಮಿಕ ಕ್ಷೇತ್ರದಲ್ಲಿ ಸ್ಥಾನಾಚಾರ್ಯರು ಅಧಿಕಾರ ವುಳ್ಳವರಾಗಿರುತ್ತಿದ್ದರು.

" ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತಾಧಿಪತ್ಯ ಪರಮೇಶ್ವರ ಪರಮ ಭಟ್ಟಾರಕ ಜಪನಿಯಮ ತಪೋಪವಾಸ ನಿತ್ಯಶೌಚಾಚಾರಾನ್ವಿತ ತಪೋವನಾನುರಾಗ ಶ್ರೀಮತು ಪುಱಿವಾಳಗ್ರಾಮ ಮಾ(ನ್ಧಾತ) ಶಿವಸತ್ರಾನುರಂಜಿತ ಭಗವತ್ಪಾದೈಕಾಭರಣ ಶ್ರೀಮತು ವರುಣಶಿವ ಭಟಾರರ್ ನೊಱಿವ್ಯೇಶ್ವರದ ಸ್ಥಾನಮನಾಳುತ್ತಮಿರೆ.... " ನೊಱಿವ್ಯೇಶ್ವರದ ಸ್ಥಾನವನ್ನು ಆಳುವ ಅಧಿಕಾರವು ವರುಣಶಿವ ಭಟಾರರದು.

## ಭಕ್ತರು

" ಮಂಡಳಿಕ ಚೂಡಾಮಣಿ ವೆಂಗಿ ಮಂಡಳೇಶ್ವರನುದಾರ **ಮಹೇಶ್ವರಯ್ಯನ** ದಂಡ, ಶ್ರೀ ವಿಷ್ಣುವರ್ಧನ ಮಹಾರಾಜ ವಿಜಯಾದಿತ್ಯ ದೇವರ್ ನೊಳಂಬವಾಡಿ ೩೬೦೦೦ ಸುಖಸಂಕಥಾ ........ ಗೆಯ್ಯುತ್ತಮಿರೆ, ಅವರ ಬೆಸದಿಂ ಶ್ರೀಮನ್ಮಹಾಸಂಧಿವಿಗ್ರಹಿ, ದಂಡನಾಯಕ ಪೆರ್ಗ್ಗಡೆ **ದೇವಪಯ್ಯ ಪ್ರಮುಖ ಕರಣಂಗಳು** ಸಾಸಿರಮನ್ನೆಯ ನಾಗಾತಿಯರಸರುಂ, ಪನ್ನೆರಡು ಮನ್ನೆಯ ಮಾಕರಸನುಮಲ್ಲಿಯ ಪ್ರಭುಗಳ್ ಮಾಚಗಾವುಂಡನುಂ ಉದಯಾದಿತ್ಯ ನಾಯಕನುಮಿರ್ದು, ಬೆಲ್ತುಱುವದ ಶ್ರೀ ಮೂಲ ದೇವಸ್ಥಾನ ಮಹಾದೇವರಂಗಭೋಗ....ವಾಗಿ ಸಾಂತರಾಶಿ ದೇವರ್ಗೆ ಧಾರಾಪೂರ್ವಕವಾಗಿ " ಬಿಟ್ಟಿರುವರು (ದಾವಣಗೆರೆ ನಂ. ೧೧;–೧೦೬೬) ಹಿಡಂಬೇಶ್ವರ ಪಾದಾರಾಧಕ ಪಾಂಡ್ಯರಾಜ್ಯಾಭರಣನುಂ **ಪರಮ ಮಾಹೇಶ್ವರ** ಮಹೇಶ್ವರ ದೇವರ ಪಾದಾರಾಧಕ ಶ್ರೀ ಮಹಾಸಾಮಂತ ಕಾಮೆಯ ನಾಯಕ ಬೆಮ್ಮಚ್ಚೂರು ನೆಲೆವೀಡಿನೊಳು.........ತಮ್ಮ ಅಜ್ಜನು ಉದಯಾದಿತ್ಯನಾಯಕನು, ಹೆಗ್ಗಡೆ ಮಾಚಯ್ಯನ ಮಗಳು ಪಂಚಗಾಲವನೆಯು ಮೆನಿಸಿದ ಗಂಗವ್ವೆ ಶಿವಧರ್ಮೋತ್ತರದಲ್ಲಿ ಲಿಂಗಪ್ರತಿಷ್ಠೆಯ ಮಹಾತ್ಮೆಯಂ ಕೇಳ್ದು, ಲಿಂಗಪ್ರತಿಷ್ಠೆಯಂ ಮಾಡಿ ಕಾಮೆನಾಯಕನಂ ಬೇಡಿಕೊಂಡು ಯಮನಿಯಮ ಧ್ಯಾನಧಾರಣ ಮೌನಾನುಷ್ಠಾನ ಜಪಸಮಾಧಿ ಶೀಲ ಸಂಪನ್ನರುಂ ಮನುಮಾರ್ಗಚರಿತರುಮಪ್ಪ ಸೋವರಾಶಿ ಪಂಡಿತರ ಕಾಲಂ

ಕರ್ಚಿ ಧಾರಾಪೂರ್ವಕ"ವಾಗಿ ಕೊಟ್ಟಿದ್ದಾಳೆ. (ಚಿತ್ರದುರ್ಗ ನಂ. ೪೪;-೧೧೮೭) ಗಂಗಕುಳ ಕಾಳೆಯನಾಯಕನಿಗೆ ' ಪರಮ ಮಾಹೇಶ್ವರ ' ಎನ್ನಲಾಗಿದೆ (ಬೇಲೂರ ನಂ. ೧೪೧;-೧೧೦೨). ಮುದ್ದರಸನಿಗೆ ಈಶ್ವರ ಭಕ್ತ 'ಪರಮಮಹೇಶ್ವರ'ನೆನೆ ನೆಗರ್ದಂ' ಎಂದಿದೆ (ಚೆನ್ನರಾಯ ಪಟ್ಟಣ ನಂ. ೧೬೯;-೧೧೧೦). ಇರುಗ್ಗೆಯ ನಾಯಕನಿಗೆ ' ಹಿಡಂಬೇಶ್ವರ ಪಾದಾರಾಧಕ ಪರಮ ಮಾಹೇಶ್ವರ ' (ಚಿತ್ರದುರ್ಗ ನಂ. ೧೪; ೧೧೨೪ A. D.) ಬುಳ್ಳಪನಾಯಕನಿಗೆ 'ಮೃಡಭಕ್ತ ಮಹೇಶ್ವರ ಗಣಾವತಾರ' (ಚೆನ್ನರಾಯ ಪಟ್ಟಣ ನಂ. ೨೧೦;-೧೧೬೬) ಎಂದು ವರ್ಣಿಸಲಾಗಿದೆ. ಇದಲ್ಲದೆ ಮಾಚಸೆಟ್ಟಿಗೆ ಚತುಸ್ಸಮಯ ಸಮುದ್ಧರಣ ' ಶಿವಚರಣ ಕಮಳಭೃಂಗ, ' (ಚಳ್ಳಕೆರೆ ನಂ. ೨೧; ೧೦೮೭), ಕನ್ನಡ ನಾಲ್ಕುಸಾವಿರ ಮುಮ್ಮುರಿದಂಡಗಳಿಗೆ ಮುಖ್ಯರಪ್ಪ ಶೈವರ ದೇವಿಸೆಟ್ಟಿಗೆ ' ಶಿವಧರ್ಮದೀಪಕ ' ( ದಾವಣಗೆರೆ ನಂ ೪; ೧೧೨೧ A. D), ಹೆಗ್ಗಡೆ ಸೋಮಂಸನಿಗೆ ' ಶಿವಾಚಾರಕ್ಕೆ ಸದುಭಕುತನು ಶಿವಧರ್ಮನಿರ್ಮಳರುಂ ಶಿವಪಾದ ಭೃಂಗರುಂ, ' (ಚೆನ್ನರಾಯ ಪಟ್ಟಣ ನಂ. ೧೮೬;-೧೧೪೪ A. D), ಪದ್ಮನಾಭ ದಂಡಾಧೀಶನಿಗೆ 'ಹರಪಾದ ಕಮಳ ಭೃಂಗ ' (ಚೆನ್ನರಾಯಪಟ್ಟಣ ನಂ. ೨೪೬;-೧೧೫೭ A. D.) ಕುಮ್ಮಟದ ಚಟ್ಟಿಸೆಟ್ಟಿಗೆ ' ಶಿವಪಾದಪಯೋರುಹ ಭೃಂಗ' (ಅರಸಿಕೆರೆ ನಂ. ೨೨; ೧೧೮೮ A. D.), ಗಂಜಿಗೆಱೆಯ ಸಮಸ್ತ ಪ್ರಜೆಗಾವುಂಡಗಳಿಗೆ ' ಶಿವಧರ್ಮ ನಿರ್ಮಳರು ' ( ಅರಸಿಕೆರೆ ನಂ. ೨೮೪, ೧೧೮೪ ಮತ್ತು ನಂ. ೪೦, ೧೨೦೯), ಗೌಡರಿಗೆ ಸಮಸ್ತ ಭಕ್ತಜನಂಗಳು (ಅರಸಿಕೆರೆ ನಂ ೯೨; ೧೨೨೪ A. D), ' ಹರಚರಣ ಕಮಳ ಭೃಂಗ ' ಮಹಾಪ್ರಭು ಗಾವುಂಡರು (ಅರಸಿಕೆರೆ ನಂ. ೧೨೪; ೧೨೪೮ A. D), ಜವನೆಯ ಹೆಗ್ಗಡೆಗೆ 'ಶಿವಪಾದ ಶೇಖರ' (ಚೆನ್ನರಾಯಪಟ್ಟಣ ನಂ. ೨೫೭, ಕಾಲ ಬಲ್ಲಾಳನ ಪಟ್ಟಮಹೋತ್ಸವ) ಎಂದು ವರ್ಣನೆಗಳಿವೆ.

ಈ ಮೇಲಿನ ಅವತರಣಿಕೆಗಳಿಂದ, ಅರಸರು, ಸಾಮಂತರು, ಮಹಾಮಂಡಳೇಶ್ವರರು, ದಂಡನಾಯಕರು, ಸೆಟ್ಟರು, ಪ್ರಭುಗಾವುಂಡರು, ಪ್ರಜೆಗಾವುಂಡಗಳು ಇವರೇ ಮುಂತಾದವರು, ಮಾಹೇಶ್ವರ ಸಂಪ್ರದಾಯದ ಶಿವಭಕ್ತರಾಗಿದ್ದು, ಶಿವಾಚಾರಕ್ಕೆ ಸದುಭಕ್ತರಾಗಿದ್ದರೆಂದು ತಿಳಿದು ಬರುವುದು. ಈ ಎಲ್ಲ ಭಕ್ತರು ಶಿವಾಲಯಗಳನ್ನು ಕಟ್ಟಿಸಿ, ಸ್ನಾನಾ

ಚಾರ್ಯರಿಗೆ ಕಾಲಂ ಕರ್ಚಿ ದತ್ತಿಯನ್ನು ಬಿಟ್ಟು ತಮ್ಮ ತಮ್ಮ ಭಕ್ತಿಯನ್ನು ವ್ಯಕ್ತಗೊಳಿಸುವ ಸ್ಥಾವರಲಿಂಗ ಭಕ್ತರಾಗಿದ್ದರು.

## ಸ್ಥಾನಪತಿಗಳು ಸ್ಥಾನಿಕರು

ಸ್ಥಾನಿಕ ಬೊಪ್ಪಜೀಯ (ಸೊರಬ ನಂ. ೪೯), ಸ್ಥಾನಪತಿ ದಿವ್ಯ ತಪೋಧನ ಜ್ಞಾನಶಕ್ತಿ (ದಾವಣಗೆರೆ ನಂ. ೧೨೭), ಉಂಕೇಶ್ವರ ದೇವರ ಸ್ಥಾನಪತಿ ಸರ್ವೇಶ್ವರ ಪಂಡಿತ (ಮೊಳಕಾಲ್ಮೂರು ನಂ. ೪), ಮೂಲ ಸ್ಥಾನ ಕೋಡಿಯ ಸ್ಥಾನಿಕ ಚಂದ್ರಭೂಷಣ ಪಂಡಿತ (ಬೇಲೂರನಂ.೧೩೯), ಕುಬೇರೇಶ್ವರ ಸ್ಥಾನಪತಿಗಳಪ್ಪ ಶ್ರೀಮದ್ದೇವರಾಶಿ ಪಂಡಿತಂಗೆ (ಬೇಲೂರು ನಂ. ೨೦೦), ನೂಱಿಪ್ಪತ್ತು ಸ್ಥಾನಿಕರು (ಅರಸಿಕೆರೆ ನಂ. ೧೧), ಕಲಿ ದೇವರ ಸ್ಥಾನಪತಿ ಸೇನಬೋವ ಮಾದಯ್ಯ (ಅರಸಿಕೆರೆ ನಂ. ೪೯), ಸಿಂಗೇಶ್ವರ ದೇವರ ಸ್ಥಾನಪತಿಯ ಮಗ ರಾಮದೇವರಿಗೆ ಕ್ರಿಯಾಶಕ್ತಿಯು ಕೊಟ್ಟದ್ದು (ಅರಸಿಕೆರೆ ನಂ. ೪೧; ೧೧೨೯); ಸ್ಥಾನಪತಿ ಮೂಲಸ್ಥಾನ ದೇವರ ಕರ್ತಾರಜೀಯ ಪುತ್ರ ಈಶಾನ್ಯ ಪಂಡಿತ (ಅರಸಿಕೆರೆ ನಂ. ೩೪), ಧರ್ಮೇಶ್ವರ ಸ್ಥಾನಿಕ ಶಿವಶಕ್ತಿ (ಅರಸಿಕೆರೆ ನಂ. ೧೧೭), ಮೂಲಸ್ಥಾನ ದೇವರ ಸ್ಥಾನಪತಿ ದೇವೇಂದ್ರ ಪಂಡಿತ (ಅರಸಿಕೆರೆ ನಂ. ೧೧೯), ಅಮೃತೇಶ್ವರ ದೇವಾಲಯದ ಸ್ಥಾನಿಕ ಹೊನ್ನಜೀಯನ ಮಗ ಚೌಡಜೀಯ (ಚೆನ್ನರಾಯಪಟ್ಟಣ ನಂ. ೨೫೪) ಶ್ರೀರಾಮನಾಥ ದೇವರ ಸ್ಥಾನಪತಿಗಳು ಕಾಳಜೀಯ, ಅಪ್ಪಜೀಯ (ಅರಕಲಗೂಡು ನಂ. ೫೩); **ಪಂಚಮಠ ಸ್ಥಾನಿಕರಪ್ಪ ಚೋಳಯ್ಯ, ಲಿಂಗಯ್ಯ, ಅಂಕಜೀಯ, ಶಂಭುಜೀಯ, ಶಿವಶಂಭು** (ಅರಕಲಗೂಡು ನಂ. ೭೯; ೧೧೯೦ A. D.), ಸ್ಥಾನಪತಿ ಉತ್ತಮಜೀಯ (ಶಿರಾ ನಂ. ೩೪), ಶ್ರೀ ಬಾಚೇಶ್ವರ ಸ್ಥಾನಿಕ ಜಕಜೀಯ (ಚಿತ್ರದುರ್ಗ ನಂ. ೩೨; ೧೨೮೬ A. D.), ಧರ್ಮೇಶ್ವರ ದೇವರ ಪೂಜೆ ಪುನಸ್ಕಾರಕ್ಕೆ ಸ್ಥಾನಪತಿ ಶಿವಶಕ್ತಿ ಪಂಡಿತರ್ಗೆ (ಹಾಸನ ನಂ. ೧೧೬; ೧೧೨೨ A. D.), ಸ್ಥಾನಪತಿ ಪೂಜಾರಿ, ಪರಿಚಾರಕಾಹಾರಕ್ಕಂ (ಅರಸಿಕೆರೆ ನಂ. ೨೨; ೧೧೮೮ A. D.), ಸಿಂಗೇಶ್ವರ ದೇವರ ಸ್ಥಾನಪತಿಯ ಮಗ ರಾಮದೇವರ ಕಾಲಂ ಕರ್ಚಿ (ಅರಸಿಕೆರೆ ನಂ. ೪೧, ೧೧೨೯ A. D.), ಸದಾಶಿವ ದೇವರ ಪುತ್ರ ಶಿವಶಕ್ತಿದೇವರು ನಿಲೇಶ್ವರ ದೇವರ ಸ್ಥಾನಿಕ ಬಮ್ಮಜೀಯ (ಅರಸಿಕೆರೆ ನಂ. ೪೭, ೧೧೫೩ A. D.), ಜಗತೇಶ್ವರ ಸ್ಥಾನಪತಿ ಶಿವಶಕ್ತಿ

**ಪಂಡಿತರ ಕಾಲಂ ಕರ್ಚಿ** (ಅರಸಿಕೆರೆ ನಂ. ೫೨; ೧೧೯೧), ಅಮೃತೇಶ್ವರ ಸ್ಥಾನಿಕ ಹೊನ್ನಜೀಯು (ಚೆನ್ನರಾಯಪಟ್ಟಣ ನಂ. ೨೫೪; ೧೧೮೪), **ಪಂಚಮಠ ಸ್ಥಾನಪತಿಗಳು** (ಅ. ಗೂಡು ನಂ ೭೯, ೧೧೯೦ A. D. ಅದೆ ನಂ. ೮೧, ೧೧೮೮ A. D.), ಸ್ಥಾನಿಕ ಸೋಮಯ್ಯದೇವ (ಗುಬ್ಬಿ ನಂ. ೨೯; ೧೪೭೦), ಸ್ಥಾನಿಕ ಹಿರಿ ಚಕ್ಕಜೀಯು, ಹಿರಿಯ ಬೊಬ್ಬಜೀಯು, ಚಿಕ್ಕಜೀಯು, ನಗಜೀಯು, ಮೂವರಿಗೆ ಒಂದು ಭಾಗ, ಇಬ್ಬರಿಗೆ ಒಂದು ಭಾಗ, ಈ ಮರ್ಯಾದೆಯಲು ಸುಖದಿಂ ಬಾಳುವುದು. (ಮದ್ದಗಿರಿ ನಂ ೫೩, ೧೨೯೨)

**ಆಚಾರ್ಯ**

ರಾಮನಾಥ ದೇವ**ರಾಚಾರ್ಯ** ಮಧುಕೇಶ್ವರ ಪಂಡಿತ (ಹೊಳಲ್ಕೆರೆ ನಂ. ೧೦೪), ಅರಸಿಕೆರೆಯ ನೈಷ್ಠಿ**ಕಾಚಾರ್ಯ ಪರಮೇಶ್ವರ ಪಂಡಿತರ ಶಿಷ್ಯ** ಕ್ರಿಯಾಶಕ್ತಿ ಪಂಡಿತರು (ಅ. ಕೆ. ನಂ. ೪೧), ಕಳಕಟ್ಟೆಯ ಸ್ಥಾ**ನಾಚಾರ್ಯ** ದೇವರಾಶಿ ಗುರುಗಳ ಮಕ್ಕಳು ಚಿಟ್ಟಿಗುರುಗಳು, ಚಂದ್ರಜೀಯು, ನಾಗಗುರು, ಲಖಜೀಯು (ಅ. ಕೆ. ನಂ. ೪೯), ನನ್ನೇಶ್ವರ ದೇವರ ಆಚಾರ್ಯರಪ್ಪ ಅಮಿತಶಿವ (ಅ ಕೆ. ೮೯), ಬಚವಳ್ಳಿಯ ಕಲಿದೇವರಾಚಾರ್ಯ ಕಲ್ಯಾಣಶಕ್ತಿಯ ಮಗ ರೇಚಶಕ್ತಿ, ರೇಚಶಕ್ತಿಯ ಮಗ, ಶಾಂತ ಗುರುಗಳು (ಚೆನ್ನರಾಯಪಟ್ಟಣ ನಂ ೧೬೧), ಆಚಾರ್ಯ ಮಸಣಜೀಯ (ಹೊಳಲ್ಕೆರೆ ನಂ. ೬೮; ೧೧೨೮ A. D.), ಪಂಚಿಅೇಯ ಪಟ್ಟಣದ ಮಹಾ ಘುಟಿಕಾಸ್ಥಾನ, ನೊಳಂಬೇಶ್ವರದ ದೇವರ **ಆಚಾರ್ಯ** ರಾಜಗುರು ಅನಂತ ದೇವರಿಗೆ (ಚೆನ್ನರಾಯಪಟ್ಟಣ ನಂ. ೨೩; ೧೧೬೮).

**ಒಡೆಯರು**

ನಂಜುಂಡೇಶ್ವರದ **ಒಡೆಯರು,** ಭುವನಶಕ್ತಿಯ ಜೀಯರ ಶಿಷ್ಯ ಭಾಳಶಕ್ತಿಜೀಯು (ಹೆಗ್ಗಡೆ ದೇವನ ಕೋಟೆ ನಂ. ೫೫; ೧೦೮೭); **ಬಿಲ್ಲೇಶ್ವರ ದೇವರ ಸ್ಥಾನಕ್ಕೆ ಶಿವರಾಶಿ ಭಟನೊಡೆಯ** (ದಾ. ಗೆರೆ ನಂ. ೭೧, ೧೦೩೫ A. D.), ಬಾಚಗಾವುಂಡನು ಶಿವಾಲಯವನೆತ್ತಿದಂ ಈ ಸ್ಥಾನದೊಡೆಯ ಸೋಮರಾಶಿ (ತಿ. ಕೆ ನಂ ೧೭೯), ಬೆಮ್ಮತ್ತೂರ ದಾಸಿದೇವ **ಒಡೆಯರಿಗೆ** ಬಿಟ್ಟ ಪುರ (ಚಿತ್ರದುರ್ಗ ನಂ. ೭೬, ೧೩೪೫ A. D.), **ಕ್ರಿಯಾಶಕ್ತಿ ದೇವರ ಮಗ ದೇವಣ್ಣ ಒಡೆಯರ ಶಿಶು ಮಕ್ಕಳು** ಹುವಿಸೆಟ್ಟಿಯ ಮಕ್ಕಳು ಬಸ್ಸೆಟ್ಟಿಯರು (ಮೊಳಕಾಲ್ಮೂರು ನಂ. ೧೫, ೧೬೦೦ A. D.), **ರಾಮೊಡೆಯನ ಮಗ** ಜಂಗಮ ಚೆನ್ನಯ್ಯಂಗೆ ತಮ್ಮ ಹಳ್ಳಿಯ ಮರಕ್ಕಾಗಿ

(ಚಳ್ಳಕೆರೆ ನಂ. ೨, ೧೬೮೫ A. D.), ಸಕನಿಪುರದ ಪಂಡಿತಾರಾಧ್ಯರು ಕತ್ತಿಯ ಮಲ್ಲೊಡೆಯಂಗೆ (ಎಡತೊರೆ ನಂ. ೭; ೧೪೪೩ A. D.).

## ಆಳುವವರು

ನಂದಿಯ ಬಳಿಯ ಅವರಾಳ್ದೊ ದೇಗುಲಂ ಶಿವಶಕ್ತಿ ಭಟಾರ್ ಪಡೆದೊರ್ (ಯಳಂದೂರ ನಂ. ೨೫), ಆ ಮಠ ತಾವೇ ಆಳಿದೊಡೆ ತಾವೇ ಸಾರ್ಸೆಸುವುದು, ನಾಲ್ಕುದಿವಸಕ್ಕೊಮ್ಮೆ. ಮುಲಜೀಯ, ಚಿಕ್ಕಜೀಯ, ಬೊಮ್ಮಜೀಯಂಗಳಿಗೆ ಕಾಲ ತೊಳೆದು (ಚೆನ್ನರಾಯ ಪಟ್ಟಣ ನಂ. ೨೫೭) ನೊಳಂಬೇಶ್ವರ ಸ್ಥಾನವನು ವರುಣಶಿವ ಆಳುತ್ತಿರೆ (S. I Inscriptions Mad. No. 24, 936 A. D.).

## ಪೂಜಿಸುವವರು

ಜಟ್ಟಿಗ ಹೇಮೇಶ್ವರ ಪೂಜಿಸುವ ಬಾಚಜೀಯ (ನಾಗಮಂಗಲ ನಂ. ೧೨), ಕುಸುಮೇಶ್ವರ ದೇವರಿಗೆ ರಾಜಜೀಯನ ಮಕ್ಕಳು ಪಿರಿಯ ಚಾಕಣ್ಣ, ಹರಿಯಜೀಯ.... ಪೂಜಾರಿಗಳು ಸಲುವಂತಾಗಿ (ಚೆನ್ನರಾಯ ಪಟ್ಟಣ ನಂ. ೨೪೮), **ಬೂದಯ್ಯನ ಮಗ ದೇವಣ್ಣ ಪೂಜಾರಿ** (ಅರಸಿಕೆರೆ ನಂ. ೯, ೧೨೮೭ A D.), ಸೋಮಶೇಖರ ನಾಯಕರು ವೀರೇಶ್ವರ ದೇವರ ಪೂಜಾರಿ ಭದ್ರನ ಮಗ ಬಸವ, ಮಾದನ ಮಗ ಭದ್ರಗೆ ( ಸಾಗರ-೧೬೭೨).

## ಸ್ಥಾನದ ತಪೋಧನರು

ಹಿಡಂಬನಾಥ ದೇವರ ತ್ರಿಕಾಲ ಅಂಗರಂಗ ವೈಭವ ದೇವತಾರ್ಚನೆ ಕಾಲದಲ್ಲಿ ಆ ಸ್ಥಾನದ ತಪೋಧನರಾದ ಇಡುಬಜೀಯ, ಸಿರಿಗಿರಿಜೀಯರು ( ಚಿತ್ರದುರ್ಗ ನಂ. ೧೪, ೧೪೧೧ A. D.)

ಸ್ಥಾನಪತಿಗಳು, ಸ್ಥಾನಿಕರು, ತಪೋಧನರು, ಸ್ಥಾನಾಚಾರ್ಯರು, ದೇಗುಲ ಆಳುವವರು, ಒಡೆಯರು, ಪೂಜಿಸುವವರು ಈ ಎಲ್ಲ ಶಬ್ದಗಳು ಪರ್ಯಾಯ ಶಬ್ದಗಳು. ಈ ಎಲ್ಲ ಶಬ್ದಗಳು ಶಿವಾಲಯಕ್ಕೆ ಸಂಬಂಧಿಸಿದ ಒಂದೇ ವಿಶಿಷ್ಟ ವರ್ಗಕ್ಕೆ ಬಳಸಲಾಗಿವೆ. ಈ ವರ್ಗದವರು ದೇವಾಲಯಕ್ಕೆ ಕೊಟ್ಟ ದಾನಧರ್ಮವನ್ನು ಪರಿಗ್ರಹಿಸಿದವರಾಗಿರುವರು. ಇವರ ಕಾಲಂ ಕರ್ಚಿ ಧಾರಾಪೂರ್ವಕವಾಗಿ ಕೊಡಲ್ಪಡುತ್ತಿದ್ದುದರಿಂದ ಇವರು ಪೂಜ್ಯರು, ವಂದನೀಯರು, ಗುರುಗಳಾಗಿದ್ದರೆಂಬದು ನಿಸ್ಸಂದೇಹವಾಗಿದೆ.

ದೇವಾಲಯಗಳನ್ನು ಕಟ್ಟಿಸಿ ಈ ಸ್ಥಾನಪತಿಗಳಿಗೆ ಒಪ್ಪಿಸಲಾಗುತ್ತಿತ್ತು. ದಾನ ಕೊಡುವವರು ಮತ್ತು ಪರಿಗ್ರಹಿಸಿದವರು ಈ ರೀತಿ ಎರಡು ಬಗೆಯ ಮಾಹೇಶ್ವರರು. ಮಾಹೇಶ್ವರ ಶಬ್ದವು ಸಾಮಾನ್ಯವಾಗಿ ಎಲ್ಲ ಶಿವಧರ್ಮದವರಿಗೆ ಬಳಕೆಯಲ್ಲಿದೆ ದಾನಕೊಡುವ ಭಕ್ತರ ವರ್ಣನೆಯಲ್ಲಿ ಮಾಹೇಶ್ವರ, ಪರಮಮಾಹೇಶ್ವರ, ಪರಮಮಾಹೇಶ್ವರಗಣಾವತಾರ, ಶಿವಧರ್ಮದೀಪಕ, ಶಿವಾಚಾರಕ್ಕೆ ಸದುಭಕ್ತ, ಶಿವಧರ್ಮನಿರ್ಮ್ಮಳ, ಶಿವಪಾದಭೃಂಗ, ಹರಪಾದಕಮಳಭೃಂಗ,ಹರಚರಣಕಮಳಭೃಂಗ ಮುಂತಾದ ವಿಶೇಷಣಗಳು ಬಂದಿವೆ. ಈ ಎಲ್ಲ ಸಾಂಪ್ರದಾಯಿಕ ವಿಶೇಷಣಗಳು ಎಲ್ಲ ಮಾಹೇಶ್ವರರಿಗೆ ಸಾಮಾನ್ಯವಾಗಿದ್ದಾಗ್ಯೂ ಸ್ಥಾನಪತಿಗಳಿಗೆ ಬಳಸಿರುವ ವಿಶೇಷಣಗಳು ವಿಶಿಷ್ಟ ಲಕ್ಷಣವುಳ್ಳವುಗಳಾಗಿವೆ. “ ಎಕ್ಕೋಟಿ ಸಮಯ ಚಕ್ರವರ್ತಿ ಸಪ್ತಾಹತ್ತ್ರಿ ಸ್ಥಾನಾಚಾರ್ಯರು, ಕಾಳಾಮುಖ ವ್ರತಾನ್ವಯರು, ಶಿವಾಗಮದೊಳ್ ನಿರತರ್, ಲಾಕುಳಾಗಮ ಸಮುದ್ಧರಣರ್, ಶಿವಧರ್ಮ ಪ್ರತಿಪಾಲಕರು, ಅಸಂಖ್ಯಾತ ಮಹಾಗಣಂಗಳು ಜಗದ್ಗುರು, ರಾಜಗುರು, ಮಂಡಳಾಚಾರ್ಯ, ಕಂಪಣಾಚಾರ್ಯರು, ತಪೋಧನರು, ಮಹಾರೂಪುಗಳು, ಮುನೀಂದ್ರರು, ವ್ರತಿ, ಮಹಾವ್ರತಿಗಳು, ಲಿಂಗಿಗಳು, ಒಡೆಯರು, ಗೊರವರು, ಜೀಯರು, ದೇವರು ಮುಂತಾಗಿ ಶಾಸನಗಳಲ್ಲಿ ಬಂದಿವೆ. ಇಂತಹವರೆ ದೇವಾಲಯಗಳಿಗೆ ಕೊಟ್ಟ ದಾನವನ್ನು ಪರಿಗ್ರಹಿಸಿದವರಾಗಿದ್ದಾರೆ. ಈ ಶಿವಧರ್ಮದವರಾದ ಮಾಹೇಶ್ವರರಲ್ಲಿ ಧಾರ್ಮಿಕವಾಗಿ ಎರಡು ಪಂಗಡಗಳು–ಸ್ಥಾನಪತಿಗಳು, ಗುರುವರ್ಗದವರು ಎಂದು ಉಳಿದವರು ಭಕ್ತರು. ಇವರೆಲ್ಲರೂ ಸ್ಥಾವರಲಿಂಗಭಕ್ತರು.

ಈ ಸ್ಥಾನಪತಿಗಳ ಹೆಸರುಗಳ ಮುಂದೆ ಬಂದಿರುವ ಮರ್ಯಾದೆ ಸೂಚಕ ಪ್ರತ್ಯಯಗಳ ವಿಶೇಷಣಗಳಿಗನುಸರಿಸಿ ಕ್ರಮವನ್ನು ಕೊಡಲಾಗಿದೆ. ಆಯಾ ಹೆಸರುಗಳ ಮುಂದೆ ಆಯಾ ವಿಶೇಷಣ ಪ್ರತ್ಯಯಗಳನ್ನು ಹಚ್ಚಿಕೊಂಡು ಓದುವುದು. ಕ್ರಿ ಶ. ೭ನೆಯ ಶತಮಾನದಿಂದ ಕ್ರಿ. ಶ ೧೫ನೆಯ ಶತಮಾನದ ಕೊನೆಯವರೆಗೆ ಈ ಸ್ಥಾನಾಚಾರ್ಯರ ಹೆಸರುಗಳು ಶಾಸನಗಳಲ್ಲಿ ಸಾಮಾನ್ಯವಾಗಿ ದೊರೆಯುತ್ತಿದ್ದರೂ, ಕ್ರಿ. ಶ. ೧೦ನೆಯ ಶತಮಾನದಿಂದ ಕ್ರಿ. ಶ. ೧೪ನೆಯ ಶತಮಾನದವರೆಗೆ ವಿಶೇಷವಾಗಿ ಸಿಕ್ಕುವವು. ಈ ಐನೂರು ವರ್ಷಗಳಲ್ಲಿ ಈ ಶಿವಧರ್ಮವು ವಿಶೇಷ ಪ್ರಾಚುರ್ಯವನ್ನು ಪಡೆದಿದ್ದುದು ಶಾಸನಗಳಿಂದ ಕಂಡುಬರುವುದು.

(೧) ಶಿವಮೊಗ್ಗ ಜಿಲ್ಲೆಯ ಸೊರಬ, ಸಾಗರ, ನಗರ, ತೀರ್ಥಹಳ್ಳಿ ತಾಲೂಕುಗಳು, (೨) ಮೈಸೂರು ಜಿಲ್ಲೆಯ ಎಂಟು ತಾಲೂಕುಗಳು, ಹಾಸನ ಮತ್ತು ತುಮಕೂರು ಜಿಲ್ಲೆ ಇವುಗಳಿಂದ ಎರಡು ತಖ್ತೆಗಳನ್ನು ತಯಾರಿಸಲಾಗಿದೆ. ಈ ಎರಡು ತಖ್ತೆಗಳಿಂದ ಮೇಲಿನ ಮಾತಿನ ಸತ್ಯತೆಯು ನಿದರ್ಶನಕ್ಕೆ ಬರುವುದು. ಒಂದು ದೊಡ್ಡ ತಖ್ತೆಯನ್ನು ಪ್ರತ್ಯೇಕವಾಗಿ ಕೊಡಲಾಗಿದ್ದು, ಸಣ್ಣದನ್ನು ವಿಷಯ ಕ್ರಮದಲ್ಲಿ ಕೊಟ್ಟಿದೆ.

ಈ ಹೆಸರುಗಳಲ್ಲಿ ಶಿವವಾಚಕ ಹೆಸರುಗಳೇ ವಿಶೇಷವಾಗಿದ್ದರೂ, ಅಲ್ಲಲ್ಲಿ ಕೇಶವ, ನಾರಸಿಂಹ, ರಾಮ ಮುಂತಾದ ವಿಷ್ಣುವಾಚಕ ಹೆಸರುಗಳೂ ಇವೆ ಅದರಂತೆ ಬ್ರಹ್ಮವಾಚಕ ಹೆಸರುಗಳೂ ಇವೆ. ಗಣಪತಿ ಮತ್ತು ಸೂರ್ಯನ ಹೆಸರುಗಳೂ ಇವೆ. ಕೇದಾರ ಮುಂತಾದ ತೀರ್ಥಕ್ಷೇತ್ರಗಳ ಹೆಸರುಗಳಲ್ಲದೆ, ಶಕ್ತಿಯ ಮತ್ತು ಸ್ಥಳೀಯ ದೇವರ ಹೆಸರುಗಳಿದ್ದುದು ಕಂಡುಬರುತ್ತದೆ.

ಈ ಮುಂದಿನ ತಖ್ತೆಯಲ್ಲಿ ಕ್ರಮವಾಗಿ ಕ್ರಿ. ಶ. ೬ನೆಯ ಶತಮಾನದಿಂದ ಕ್ರಿ. ಶ. ೧೭ನೆಯ ಶತಮಾನದವರೆಗೆ ಕ್ರಮವಾಗಿ ಐದು ಜಿಲ್ಲೆಗಳಲ್ಲಿ ಹೆಸರುಗಳ ಸಂಖ್ಯೆಗಳನ್ನು ತೋರಿಸಲಾಗಿದೆ. ಕ್ರಿ ಶ ೧೦ನೆಯ ಶತಮಾನದಲ್ಲಿ ೧೪ ಹೆಸರುಗಳಿದ್ದು ಕ್ರಿ. ಶ ೧೧ನೆಯ ಶತಮಾನದಲ್ಲಿ ೪೯೮ ವರೆಗೆ ಹೋಗಿ, ಕ್ರಿ. ಶ. ೧೨ನೆಯ ಶತಮಾನದಲ್ಲಿ ೧೭೨ ಆಗಿ, ಕ್ರಿ ಶ. ೧೪ನೆಯ ಶತಮಾನದಲ್ಲಿ ೮೦ ಕ್ಕೆ ಇಳಿದಿದೆ ಅನಂತರ ಕ್ರಿ ಶ. ೧೫ನೆಯ ಶತಮಾನದಲ್ಲಿ ೧೧ಕ್ಕೆ ಬಂದು, ಆ ಮುಂದೆ ಇಳಿಯುತ್ತ ಜಂಗಮರ ಹೆಸರುಗಳು ಕಾಣಿಸುತ್ತವೆ. ಜಿಲ್ಲೆವಾರಿ ನೋಡಿದರೂ ಚಿತ್ರದುರ್ಗ ಮತ್ತು ಹಾಸನ ಜಿಲ್ಲೆಗಳಲ್ಲಿ ಕ್ರಿ ಶ. ೧೨ ಮತ್ತು ೧೪ನೆಯ ಶತಮಾನಗಳಲ್ಲಿ ಈ ಶಿವಧರ್ಮ ವಿಶೇಷವಾಗಿದ್ದುದು ಕಂಡುಬರುವುದು. ಕ್ರಿ. ಶ. ೧೫ನೆಯ ಶತಮಾನದಿಂದ ಈ ಧರ್ಮದ ಇಳಿಗಾಲವೆಂದು ತಿಳಿದುಬರುವುದು. ಕ್ರಿ. ಶ. ೧೫ನೆಯ ಶತಮಾನದಿಂದ ವೀರಶೈವ ಜಂಗಮರ ಹೆಸರುಗಳು ಕಾಣಿಸಿಕೊಳ್ಳುತ್ತವೆ. ಆದಾಗ್ಯೂ, ಇವರೂ ಸ್ಥಾವರಲಿಂಗೋಪಾಸಕರು. ದೇವಾಲಯಕ್ಕೆ ಸಂಬಂಧಪಟ್ಟವರಾಗಿರುವರು ಸಾಮಾನ್ಯವಾಗಿ ಇತರ ಜಿಲ್ಲೆಗಳಲ್ಲೂ ಸ್ವಲ್ಪ ಹೆಚ್ಚುಕಡಿಮೆ ಇದೇ ಸ್ಥಿತಿ ಇದ್ದಿರಬಹುದು

ಈ ಹೆಸರುಗಳು ಕ್ರಿ. ಶ. ೭ನೆಯ ಶತಮಾನದಿಂದ ಕ್ರಿ. ಶ. ೧೫ ನೇ ಶತಕದ ಕೊನೆಯವರೆಗೆ ಸಾಮಾನ್ಯವಾಗಿ ಶಾಸನಗಳಲ್ಲಿ ಕಂಡು ಬರುತ್ತವೆ
ಶಿವಮೊಗ್ಗ—ಚಿತ್ರದುರ್ಗ—ಹಾಸನ—ತುಮಕೂರು—ಮೈಸೂರು ಈ ಜಿಲ್ಲೆಗಳ ಶಾಸನಗಳಿಂದ ಈ ಹೆಸರುಗಳ ಪಟ್ಟಿಯನ್ನು ಕೊಡಲಾಗಿದೆ.

| ನಂಬರು | ಉಪಪದಗಳು ಜಿಲ್ಲೆ | ಶಿವಮೊಗ್ಗ ಜಿಲ್ಲೆ | ಚಿತ್ರದುರ್ಗ ಜಿಲ್ಲೆ | ಹಾಸನ ಜಿಲ್ಲೆ | ತುಮಕೂರು ಜಿಲ್ಲೆ | ಮೈಸೂರು ಜಿಲ್ಲೆ |
|---|---|---|---|---|---|---|
| ೧ | ಭಟಿರ, ಭಟಾರ ಭಟಾರಕ. | ಗಡಿಯ ಭದ್ರಯ ಭಟಿರ ರುದ್ರಶಿವ ಭಟಾರ. | ಮೋನ ಕಾಪಾಳಿಗ ಭಟಾರ, ಧರ್ಮ ರಾಶಿ ಭಟಾರಕ, ಶಾಂತಿ ಭಟಾರ ದಿವ್ಯಲಿಂಗ ಭಟಾರ· | ನೀಲಕಂಠರವಿ ಭಟಾರರ್ | ಚಿಕ್ಷಣಕ ಭಟಾರ, ಕಾಣ್ಕೆ ಭಟಾರ, ವಿಮಳಮತಿ ಭಟಾರ | × |
| ೨ | ಶಕ್ತಿ | ರುದ್ರ–ಕ್ರಿಯಾ–ಪೊಲೆಯಮ್ಮಶಕ್ತಿ. | ಜ್ಞಾನ–ವಿಮಳ–ರುದ್ರ–ವಾಮ–ಕಲ್ಯಾಣ-ಕ್ರಿಯಾಶಕ್ತಿ. | ಶಿವ–ಕ್ರಿಯಾ–ಕಲ್ಯಾಣ,–ಈಶಾನ-ಅನಂತ–ತ್ರಿಭುವನ–ವಾಮ–ಮೂಲಿಗ–ರುದ್ರ– ದೇವೇಂದ್ರ– ರೇಚ–ಶಾಂತಿ ತ್ರೈಲೋಕ್ಯ–ನಾರಸಿಂಹಶಕ್ತಿ. | ವಿಮಳ–ಶಿವಶಕ್ತಿ ಪಂಡಿತ ಕ್ರಿಯಾ–ರುದ್ರ–ಕಲ್ಯಾಣ ಬ್ರಹ್ಮ ವಾಮಶಕ್ತಿ. | ಶಿವ-ಭುವನ-ಭಾಳ-ವಾಮ-ರುದ್ರ-ಕ್ರಿಯಾ ಕಲ್ಯಾಣಶಕ್ತಿ |
| ೩ | ಜೀಯ | ಬೊಪ್ಪ-ಗಾಡೆಯ-ಸಿಂಗೆ ಈಶ್ವರ–ಬೆಳ–ಮಾಚ-ಮಸಣ-ಮೇಯ–ಕಾಮೆಯ–ಮಾಬಲ–ಮುಡೆಯ–ಮಲಿಕ–ಅಮಿತ–ಬೊಮ್ಮ | ಲಿಂಗಶಿವ– ತಮ್ಮಗೆಯ – ಬಮ್ಮ–ಬ್ರಹ್ಮದೇವ–ಪಂಡಿತ–ವಿಳ್ಳೇಶ್ವರ–ಸೋಮ - ವಾಮಶಕ್ತಿ – ಮೂಕ–ಮಸಣ–ಕಲ್ಯಾಣ – ಮಾಳ–ಜಕ್ಕ ರಾಮ– ದೇವ–ಮಲ್ಲ-ಇಡುಬ–ಸಿರಿ ಗಿರಿಜೀಯ– | ಮಲೆಯಾಳಜೀ– ಮಲ್ಲಿಕಾರ್ಜುನಜೀ- ಮಾರ–ಹೊನ್ನ ಚೌಡ–ಭೂಪ–ಕೇಶವ– ಮಾಚ – ಮಲ್ಲ–ಹಾಲ–ರುದ್ರ ಗೂಳು–ದುದ್ದ–ಕಲ್ಲ– ಮಾಳ – ಸಂಕರ – ಸಕಲೇಶ್ವರ ಬೆಟ್ಟದ - ಮಾದ - ಅನಂತ- ಕಾಳ-ಆಪ- ಅಂಕ-ಶಂಭು-ಸೋಮ-ಬೆನಕ-ಹಾಲ- ಇಡುಬ- ರಾಮಜೀ –ಧರ್ಮ - ನಾಗ - ಮಹದೇವ - ಬ್ರಹ್ಮ- ಗಂಗ- ಸೋಮ- ದೇವ-ಅಮೃತ-ಅಮಿತ-ಪದ್ಮರಾಶಿಜೀಯ | ಮಾರ–ರೂಪ–ಮಾದ–ಕರ್ತಾರ-ಮಂಚ-ಜಕ್ಕ-ಕಲ್ಲ-ಬಮ್ಮ-ಸೋಮ- ತಿಪ್ಪ ಮಲುಕ - ಹರಿಗೆಯ - ಜನ್ನ-ಶಿವ-ಕೇತ-ಕೇಶವ ಉತ್ತಮ-ಸಂಕರ-ಚಕ-ಬೊಮ್ಮ-ನಗಜೀಯ. | ಕರಿ- ಕರಿಕಂಠ- ಕೇತ-ಜಕ್ಕ-ಮಲ್ಲ-ಬಾಚ-ಮಧುಕ ಉಡ್ಡಿ- ಮಾಜ - ಬೋಕ-ಪೀರ–ಹರವಿ – ಮಳಿಯ–ಜಕ್ಕ- ಮಾದ-ಸಕೆ-ಭೈರಮ ನಾಕ-ಸಿಂಗೆ- ಈಶ್ವರಜೀಯ |
| ೪ | ರಾಶಿ | ದೇವರಾಶಿ | ಧರ್ಮ-ಬೆನಕ-ಶಿವ-ಸಾಂತ-ಅಮೃತ ಉತ್ತಮ-ಭೀಮರಾಶಿ | ಧರ್ಮ-ನಾಗ-ಮಹದೇವ-ಬ್ರಹ್ಮ-ಗಂಗ-ಸೋವ-ದೇವ-ಅಮೃತ-ಅಮಿತ-ಪದ್ಮರಾಶಿ | ಅಮೃತ-ಪದ್ಮ-ಗಂಗ ಭೀಮ-ಸಾಂತರಾಶಿ | ಬ್ರಹ್ಮ-ಮಧುರ-ದೇವರಾಶಿ- |
| ೫ | ಈಶ್ವರ | ಸರ್ವೇಶ್ವರಸೋಮೇಶ್ವರ ಕಾಳೇಶ್ವರ-ಮಧುಕೇಶ್ವರ ಧರ್ಮೇಶ್ವರ. | ಪರಮೇಶ್ವರ-ಸಬ್ಬೇ-ವಿಳ್ಳೇ-ಸೋಮೇಶ್ವರ-ಬ್ರಹ್ಮೇಶ್ವರ | ಸೋಮೇ-ಪರಮೇ-ಅಚಲೇ-ಸಕಲೇ-ಸಿಂಗೇ-ಜಗತೇ-ಮಾಲೇಶ್ವರ | ಸಕಳೇ-ಸೋಮೇ-ವರೇಶ್ವರ. | ಸರ್ವೇಶ್ವರ-ಕಲಿಮೇಶ್ವ-ಸೋಮೇ-ಕಾಳೇ-ಮಧುರ ಕೇಶ್ವರ. |
| ೬ | ದೇವ-ದೇವರು. | ರುದ್ರಶಕ್ತಿ ದೇವರು ಸಿದ್ಧನಾಥ ದೇವರು | ಚಂದ್ರಮೌಳಿ-ನೀಲಕಂಠ-ಬ್ರಹ್ಮ ಸಿದ್ಧಮಲ್ಲ-ಸಿದ್ಧ-ಕ್ರಿಯಾಶಕ್ತಿದೇವ. | ರಾಮದೇವರು-ಶಿವಶಕ್ತಿದೇವರು-ಸಹದೇವರು-ಬ್ರಹ್ಮದೇ ಶಿವದೇ-ಸಾಸಮುನಿದೇ-ಸೋಮನಾಥದೇ-ಚಂದ್ರಭೂಷಣದೇ— ಚಂದ್ರಶೇಖರದೇ— ಚಂದ್ರಮೌಳದೇ— ಮಲ್ಲಿಕಾರ್ಜುನದೇ— ರುದ್ರಶಕ್ತಿದೇ-ಸಾಂತಿದೇ— ಮಾಯಿದೇ ಸೋಮೇಶ್ವರದೇವ— ಅಮೃತಶಿವದೇವ— ಮುನೀಂದ್ರ ಶಿವದೇವ. | × | ಮಾದೇವ-ನಾಗದೇವ |

(ತಿರುವಿ ನೋಡಿ)

| ನಂಬರು | ಉಪಪದಗಳು ಜಿಲ್ಲೆ | ಶಿವಮೊಗ್ಗ ಜಿಲ್ಲೆ | ಚಿತ್ರದುರ್ಗ ಜಿಲ್ಲೆ | ಹಾಸನ ಜಿಲ್ಲೆ | ತುಮಕೂರು ಜಿಲ್ಲೆ | ಮೈಸೂರು ಜಿಲ್ಲೆ |
|---|---|---|---|---|---|---|
| ೭ | ಶಿವ | ಅನಂತಶಿವ-ವಿದ್ಯಾಶಿವ | ವಿದ್ಯಾಶಿವ | ಅಮೃತಶಿವ-ಮುನೀಂದ್ರಶಿವ | ರುದ್ರಶಿವ-ಅನಂತಶಿವ | × |
| ೮ | ಕಂಠ | ನೀಲಕಂಠ | × | × | × | × |
| ೯ | ಒಡೆಯ | × | ರಾಮೊಣೊಡೆಯ,-ದೇಮಣೊಡೆಯ. | ಸೋಮಣೊಡೆಯ- ಮಲ್ಲೊಡೆಯ. | ಮಲ್ಲಿಕಾರ್ಜುನ ಒಡೆಯ–<br>ಸಿದ್ದಯ ಒಡೆಯ | ಎಕ್ಕೋಟಿ ಪಂಡಿತ<br>ಚಿಕ್ಕೊಡೆಯ |
| ೧೦ | ಪಂಡಿತ | ತತ್ಪುರುಷಪಂ-ರುದ್ರಪಂ | ನೀಲಕಂಠ ಪಂಡಿತ-ಭರತ ಪಂಡಿತ | × | × | × |
| ೧೧ | ಆಭರಣ, ಭೂಷಣ | × | ಲೋಕಾಭರಣ, ನಾಗಭೂಷಣ,<br>ಚಂದ್ರಭೂಷಣ. | ಲೋಕಾಭರಣ-ಚಂದ್ರಭೂಷಣ | ಚಂದ್ರಭೂಷಣ, ಚಂದ್ರಾ<br>ಭರಣ, | ಸೂರ್ಯಾಭರಣ |
| ೧೨ | ಕರ್ತಾರ | × | ಕರ್ತಾರಪಂಡಿತದೇವ-ತ್ರೈಲೋಕ್ಯ<br>ಕರ್ತಾರ-ಭುವನ ಕರ್ತಾರಪಂಡಿತ ದೇವ | × | × | × |
| ೧೩ | ನಿಧಿ | × | ತೇಜೋನಿಧಿ | × | × | × |
| ೧೪ | ಇಂದ್ರ | × | ದೇವೇಂದ್ರ ಪಂಡಿತ | ದೇವೇಂದ್ರ ಪಂಡಿತ— ದೇವೇಂದ್ರ ಶಕ್ತಿ. | × | × |
| ೧೫ | ಗುರು | × | ಕಲ್ಲಗುರು, ವಿಶ್ವನಾಥಗುರು,<br>ಮಲ್ಲಿಕಾರ್ಜುನ ಗುರು. | ಮಲಯಜೀಯಗುರು–ಧರ್ಮರಾಶಿಗುರು–ಕೇದಾರಗುರು-<br>ಬೈಚಗುರು–ಚಂದಗುರು–ಬ್ರಹ್ಮರಾಶಿಗುರು–ಮಾಲೇಶ್ವರಗುರು | × | × |
| ೧೬ | ಪಂಡಿತ | × | ನೀಲಕಂಠ ಪಂ ‖ ಭರತ ಪಂ ‖ | ಕುಮಾರಸಿಂಗಿ ಪಂಡಿತ–ಎಕ್ಕೋಟಿ ಮುನೀಂದ್ರಪಂಡಿತ–<br>ಸೋಮನಾಥದೇವ ಪಂಡಿತ. | × | × |
| ೧೭ | ಅಯ್ಯ | × | ಚೆನ್ನಯ್ಯ | ಸಿಂಗಯ್ಯ– ಬೂದಯ್ಯ– ಸಿಂಗಿರಾಜಯ್ಯ–ಸೋಮಯ್ಯ–<br>ಚೋಳಯ್ಯ- ಲಿಂಗಯ್ಯ | × | × |
| ೧೮ | ಅಂಣ | × | ಸಿದ್ಧಂಣ–ಸೋಮಂಣ–ವೀರಂಣ. | ದೇವಂಣ | × | × |
| ೧೯ | ಶೇಖರ<br>ಮೌಳಿ | × | × | ಚಂದ್ರಶೇಖರ–ಚಂದ್ರಮೌಳಿ, | × | × |

| ನಂ. | ಕ್ರಿ.ಶ ಶತಮಾನ | ಶಿವಮೊಗ್ಗ ಜಿಲ್ಲೆ | ಚಿತ್ರದುರ್ಗ ಜಿಲ್ಲೆ | ಹಾಸನ ಜಿಲ್ಲೆ | ತುಮಕೂರ | ಮೈಸೂರ ಜಿಲ್ಲೆ | ಒಟ್ಟು |
|---|---|---|---|---|---|---|---|
| ೧ | ೬ | × | ೧ | × | × | × | ೧ |
| ೨ | ೭ | × | × | × | × | × | × |
| ೩ | ೮ | × | × | × | × | × | × |
| ೪ | ೯ | × | ೧ | × | × | × | ೧ |
| ೫ | ೧೦ | ೩ | ೭ | × | ೨ | ೧ | ೧೩ |
| ೬ | ೧೧ | ೯ | ೧೭ | ೧೦ | × | ೩ | ೩೯ |
| ೭ | ೧೨ | ೩ | ೩೫ | ೯೧ | ೩೩ | ೧೦ | ೧೭೨ |
| ೮ | ೧೩ | ೫ | ೧೨ | ೩೩ | ೨೨ | ೮ | ೮೦ |
| ೯ | ೧೪ | × | ೧೧ | × | × | × | ೧೧ |
| ೧೦ | ೧೫ | ೩ | ೩ | ೪ ಪೀ ಶೈ | ೪ | ೨ | ೧೬ |
| ೧೧ | ೧೬ | × | × | × | × | × | × |
| ೧೨ | ೧೭ | ೫ ಪೀ.ಶೈ | ೪ ಪೀ ಶೈ | × | × | × | ೯ |
| | | ೨೮ | ೯೧ | ೧೩೮ | ೬೧ | ೨೪ | ೩೪೨ |

**ಸಂಸಾರಿಗಳು**

ಈ ನಾಮಾವಳಿಯಲ್ಲಿ ಎಲ್ಲರೂ ದೇವಸ್ಥಾನಗಳಿಗೆ ಬಿಟ್ಟ ದತ್ತಿಯನ್ನು ಪಡೆದವರಾಗಿರುವರು. ಸ್ಥಾನಪತಿಗಳಾದ ಇವರು ಎಲ್ಲರೂ, ಯತಿ,

ಮುನಿ, ಬ್ರತಿ, ಮುಂತಾದ ವಿಶೇಷಣಗಳಿಂದ ಶಾಸನಗಳಲ್ಲಿ ವರ್ಣಿತ ರಾಗಿಲ್ಲ. ಅಷ್ಟೆಯಲ್ಲ, ಬಹುತರವಾಗಿ ತಂದೆ, ತಾಯಿ, ಮುತ್ತಾತ, ಅಣ್ಣ, ತಮ್ಮ, ಪುತ್ರಪೌತ್ರ, ಕೆಲವೆಡೆಗಳಲ್ಲಿ ಹೆಂಡತಿ ಇವರುಗಳ ಹೆಸರು ಗಳನ್ನು ಹೇಳಲಾಗಿದೆ. ಇದರಿಂದ ಈ ಜನರಲ್ಲಿ ಬಹುತರವಾಗಿ ಸಂಸಾರಿ ಗಳು ಇದ್ದುದು ಕಂಡುಬರುವುದು.

## ಯತಿಮುನಿ

ದತ್ತಿಗಳನ್ನು ಪಡೆದ ನೂರಾರು ಸ್ಥಾನಪತಿಗಳಲ್ಲಿ ಕೆಲವರಿಗೆ ಮಾತ್ರ "ಯಮನಿಯಮ ಧ್ಯಾನಧಾರಣ ಮೌನಾನುಷ್ಠಾನ ಜಪತಪ ಸಮಾಧಿ ಶೀಲಸಂಪನ್ನರುಂ" ಎಂಬ ವರ್ಣನೆಯೂ ಯತಿ, ಯತಿಪತಿ, ಮುನಿ, ಮುನೀಂದ್ರ, ಮುಂತಾದ ವಿಶೇಷಣಗಳೂ ಶಾಸನಗಳಲ್ಲಿ ಬಂದಿರುವುದರಿಂದ, ಈ ತರದ ವರ್ಣನೆಯುಳ್ಳವರು "ಯತಿ" ಅಥವಾ "ಬ್ರಹ್ಮಚಾರಿ" ಗಳಾಗಿದ್ದರೆಂದು ತಿಳಿಯಬಹುದು. ಕಾಳೇಶ್ವರ (ಸೊರಬ ನಂ. ೩೮೯) ಸರ್ವೇಶ್ವರ (ಸೊರಬ ನಂ ೨೭೫), ಸೋಮರಾಶಿ (ಚಿತ್ರದುರ್ಗ ನಂ ೩೩) ರುದ್ರಶಕ್ತಿಪಂಡಿತ (ಚಿತ್ರದುರ್ಗ ನಂ. ೩೪), ಮಲ್ಲಿಕಾರ್ಜುನ ಪಂಡಿತ (ಚಿತ್ರದುರ್ಗ ನಂ. ೭೧), ಭಾಳಚಂದ್ರ ಪಂಡಿತ (ಚಿತ್ರದುರ್ಗ ನಂ. ೭೭), ಶ್ರೀಮತ್ಶಾಂತರಾಶಿಯ ಶಿಷ್ಯರಪ್ಪ ಧರ್ಮರಾಶಿ ಭಟಾರಕ, ಕೆರೆಯೂರ ಜ್ಞಾನಶಿವದೇವಮುನಿ ಜ್ಞಾನಶಕ್ತಿಪಂಡಿತ (ದಾವಣಗೆರೆ ನಂ. ೮೦), ಜ್ಞಾನ ಶಕ್ತಿದೇವರ ಶಿಷ್ಯರಪ್ಪ ವಾಮಶಕ್ತಿ ಪಂಡಿತರು (ದಾವಣಗೆರೆ ನಂ. ೮೪), ವಿಮಳಶಕ್ತಿ (ದಾವಣಗೆರೆ ನಂ. ೩೪), ಕರ್ತಾರ ಪಂಡಿತರ ಶಿಷ್ಯ ವಾದಿ ಪ್ರಳಯಭೈರವದೇವ (ಜಗಳೂರ ೯), ತ್ರೈಲೋಕ್ಯ ಭಟಾರಕ, ಭೂತ ಜೀಯರ ಶಿಷ್ಯ ಅಚಲೇಶ್ವರ ಪಂಡಿತ (ಅರಸಿಕೆರೆ ನಂ ೩), ತ್ರಿಭುವನ ಶಕ್ತಿ ಪಂಡಿತರ ಶಿಷ್ಯತ್ರೈಲೋಕ್ಯಶಕ್ತಿ (ಅರಸಿಕೆರೆ ನಂ. ೯೦), ದೇವೇಂದ್ರಪಂಡಿತರ ಶಿಷ್ಯ ಸೋಮೇಶ್ವರ (ಅರಸಿಕೆರೆ ನಂ.೨೪), ಧರ್ಮರಾಶಿಬ್ರತೀಶ (ಚೆನ್ನರಾಯ ಪಟ್ಟಣ ನಂ. ೨೦೪), ಕಲ್ಲಮಠದ ಮಲ್ಲಿಕಾರ್ಜುನ ಪಂಡಿತ (ಚಿಕ್ಕನಾಯ ಕನಹಳ್ಳಿ ನಂ ೪೩), ಇಂತಹವರೆಲ್ಲರೂ ಯತಿ, ಮುನಿ, ಬ್ರತಿಗಳಾಗಿರುವರು.

## ಕಾಳಾಮುಖರು

ಈ ತರದ ಯತಿ, ಮುನಿ, ತಪೋಧನ ಮುಂತಾದವರೆಲ್ಲರಿಗೂ ಕಾಳಾಮುಖವೆಂಬ ವಿಶೇಷಣವಿಲ್ಲ. ಅವರಲ್ಲಿ ಕೆಲವರಿಗೆ ಮಾತ್ರ ಕಾಳಾ ಮುಖ ಶಬ್ದವು ಪ್ರಯೋಗವಾಗಿರುವುದು. ಕಾಳಾಮುಖ ದೀಕ್ಷಿತರಪ್ಪ, ಕಾಳಾಮುಖ ಪ್ರತಿಬದ್ಧರಪ್ಪ, ಎಂದು ಕೆಲವರಿಗೆ ಅಂದಿರುವುದರಿಂದ, ಯತಿ,

ಮುನಿಗಳಾದವರಲ್ಲಿ ವಿಶಿಷ್ಟ ದೀಕ್ಷೆ ಹೊಂದಿದವರು ಮಾತ್ರ ಕಾಳಾಮುಖರೆಂದೂ, ಮಹಾವ್ರತಿಯೆಂದೂ ಕರೆಯಲ್ಪಟ್ಟಿರುವರು. ಇಂತಹವರ ಹೆಸರುಗಳು ' ಪರ್ವತಾವಳಿಯ ಕಾಳಾಮುಖವಾದಿ ರುದ್ರಪಂಡಿತರ ಶಿಷ್ಯ ಕ್ರಿಯಾಶಕ್ತಿ, (ಸಾಗರ ನಂ. ೧೦೪೨ A. D), ಕಾಳಾಮುಖ ಪ್ರತಿಬದ್ಧರುಮಪ್ಪ ನಾಗರಾಶಿ ಪಂಡಿತರ ಶಿಷ್ಯ, ಶಿವಶಕ್ತಿದೇವರ ಶಿಷ್ಯ ಕಲ್ಯಾಣಶಕ್ತಿ (ಅರಸಿಕೆರೆ ನಂ. ೪೮, ೧೧೨೯ A D.), ಈಶಾನಶಕ್ತಿಬ್ರತೀಂದ್ರ........ ವಿನುತ ಕಾಳಾಮುಖರ್ (ಬೇಲೂರು ನಂ. ೧೧೭; ೧೧೩೭ A. D.), ಕಾಳಾಮುಖ ಬ್ರತಿಗಳಪ್ಪ ಶ್ರೀ ತೇಜೋನಿಧಿ ಪಂಡಿತ ದೇವರ ಮಗ ಸರ್ವೇಶ್ವರ ದೇವರು (ಜಗಳೂರು ನಂ ೪೮; ೧೧೫೫ A D), ಕಾಳಾಮುಖ ಕುವಳಯಬಾಂಧವ ಬಮ್ಮಜೀಯನ ಮಗ ಗಂಗರಾಶಿಜೀಯ (ಶಿಪಟೂರು ನಂ. ೯೧; ೧೧೬೮ A. D.), ಕಾಳಾಮುಖಪ್ರತಿಬದ್ಧ ನಾಗರಾಶಿಯ ಶಿಷ್ಯ ಮಾದಜೀಯ (ಅರಸಿಕೆರೆ ನಂ. ೬೮; ೧೧೭೪ A. D.), ಕಾಳಾಮುಖ ಪ್ರತಿಬದ್ಧರು ಕೇತಜೀಯರ ಶಿಷ್ಯ ದೇವೇಂದ್ರಶಕ್ತಿ (ಅರಸಿಕೆರೆ ನಂ. ೬೨; ೧೧೭೮ A. D.), ಕಾಳಾಮುಖ ದೀಕ್ಷಿತರಪ್ಪ ಶ್ರೀಮತು ಜಗತೇಶ್ವರ ಪಂಡಿತರು (ಅರಸಿಕೆರೆ ನಂ. ೪೨; ೧೧೯೬ A D). ಇವರೆಲ್ಲರೂ ಕಾಳಾಮುಖರಾಗಿರುವರು. ಇವರ ಸಂಬಂಧವು ಕೆಳಗೆ ಕೊಟ್ಟಿರುವ ವೃಕ್ಷದಿಂದ ತಿಳಿದುಬರುವಂತಿದೆ.



ಈ ಮೇಲಿನ ವೃಕ್ಷದಲ್ಲಿ ಪುತ್ರಸಂತತಿಯವರು, ದೀಕ್ಷೆಯ ಸಂತತಿಯವರು, ಸ್ಥಾನಾಚಾರ್ಯರ ಜಾತಿಯವರು; ಶಿಕ್ಷೆಯ ಮಕ್ಕಳು ಬೇರೆ ಜಾತಿಯವರು. ಇಂದಿನ ಗುರುವರ್ಗದ ಜಂಗಮರಲ್ಲಿ ಇದು ಇಂದಿಗೂ ನಡೆದುಬಂದಿದೆ.

## ಕಾಳಾಮುಖ ಆಚಾರ

ಕಾಳಾಮುಖರ ಆಚಾರ ವಿಷಯದಲ್ಲಿ ಶಾಸನಗಳಲ್ಲಿ ಸಾಮಾನ್ಯವಾಗಿ ನೈಷ್ಠಿಕರು, ವ್ರತಿಗಳು ಮನುಮಾರ್ಗಚರಿತರು ಇವೇ ಮುಂತಾದ ವರ್ಣನೆಗಳು ಸಿಕ್ಕುತ್ತವೆ. ಆದರೆ ಹೊಂಬಳದ ಶಾಸನದಲ್ಲಿ ಬೊಂತೆಮುನಿಯ ಮತ್ತು ಅವನ ಸಂತತಿಯವರ ವಿಷಯದಲ್ಲಿ ಕೆಲವು ವಿಶಿಷ್ಟ ವರ್ಣನೆ ಬರುವುದು.

ಅಂತೆಸಿಸಿದ ಪೊಂಬೞಲೊಳ್ ।
ಬೊಂತೆಯಮುನಿ ಕಾಲಮುಖಮುನೀಶ್ವರನತಿನಿ ॥
ಶ್ರಿಂತಾತ್ಮನಾಗಿ ಬೆಳ್ಪಿಯ ।
ಸಂತಾನಂ ನೆಗೞ್ದು ಪರ್ವತಾಲಯದಿರ್ಪಂ ॥

ಆ ಕಲಿಯುಗಸಿದ್ಧ ಲಕುಲೀಶ್ವರಾಪರನಾಮಧೇಯನೆನಿಸಿದ ಮಹಾನುಭಾವಂ ಪ್ರಭಾವದೊಳ್ ದೊರೆಯೇಸಂದಡೆ—

ಶ್ರೀಗಿರಿಯೊಳ್ ಪೊದೞ್ದಿರಿವ ಸೂರ್ಯಶಿಲಾತಲದೊಳ್ ನಿದಾಘದೊಳ್ ।
ಬೇಗೆ ತಗಳ್ದು ನಾಲ್ದೆಸೆಯೊಳಂ ಸುಡೆ ನಿಶ್ಚಲಚಿತ್ತನಾಗಿ ಸೂ ॥
ರ್ಯಾಗಮನಕ್ಕೆ ಸನ್ಮುಖದಿನೂರ್ಧ್ವಮುಖಂ ನಿಲೆ ಕೈಯನೆತ್ತಿ ಕಂ।
ಡಾಗಲೆ ಸೂರ್ಯನಿತ್ತನಖಿಲಜ್ಞತೆಯಂ ಮುನಿ ಬೊಂತೆಗಱ್ಕಱಿಂ ॥

ಸುಡಿಕತ್ತ್ರವಾದಮಂ ತೊಡ ।
ರ್ದಡೆ ದೇವ ಮನುಷ್ಯ ಯಕ್ಷರಾಕ್ಷಸರೊಡನಾ ॥
ದಡವೊಂದನುಗ್ರಹಂ ಗೆ ।
ಯ್ದಡೆ ದಿನಪಂ ಪಡೆಸಲ್ತೆ ಬೊಂತೆಯ ಮುನಿಪ ॥

ಈ ಬೊಂತೆಯಮುನಿಯ ಶಿಷ್ಯ ಅವಧೂತದೇವ. ಈ ಅವಧೂತನ ಅನುಜರು ಕೇದಾರಶಕ್ತಿ, ಮಲ್ಲಿಕಾರ್ಜುನ, ಯತಿ ವಾಮದೇವ, ರುದ್ರ

ಶಕ್ತಿ, ಕ್ರಿಯಾಶಕ್ತಿಗಳು. ಈಯವಧೂತದೇವರ ಪ್ರಮುಖ ಶಿಷ್ಯ ಸಂಸೇವ್ಯಮಾನ ಪಾದಾರವಿಂದರು, ಪರಿವೃತ ಮುನೀಂದ್ರವೃಂದರು ಮಾಗಿ,

ಸೃಜಿಯಿಸಿದರ್ ಸಕಲಗುಣ।
ವ್ರಜಮಂ ತಂದೊಂದು ಮಾಡಿ ಕಂಥಾಚಾರ್ಯರ್ ॥
ನಿಜಮಹಿಮೆಯಿನೊಸೆದೆಸೆವಂ।
ತು ಜಗನ್ನುತನೆನಿಪ ವಾಮಶಕ್ತಿವ್ರತಿಯಂ ॥

ಒಡವುಟ್ಟಿದ್ದಖಿಳಾಗಮಂ ಸಕಲ ತರ್ಕಂ ಶಬ್ದಶಾಸ್ತ್ರಂ ಪೆರರ್।
ಪೊಡವಟ್ಟಾಗಳೆ ಚಿತ್ತದೊಳ್ ಬಗೆದ ನಾತಂ ಪೇಕ್ಷ್ವ
ವಿಜ್ಞಾನದೊಳ್ ॥
ನುಡಿಯಾರಾಧಿಸೆ ಸೂರ್ಯನೊಳ್ಪಡೆದ ತತ್ವಾಭ್ಯಾಸಮಾ
ತಂದೆಯೊಳ್ ।
ಪಡಿಯೆಂಬಂತಿರೆ ವಾಮಶಕ್ತಿಯೆಸೆದಿರ್ದಂ ಕರ್ತೃವಾದೀಶ್ವರಂ ॥

ಈ ವಾಮಶಕ್ತಿದೇವರ್ಗೌರಸ ಪುತ್ರರೆನಿಸಿ—

ಜನಿಯಿಸಿದರ್ ಬೊಂತೆಯಗುರು ।
ಮನುಮಾರ್ಗಂ ಮಲ್ಲಿಕಾರ್ಜುನ [೦] ಸಕಲಕಲಾ ॥
ಭಿಸುತನಮರೇಶ್ವರಂ ಪಾ ।
ವನಚರಿತಂ ರುದ್ರಶಕ್ತಿಯೆಂಬರ್ ತನಯರ್ ॥

ಈ ವಾಮಶಕ್ತಿಯ ಹಿರಿಯ ಮಗನು ರುದ್ರಶಕ್ತಿಯು ಇವನ ತಪಸ್ಸನ್ನು ವರ್ಣಿಸಿದ ಮೇಲೆ ಈ ಕೆಳಗಿನ ಪದ್ಯವಿದೆ.

ವಸವರ್ಗತ್ಯಾಗಮೇಕಾಂತದೆ ಉಣಿಸಿದವಂ ಮೂಱು
ತುತ್ತಲ್ಲಿಯುಂ ಭೂ ।
ತಸಮೂಹಕ್ಕೊಂದು ಭಾಗಂ ಬಲಿಯೆನೆ ನೆಗಳ್ದಂ ............ ॥

*  *  *  *  *  *

ತೀರ್ಚಿ ಪರೋಕ್ಷದೊಳ್ ಪಿತೃಗೆ ಸತ್ಕ್ರಿಯೆಯಂ ವಿರಕ್ತಿ ವಾ ।
ಯ್ವೆರ್ಚಿರೆ ಸಂಗಮಂ ತೊಱೆದು ಪಾದುಕಮಂ ಬಲವಂದು
ಭಕ್ತಿಯಿಂ ॥

ದರ್ಚಿಸಿ ಕೆಂಗಣಬ್ಬೆಯು ಪದಂಗಳನಾಗಳೆ ರುದ್ರಶಕ್ತಿ ಒಂ ।
ದರ್ಚಿಸುತಿರ್ದ್ದನಂದು ನಱಗುಂದದ ಬೆಟ್ಟದೊಳಿದ್ದು ಸೂರ್ಯನಂ ॥
ಉರಿಯುನುಗುಳ್ವ ಬೇಸಗೆಯೊಳಿದ್ದುರೆ ಕಾಯ್ದುರೆಯೊಳ್ ಬಳಿಕ್ಕೆ ಪೆ ।
ರ್ಕ್ಕರ ಮೂಲದೊಳ್ ಕಳಲ್ದ ಮಳೆಗಾಲದೊಳಿದ್ದು ಬಳಿಕ್ಕೆ ಶೀತಮು ॥
ಬ್ಬರಿಸಿದ ಮಾಗಿಯೊಳ್ ಬಯಲೊಳಿದ್ದು ನಿರಾವರಣಂ ನಿರನ್ನನು ।
ದ್ಧರತಪದಿಂ ತ್ರಿವರ್ಷಮಿರೆ ಕಂಡಿನನಾಮುನಿರುದ್ರಶಕ್ತಿಯಂ ॥

ಈ ರೀತಿ ತಪವನ್ನಾಚರಿಸಲು ಸೂರ್ಯನು ಪ್ರತ್ಯಕ್ಷವಾಗಿ ವರವನ್ನು ಕೊಟ್ಟಿರುವನು. ಅದು ಈ ರೀತಿ—

ಧರೆಯೊಳ್ ಶಿವಾಗಮವು ವಿ ।
ಸ್ತರಿಸಿರೆ ಪಲರ್ಗರಿಯೆ ಪೇೞ್ದು ಶಿವಪದಪೂಜಾ ॥
ಪರನಾಗಣಿಮಾದಿಗಳೊಳ್ ।
ನೆಱೆದಪೆ ನೀನೆಂದು [ ರವಿ ? ] ತಿರೋಹಿತನಾದಂ ॥
ತದನಂತರವುದಯಿಸೆ ಬೋ ।
ಧದೀಪ್ತಿ ತದ್ಗಿರಿಯ ದುರ್ಗೆಯುಂ ಬೀಳ್ಕೊಂಡುಂ ॥,
ಮುದದಿಂ ಚರಿಯಿಸುತಿರ್ದಂ ।
ಸದರ್ಶನಂ ರುದ್ರಶಕ್ತಿದೇವಂ ಜಗದೊಳ್ ॥

ಅನಂತರ ರುದ್ರಶಕ್ತಿದೇವರ ಶಿಷ್ಯೆಯು ಮಕ್ಕಳೆಂದು ನವಿಲೂರು ಶಂಕರಬ್ಬೆ, ಕವಡೂರು ಚೆಂದಿಸೆಟ್ಟಿ, ಮುಂತಾದವರ ಹೆಸರುಗಳನ್ನು ಹೇಳಲಾಗಿದೆ

ಪಂಚಾಗ್ನಿ ಸಾಧನೆಯಿಂದ ಸೂರ್ಯನನ್ನು ಕುರಿತು ತಪಸ್ಸು ಮಾಡುವುದು, ಸೂರ್ಯನಿಂದ ಅಖಿಲಜ್ಞತೆಯನ್ನು ಮತ್ತು ಕರ್ತೃವಾದ ವನ್ನು ಪಡೆಯುವುದು. ಪೆಱರ್ ಪೊಡವಟ್ಟಾಗಳೆ ಚಿತ್ತದೊಳ್ ಬಗೆದ ಮಾತಂ ಪೇಳ್ವ ವಿಜ್ಞಾನದೊಳ್ ನುಡಿಯನ್ನು ಆರಾಧಿಸುವುದು, ಸೂರ್ಯ ನೊಳ್ಪಡೆದ ತತ್ವಾಭ್ಯಾಸದಿಂದ ಕರ್ತವಾದೀಶ್ವರನೆಂದು ಪ್ರಸಿದ್ಧಿಯನು

ಪಡೆಯುವುದು, ಈ ಎಲ್ಲ ಅಸಾಧಾರಣ ಲಕ್ಷಣಗಳನ್ನು ವಾಮಶಕ್ತಿಯನ್ನು ಕುರಿತು ಹೇಳಲಾಗಿದೆ. ಈ ಸಂದರ್ಭದಲ್ಲಿ ಯಾಜ್ಞವಲ್ಕ್ಯ ಋಷಿಯು ಸೂರ್ಯನಿಂದ ವಾಜಿರೂಪದಿಂದ ವೇದವನ್ನು ಸಂಪಾದಿಸಿದನೆಂಬ ವೈದಿಕ ಆಖ್ಯಾಯಿಕೆಯು ನೆನಪಿಗೆ ಬರುವುದು. ಇದಲ್ಲದೆ "ರಸವರ್ಗತ್ಯಾಗಮೋ ಕಾಂತದೆ ಉಣಿಸಿದವನಂತೆ" ಇವನು ಇದರ ಭಾವವೇನೊ ತಿಳಿಯದು. ಇವೇ ಮುಂತಾದ ವಿಷಯಗಳಿಂದ ಆ ಕಾಲದ ಲಾಕುಳಶೈವರ ತಪಸ್ಸು, ಆಚಾರ, ತತ್ವ, ಉಪಾಸನೆ ಮುಂತಾದವುಗಳ ಕಲ್ಪನೆಯಾಗುವುದು.

## ಕಾಳಾಮುಖರು ಯಾರು ಮತ್ತು ಎಲ್ಲಿ ಅಡಗಿದರು ?

ಕರ್ನಾಟಕದಲ್ಲಿ ಲಾಕುಳ ಸಮಯದ ಅನುಯಾಯಿಗಳಾದ ಮಾಹೇಶ್ವರರು ಪ್ರಸಿದ್ಧ ಜನಾಂಗವಾಗಿದ್ದರೆಂಬುದು ಸರ್ವಸಮ್ಮತವಾದ ವಿಷಯವಾಗಿದೆ. ಅವರಲ್ಲಿ ವಿಶಿಷ್ಟ ದೀಕ್ಷೆ ಹೊಂದಿದವರಿಗೆ ಮಾತ್ರ ಕಾಳಾಮುಖರು, ಅಸಿತವಕ್ತ್ರರು ಮುಂತಾದ ಅನೇಕ ಶಬ್ದಗಳಿಂದ ಶಾಸನಗಳಲ್ಲಿ ಸಂಬೋಧಿಸಲಾಗಿದೆ. ಕಾಳಾಮುಖರ ದಾರ್ಶನಿಕ ಮತವನ್ನು ಕುರಿತು ಹಿಂದೆ ಚರ್ಚಿಸಲಾಗಿದೆ. ಆದರೆ ಇವರು ಯಾರಿದ್ದರು ಮತ್ತು ಎಲ್ಲಿ ಅಡಗಿದರು, ಎಂಬ ಪ್ರಶ್ನೆಯು ಮಾತ್ರ ಇದುವರೆಗ ಗೂಢವಾಗಿದೆ. ಈ ವಿಷಯದಲ್ಲಿ ಪಂಡಿತರಲ್ಲಿ ಭಿನ್ನಾಭಿಪ್ರಾಯವಿದೆ.

(೧) ವೈ॥ ವಾ॥ ಡಾಕ್ಟರ ಎಂ. ಎಚ್. ಕೃಷ್ಣರು ಕೆಳಗಿನಂತೆ ಅಭಿಪ್ರಾಯಪಟ್ಟಿರುವರು

(ಅ) ಕಾಳಾಮುಖರು ಕಾಶ್ಮೀರದಿಂದ ಕರ್ನಾಟಕ ದೇಶಕ್ಕೆ ಬಂದವರು. ಇವರು ಲಗುಡ ಧಾರಣರು, ಅಥವಾ ದಂಡಧಾರಿಗಳು ಎಂದು ಶ್ರೀಭಾಷ್ಯದಲ್ಲಿ ಹೇಳಿದೆ. ಇದು ಇವರ ವೈಶಿಷ್ಟ್ಯವಾಗಿದೆ.

(ಬ) ಇವರು ವೇದಮತಾನುಯಾಯಿಗಳಾದ ಬ್ರಾಹ್ಮಣರು. ಘನ ವಿದ್ವಾಂಸರು, ಮಠ ಮತ್ತು ದೇವಸ್ಥಾನಗಳಿಗೆ ಮುಖ್ಯಾಧಿಕಾರಿಗಳಾಗಿದ್ದರು ಶಿವದೇವಸ್ಥಾನದ ಪೂಜಾರಿಗಳು. ಅಪರೂಪವಾಗಿ ಇವರ ಗೋತ್ರಸೂತ್ರಾದಿಗಳು ದೊರೆಯುತ್ತವೆ. ರಾಜಗುರುಗಳಾಗಿ ಕ್ರಿ.ಶ. ೧೧ರಿಂದ ೧೪ನೆಯ ಶತಮಾನದವರೆಗೆ ಇವರು ಪ್ರಬಲರಾಗಿದ್ದರು. ವಿಜಯನಗರದ ಬುಕ್ಕನಿಗೂ, ಗೋವೆಯ ಚಂದ್ರಗುತ್ತಿಗಳಿಗೆ ಅಧಿಕಾರಿಯಾಗಿದ್ದ

ಪ್ರಸಿದ್ಧನಾದ ಮಂತ್ರಿಗೂ, ಗುರುವಾಗಿದ್ದ ಕ್ರಿಯಾಶಕ್ತಿಯು ಈ ಕಾಳಾಮುಖ ಸಂಪ್ರದಾಯದವನು. (ಸಾಹಿತ್ಯ ಪರಿಷತ್ ಪತ್ರಿಕೆ ಸಂಪುಟ ೨೮, ಸಂಚಿಕೆ ೧-ಏಪ್ರಿಲ್ ೧೯೪೩. ತಿಳವಳ್ಳಿ ಶಾಸನ).

(೨) ಶ್ರೀಮಾನ್ ಚೆನ್ನಮಲ್ಲಪ್ಪ ಗಲಗಲಿ ಇವರು "ಜಯಕರ್ನಾಟಕ ಸಂಪುಟ ೯ ಸಂಚಿಕೆ ೧" ರಲ್ಲಿ "ಲಿಂಗಿಗಳು" ಎಂಬ ಲೇಖನವನ್ನು ಬರೆದು ಈ ವಿಷಯವನ್ನು ವಿಸ್ತೃತವಾಗಿ ಚರ್ಚಿಸಿರುವರು. ಈ ವಿಷಯು ಮಹತ್ವದ್ದೂ ತೊಡಕಿನದೂ ಆಗಿದ್ದುದರಿಂದ ಅವರ ಲೇಖನದಲ್ಲಿಯ ಕೆಲವಂಶಗಳನ್ನು ಇದ್ದಕ್ಕಿದ್ದಂತೆ ಇಲ್ಲಿ ಕೊಡುವುದು ಉಚಿತವಾಗಿದೆ.

"ಇವನೀಯುಂದದೊಳೆಯ್ದೆ ರಕ್ಷಿಸಿದವಂಗಿಷ್ಟಾರ್ಥಸಂಸಿದ್ಧಿ ಸಂ।
ಭವಿಕುಂ ಪುಣ್ಯಾಳಿದಂಗೆ ಗಂಗೆ ಗಯೆ ಕೇದಾರಂ ಕುರುಕ್ಷೇತ್ರಮಂ।
ಬಿವರೊಳ್ ಪೇಸದೆ ಪಾರ್ವರಂ ಕವಿಲೆಯುಂ ಸ್ತ್ರೀಬಾಳರಂ ಲಿಂಗಿಯು।
ಪ್ಪವರಂ ಕೊಂದನವಂ ಸ್ವಗೋತ್ರಸಹಿತಂ ಬೀಳ್ಗುಂ ಮಹಾ-
ಘೋರದೊಳ್ ॥

(ಶಿಕಾರಿಪುರ, ಬಳ್ಳಿಗಾವಿ ೯೪ನೆಯ ಶಾಸನ, ೧೦೭೪)

ಅದೇ ತಾಲೂಕಿನ ೯೯ನೆಯ ಶಾಸನ (೧೧೧೩) ದಲ್ಲಿ
ಗಂಗಾಯಮುನಾ ಸಾಗರ।
ಸಂಗಮದೊಳ್ ಕೋಟಿಪಾರ್ವರುಂ ಕವಿಲೆಗಳುಂ ॥
ಲಿಂಗಿಗಳುಂ ಬಿರಸಳಿದಂ।
ಲಿಂಗಮನೀಧರ್ಮಮುಂ ಕರುತ್ತಳಿದಧಮಂ ॥
ಕವಿಲೆಗಳಂ ಕೋಟಿಯನೊಸೆ।
ದವನೀಸುರ ಕೋಟಿಗಿತ್ತನೀಧರ್ಮಕ್ಕು ॥
ದ್ಭವಮುಂ ಪಡೆದವನಾ ತೀ।
ರ್ಥವಿತತಿಯೊಳ್ ಲಿಂಗ ಲಿಂಗಿಜನ ಸನ್ನಿಧಿಯೊಳ್ ॥

ಇಲ್ಲಿ ಪಾರ್ವರಂ ಮತ್ತು ಲಿಂಗಿಗಳಂ ಎಂದು ಎರಡು ಪೂಜ್ಯ ಜನಾಂಗಗಳನ್ನು ಹೇಳಿದೆ. ಹಾಗಾದರೆ ಬ್ರಾಹ್ಮಣರ ಹೊರತು ಈ "ಬ್ರಾಹ್ಮಣೇತರ" ಪೂಜ್ಯರು ಯಾರು ?

ಇನ್ನೂ ಕೆಲವು ಶಿಲಾಲಿಪಿಗಳ ಫಲಶ್ರುತಿಯಲ್ಲಿ—

ಇವನೀಯಂದದೊಳೆಯ್ದೆ ಪಾಳಿಸಿದವರ್ಗಿಷ್ಟಾರ್ಥ ಸಂಸಿದ್ಧಿ ಸಂ।
ಭವಿಕುಂ ಕೊಂಡಳಿದಂಗೆ ಗಂಗೆ ಗಯೆ ಕೇದಾರಂ ಕುರುಕ್ಷೇತ್ರಮೆಂ।
ಬಿವರೊಳ್ ಪೇಸದೆ ಪಾರ್ವರಂ ಗೊರವರಂ ಗೋವೃಂದಮಂ
ಪೆಂಡಿರಂ।
ತವೆ ಕೊಂದಿಕ್ಕಿದ ಪಾಪಮೆಯ್ದುಗುಮವಂ ಬೀಳ್ಗುಂ ನಿರೋ-
ಧಂಗಳೊಳ್ ॥
(ಬೇಲೂರ ನಂ. ೫೮ನೆಯ ಶಾಸನ, ೧೧೪೦).

ಪ್ರಿಯದಿಂದಿಂತಿದನೆಯ್ದೆ ಕಾವ ಮನುಜಂಗಾಯುಂ
ಜಯಶ್ರೀಯುಮ।
ಕ್ಕೆಯಿದಂ ಕಾಯದೆ ಕಾಯ್ವ ಪಾಪಿಗೆ ಕುರುಕ್ಷೇತ್ರಂಗಳೊಳ್
ವಾರಣಾ॥
ಸಿಯೊಳೆಕ್ಕೋಟಿ ಮುನೀಂದ್ರರಂ ಕವಿಲೆಯುಂ ವೇದಾಢ್ಯರಂ
ಕೊಂದುದೊಂ।
ದಯಶಂ ಪೊರ್ದುಗುಮೆಂದು ಸಾರಿದಪುದೀ ತ್ರೈಲಾಕ್ಷರಂ
ಧಾತ್ರಿಯೊಳ್॥
(ಬೇಲೂರು ನಂ. ೫೩ನೆಯ ಶಾಸನ; ೧೧೭೩).

ಈ ಪದ್ಯಗಳಲ್ಲಿ 'ಲಿಂಗಿ'ಗಳೆಂಬುದಕ್ಕೆ ಬದಲಾಗಿ 'ಗೊರವರಂ' 'ಮುನೀಂದ್ರರಂ' ಎಂಬುದಾಗಿ ಹೇಳಿದೆ. ಅಂದ ಬಳಿಕ 'ಲಿಂಗಿಗಳು' ಎಂಬ ಶಬ್ದಕ್ಕೆ **ಲಿಂಗ** ರೂಪದಲ್ಲಿ ಸನಾತನ ಬ್ರಹ್ಮನನ್ನು ಅರ್ಚಿಸುವ ತಪಸ್ವಿಗಳೆಂದು ಅರ್ಥವಾಯಿತು. ಶಿಲಾಲಿಪಿಗಳ ಫಲಶ್ರುತಿಗಳಲ್ಲಿ ಹೀಗೆ 'ವೇದಾಢ್ಯರನ್ನೂ' 'ಎಳ್ಕೋಟಿ ಮುನೀಂದ್ರ'ರನ್ನೂ ಕೂಡಿಸಿ ಪೂಜ್ಯರೆಂದೂ, ಅವಧ್ಯರೆಂದೂ ಬಹಳವಾಗಿ ಹೊಗಳಿದ್ದು ಕಂಡುಬರುತ್ತದೆ. ಸೊರಬ ತಾಲೂಕಿನ ೨೭ನೆಯ ಶಾಸನದಲ್ಲಿ 'ನಿತ್ಯಜ್ಞಾನಾನಂದ ಪರಶಿವ ಸ್ವರೂಪಾವಲೋಕ ತತ್ತ್ವರೂಪರುಂ ಯತಿಸಾರ್ವಭೌಮರುಂ ಎಕ್ಕೋಟಿ ಸಮಯ ಚಕ್ರವರ್ತಿ ಸಪ್ತಾಹತ್ತರಿ ಸ್ಥಾನಾಚಾರ್ಯರುಂ (ಆದ)

ಕಾಳಾಮುಖ ವ್ರತಾನ್ವಯ।
ಶೀಲಗುಣಂ ಶಿವಕಥಾದ್ಯನೇಕ ಸ್ಮೃತ್ಯ॥

ಧಾರ್ಾಳಂಕಾರ ಸುವಾಕ್ಯಂ !

ಪಾಳಿತ ಸಜ್ಜನವಿನುತ ಯತಿ ಸರ್ವೇಶಂ ॥'

ಎಂಬುದಾಗಿ ಎಳ್ಕೋಟಿ ಮುನಿಗಳೆಂದರೆ ಕಾಳಾಮುಖ ಮುನಿಳೆಂದು ಹೇಳಿದೆ. ಈ ಕಾಳಾಮುಖ ಮುನಿಗಳಿಗೆ 'ಶಿವಾಗಮದೊಳ್ ನಿರತರ್ (ಅರಸಿಕೆರೆ ನಂ ೯೦)', 'ಲಾಕುಳಾಗಮ ಸಮಯ ಸಮುದ್ಧರಣರ್ (ಅ. ಕೆ. ೪೬)', 'ಶಿವಧರ್ಮಪ್ರತಿಪಾಲಕರ್ (ಹಾಸನ ನಂ. ೭೧)', 'ಅಸಂಖ್ಯಾತ ಮಹಾಗಣಂಗಳ್' (ಅ. ಕೆ. ೧೦೮), 'ಮಾಹೇಶ್ವರ' (ಶಿಕಾರಿಪುರ ೨೩೬) ಎನ್ನಲಾಗಿದೆ.

ಪ್ರಾಚೀನ ಮಾಹೇಶ್ವರರಲ್ಲಿ ಮುನಿಗಳಿಗೆ 'ಗೊರವ' ರೆಂದೂ, ಪೂಜಾರಿಗಳಿಗೆ 'ಜೀಯ 'ರೆಂದೂ ಉಪನಾಮಗಳಿದ್ದವಷ್ಟೆ. ಈಗಲೂ ಕೂಡ ಅದೇ ಹೆಸರುಗಳಿಂದ ಒಂದು ಜಾತಿಯು ಅಲ್ಲಲ್ಲಿಗೊಂದು ಮನೆತನವಾಗಿ ಉಳಿದುಕೊಂಡಿದೆ. ಇವರಿಗೆ ಉತ್ತರ ಕರ್ನಾಟಕದಲ್ಲಿ "ಗೊರವರು" ಅಥವಾ "ಗೊರ್ರ" ಎಂದೂ ದಕ್ಷಿಣ ಕರ್ನಾಟಕದಲ್ಲಿ "ಜೀರರು" ಅಥವಾ "ಜೀರ್ರ" ಎಂತಲೂ ಕರೆಯುವುದುಂಟು. ಇವರು ಜನಿವಾರವನ್ನು ಹಾಕುವರು, ವಿಭೂತಿಯನ್ನು ಧರಿಸುವರು, ಶಿಖೆಯನ್ನೂ ಇಡುವರು.

ಹೊಸ ಪಂಥದಲ್ಲಿ ಸೇರದೆ ಇನ್ನೂ ಹೊರಗೆ ಉಳಿದ ಆ ಮಾಹೇಶ್ವರ ಧರ್ಮದ ಭಗ್ನಾವಶೇಷವನ್ನು ಈಗಲೂ ಕಾಣಬಹುದು. ಇವರೆಲ್ಲರೂ ಈಗಿನ ಗುರುವರ್ಗದವರಲ್ಲಿ ಸೇರಿದರು

(೩) ಶ್ರೀಮಾನ್. ಡಿ. ಎಲ್ ನರಸಿಂಹಾಚಾರ್ಯರು "ಜಯ ಕರ್ನಾಟಕ" ಸಂಪುಟ ೧೩ ಸಂಚಿಕೆ ೩ ರಲ್ಲಿ "ಲಿಂಗಾರ್ಚನೆ, ಲಿಂಗ ಧಾರಣೆ" ಎಂಬ ಲೇಖವನ್ನು ಬರೆದು ಈ ಕೆಳಗಿನಂತೆ ಅಭಿಪ್ರಾಯ ತಾಳಿರುವರು.

"ಷಿಕಾರಿಪುರ ನಂ. ೧೨೩ನೆಯ ಶಾಸನದಲ್ಲಿ ಮಹಾಪ್ರಧಾನ ಕೇಶಿಮಯ್ಯ ದಂಡನಾಯಕನು 'ತಮ್ಮ ಆರಾಧ್ಯರಪ್ಪ ಲಾಕುಳಾಗಮ....ರುಂ ಬಲಿಪುರದ ದಕ್ಷಿಣ ಕೇದಾರೇಶ್ವರ ದೇವರ ಪಾದಪದ್ಮಾರಾಧಕರುಮಪ್ಪ ಶ್ರೀಮತ್ರಾಜಗುರು ವಾಮಶಕ್ತಿದೇವರ ಕಾಲಂ ಕರ್ಚಿ' ದತ್ತಿಯನ್ನು

ಬಿಟ್ಟಂತೆ ಹೇಳಿದೆ. ಆದ್ದರಿಂದ ಕಾಳಾಮುಖ ಗುರುಗಳಿಗೆ ಆರಾಧ್ಯ ಎಂದು ಕರೆಯುವ ರೂಢಿಯಿತ್ತೆಂದು ತೋರುತ್ತದೆ. ಬಸವಣ್ಣನವರು ಈ ಆರಾಧ್ಯ ಕುಲದಲ್ಲಿಯೇ ಜನಿಸಿ ಆ ಮತದಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಿ ವೀರಶೈವ ಮತವನ್ನು ಉದ್ಧಾರ ಮಾಡಿದರೆಂದು ತೋರುತ್ತದೆ. ಅಂತೂ ಲಿಂಗಧಾರಣೆ ಬಸವಣ್ಣನವರಿಗಿಂತ ಹಿಂದೆಯೇ ಇದ್ದಿರಬೇಕೆಂಬ ವಿಷಯ ವಿದಿತವಾಗದಿರಲಾರದು. "

ಮೇಲೆ ಹೇಳಿದ ಪಂಡಿತರು ಸಾಧಾರಣವಾಗಿ ಶಕ್ತಿ, ಜೀಯ, ಗೊರವ ಮುಂತಾದ ಉಪಪದಗಳನ್ನು ಅನುಲಕ್ಷಿಸಿ ಅಭಿಪ್ರಾಯಪಟ್ಟಿರುವಂತೆ ತೋರುತ್ತದೆ.

ಕಾಳಾಮುಖರು ಘನವಿದ್ವಾಂಸರೆಂದು ವರ್ಣಿಸಿದ್ದುದು ಹಿಂದಿನ ಪ್ರಕರಣದಲ್ಲಿ, ಅವರ ದಾರ್ಶನಿಕ ಮತವನ್ನು ನಿರ್ಣಯಿಸುವಾಗ ಉದಹರಿಸಲಾಗಿದೆ ಋಗ್, ಯಜುಸ್ಸಾಮಾಥರ್ವಣ ವೇದ ವೇದಾರ್ಥ ಪ್ರವೀಣರೆಂದೂ, ಮನುಮಾರ್ಗಚರಿತರೆಂದೂ ವರ್ಣನೆ ಬಂದಿರುವುದೇನೊ ನಿಜ. ಆದರೆ ಕನ್ನಡ ಶಾಸನಗಳನ್ನು ವಿಮರ್ಶಿಸುವಾಗ ನಾವು ಒಂದು ಮಾತನ್ನು ಲಕ್ಷ್ಯದಲ್ಲಿಡಬೇಕಾದುದು ಅವಶ್ಯಕ. ಶಾಸನಗಳಲ್ಲಿ ಬಂದಿರುವ ರಾಜರ ವರ್ಣನೆಯಾಗಲಿ, ಬ್ರಾಹ್ಮಣರ ವರ್ಣನೆಯಾಗಲಿ, ಬಣಜಿಗರ ವರ್ಣನೆಯಾಗಲಿ, ಕಾಳಾಮುಖರ ವರ್ಣನೆಯಾಗಲಿ, ಅತ್ಯುಕ್ತಿಗಳಿಂದ ತುಂಬಿರುವವು.

ನೇಡಿಂಬದ (ಕಲ್ಬುರ್ಗಿ ಜಿಲ್ಲೆ) ಅಪ್ರಕಾಶಿತ ಶಾಸನ ಒಂದರಲ್ಲಿ ಬ್ರಾಹ್ಮಣರ ವರ್ಣನೆಯಿದೆ. " ಯಮನಿಯಮ ಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾನ ಪರಾಯಣರುಂ, ಜಪತಪ ಶೀಲಸಂಪನ್ನರುಂ, ನುಡಿದು ಮತ್ತೆನ್ನರುಂ, ಕಾಂಚೀಪುರ ಕವಾಟಭೇದನಾವಿಕಾರ ಹೋಮಸಾಧಕರುಂ, ವಿರೋಧಿಕುಲಾರಣ್ಯದಾವಪಾವಕರುಂ, ಚತುರ್ವೇದ ಪಾರಾವಾರ ಪಾರಗರುಂ, ಬಹುವಿಧ ವಚನ ರಚನಾ ಪ್ರವೀಣರುಂ, ಚತುಷ್ಷಷ್ಟಿ ಕಳಾನ್ವಿತ ವಸುಮತಿಗೀರ್ವಾಣರುಂ, ಹೋಮಕುಂಡಳಜ್ವಾಳನೀ ದೇವಾಕರ್ಷರುಂ, ಸಮಸ್ತ ವಿದ್ಯಾವಿಶೇಷಣರುಂ, ಶರಣಾಗತವಜ್ರಪಂಜರರುಂ, ವೈರಿದಿಕ್ಕುಂಜರರುಂ, ಶ್ರೀನಾರಾಯಣದೇವ ಪಾದಪಂಕಜಭ್ರಮರರುಮಪ್ಪ ಶ್ರೀಮನಾದಿಯಗ್ರಹಾರಂ ಸೇಡಿಂಬದಶೇಷ ಮಹಾಜನರುಂ ಮುನ್ನೂರು

ಸ್ವಾಮಿಗಳ್ ಸ್ಥಿರಂಜೀಯಾತ್"( ಇದರ ಪ್ರತಿಯನ್ನು ಶ್ರೀ. ಪಿ. ಬಿ.ದೇಸಾಯಿಯವರು ಕೊಟ್ಟಿರುವರು). ಬ್ರಾಹ್ಮಣರ ವರ್ಣನೆಯಿದು.

" ಸ್ವಸ್ತಿ ಸಮಸ್ತ ಭುವನ ವಿಖ್ಯಾತ ಪಂಚಶತ ವೀರಶಾಸನ ಲಬ್ಧಾನೇಕ ಗುಣಗಣಾಲಂಕೃತ, ಸತ್ಯಶೌಚಾಚಾರ, ಚಾರುಚಾರಿತ್ರ ನಯ ವಿನಯ ವಿಜ್ಞಾನ ವೀರ ಬಳಂಜು ಧರ್ಮಪ್ರತಿಪಾಳಕ ವಿಶುದ್ಧ ಗುಡ್ಡ ಧ್ವಜವಿರಾಜಮಾನ, ಸಾಹಸಲಕ್ಷ್ಮೀ ಸಮಾಲಿಂಗಿತ ವಿಶಾಲವಕ್ಷ ಸ್ಥಳರುಂ, ಸಾಹಸದಿಂ ಕಾರ್ತ್ತಿಕೇಯನಂ, ಶೌರ್ಯದಿಂ ವೈನತೇಯನಂ, ಶೌಚದಿಂ ಗಾಂಗೇಯನಂ, ಸತ್ಯದಿಂ ರಾಧೇಯನಂ, ದಾನದಿಂ ವರಸುರಭೂಜಮುಂ ಛಲದಿಂ ಕುರುರಾಜನಂ, ಧರ್ಮದಿಂ ಯುಧಿಷ್ಠಿರನಂ ಧೈರ್ಯದಿಂ ಮೇರುವಿನಂ, ಗಾಂಭೀರ್ಯದಿಂ ರತ್ನಾಕರಮಂ, ಕ್ಷಮೆಯಿಂ ಧರಿತ್ರಿಯಂ, ಶರಣಾಗತ ವಜ್ರಪಂಜರಮುಂ ಪೋಲ್ತು, ವಾಸುದೇವ ಖಂಡಲಿ ಮೂಳಭದ್ರ ವಂಶೋದ್ಭವರುಂ, ಭಗವತಿ ದೇವಿಲಬ್ಧ ವರಪ್ರಸಾದರುಮೆನಿಸಿದ ದ್ವಾತ್ರಿಂಶದ್ವೇಳಾಪೂರಮುಮಷ್ಟಾದಶ ಪಟ್ಟಣಮುಂ ಚೌಷಷ್ಟಿ .... ಗೈದಿ .... ಗವಱಿಗರು ಗಾತ್ರಿಗರುಂ, ವೇಳಾಕಾರರುಂ, ಬೀರರುಂ, ಬೀರವಣಿಗರುಂ, ಗವುಂಡರುಂ, ಗಾವುಂಡಸ್ವಾಮಿಗಳು, ಅಯ್ಯಾವಳೆಪುರ ಪರಮೇಶ್ವರರುಮಪ್ಪ ಶ್ರೀಮದಯ್ಯಾವರ್ವರ ವಿಖ್ಯಾತಿಯೆಂತೆಂದಡೆ........"

(ಹಿರೇಹಡ ೧೨ S. I. Insce. Mad No. 118 1087 A. D.)

ಬಣಜಿಗರ ವರ್ಣನೆಯಿದು. ಇದರಂತೆ ರಾಜರ ವರ್ಣನೆಯಂತೂ ಪ್ರತಿಯೊಂದು ಶಾಸನದಲ್ಲಿ ಕಂಡುಬರುತ್ತದೆ. ಹಿಂದಿನ ಪ್ರಕರಣದಲ್ಲಿ ಕೊಟ್ಟಿರುವ ಬಳ್ಳಿಗಾವೆಯ ಪಂಚಲಿಂಗ ದೇವಸ್ಥಾನದ ಅಧಿಪತಿಯಾದ ಲಕುಲೀಶನ ವರ್ಣನೆ, ಸೊರಬ ೨೭೫ ನೆಯ ಶಾಸನದ (ಕುಪ್ಪಟೂರು, ಶಿವಮೊಗ್ಗ ಜಿಲ್ಲೆ) ರುದ್ರಶಕ್ತಿದೇವರ ವರ್ಣನೆಗಳೂ ಅತ್ಯುಕ್ತಿಯಿಂದ ತುಂಬಿಕೊಂಡಿವೆ. ಕಾವ್ಯಮಯವಾಗಿ ಅತಿಶಯೋಕ್ತಿಗಳಿಂದ ಹೊಗಳುವುದು ಆಗಿನ ಕಾಲದ ರೂಢಿಯಾಗಿದ್ದಿತೆಂದು ತೋರುವುದು. ಪ್ರತಿಯೊಬ್ಬರು ತಮ್ಮ ತಮ್ಮ ಜಾತಿ, ಉದ್ಯೋಗಕ್ಕನುಸರಿಸಿ ವೀರ, ಶೌರ್ಯದ ಮಾತುಗಳನ್ನೇ ಹೇಳಿಕೊಳ್ಳುವರು. ವೀರರಸಕ್ಕೆ ಪ್ರಾಧಾನ್ಯವಿದ್ದ ಕಾಲವದು. ಒಂದೊಂದು ಕಾಲದಲ್ಲಿ ಒಂದು ಗುಣವು ಪ್ರಾಧಾನ್ಯವಾಗಿ ಜನರನ್ನು ಆವರಿಸಿರುತ್ತದೆ. ರಾಜ್ಯಗಳಿಲ್ಲದ ಕಾಲದಲ್ಲಿ ಭಕ್ತಿಯ ಬೆಲೆ ಹೆಚ್ಚಿದೆ ಈಗಿನ

ಕಾಲದಲ್ಲಿ ರಾಷ್ಟ್ರೀಯಭಾವನೆ, ಪ್ರಾಂತೀಯತೆ, ದೇಶಪ್ರೇಮದ ಮಾತು ಗಳೆ ಜನರ ಬಾಯಿಯಲ್ಲಿ. ಒಂದೊಂದು ಕಾಲದಲ್ಲಿ ಒಂದು ಗುಣ, ಒಂದು ಭಾವನೆಗೆ ಬೆಲೆ. ಉಳಿದ ಗುಣಗಳು ಅಪ್ರಾಧಾನ್ಯವಾಗಿರುತ್ತವೆ. ಆಗಿನ ಕಾಲದಲ್ಲಿ ಯತಿಗಳನ್ನು ವರ್ಣಿಸುವಾಗ, ಕಾಮನನ್ನು ಜಯಿಸಿದ ನೆಪದಿಂದ, ವೀರ, ಶೌರ್ಯದ ಮಾತುಗಳೇ ಬಂದಿರುವವು. ವೈರಿಗಳನ್ನು ಸದೆಬಡೆಯುವ ವೀರರಸಪ್ರಧಾನವಾದ, ಪ್ರತಿ–ಪಕ್ಷಗಳನ್ನು ಖಂಡಿಸುವ ಮಾತುಗಳು ಹೇರಳವಾಗಿ ಬರುತ್ತವೆ. ಆ ಕಾಲದ ಮಹಿಮೆಯಿದು.

ಈ ಮಾತನ್ನು ಲಕ್ಷದಲ್ಲಿಟ್ಟುಕೊಂಡು ಶಾಸನಗಳಲ್ಲಿಯ ಮಾತು ಗಳನ್ನು ಅಳೆದು ಕಾಳಾಮುಖರ ವರ್ಣನೆಯಿಂದ ನಿಜವಾದ ಐತಿಹಾಸಿಕ ಸಂಗತಿಗಳೆಂದು ನಿಷ್ಕರ್ಷಿಸುವಾಗ ಜಾಗರೂಕರಾಗಿರಬೇಕಾಗುವುದು. ಕಾಳಾಮುಖರ ಮಠಗಳನ್ನು ಇದೇ ದೃಷ್ಟಿಯನ್ನಿಟ್ಟು ನೋಡಬೇಕಾಗು ವುದು; ಅವು ವಿಶ್ವವಿದ್ಯಾಲಯಗಳೆಂದು ನಾವು ಅರ್ಥ ಮಾಡಿಕೊಳ್ಳು ವುದು ಸರಿಯಾಗಲಾರದು. ಈ ಕಾಳಾಮುಖ ಗುರುಗಳು ತಪಸ್ವಿಗಳು, ವ್ರತಿಗಳಾಗಿದ್ದುದೇನೋ ನಿಜ. ಆದರೆ ಇವರ ವರ್ಣನೆಯಂತೆ ವಿಶ್ವವಿದ್ಯಾ ಲಯದ ಘನವಿದ್ವಾಂಸರೇನೂ ಅಲ್ಲ ಇವರು ಬರೆದ ಸಂಸ್ಕೃತ ಗ್ರಂಥ ಗಳಾಗಲಿ ಕನ್ನಡ ಗ್ರಂಥಗಳಾಗಲಿ ಉಪಲಬ್ಧವಿಲ್ಲ ಅವರು ಹೇಳಿಕೊಂಡಿ ರುವಂತೆ ಘನವಿದ್ವಾಂಸರಾಗಿದ್ದರೆ ಒಂದಾದರೂ ಕುರುಹು ಉಳಿಯ ಬಾರದೇ ? ಅದೇ ಆಗಿನ ಕಾಲದ ಜೈನರು ಬರೆದ ಸಂಸ್ಕೃತ, ಕನ್ನಡ ಗಳಲ್ಲಿಯ ಉದ್ದಾಮ ಗ್ರಂಥಗಳು ದೊರೆಯುತ್ತವೆ. ಒಬ್ಬಿಬ್ಬರು ಶ್ರೇಷ್ಠ ಪಂಡಿತರು ಇದ್ದಿರಬಹುದು. ಕೇವಲ ವಿದ್ವತ್ತೆಯ ವರ್ಣನೆಯಿಂದ ಇವರು ಬ್ರಾಹ್ಮಣರಾಗಿದ್ದರೆಂದು ಊಹಿಸುವುದು ಸರಿಯಾಗಲಾರದು.

## ಕಾಳಾಮುಖರು ಬ್ರಾಹ್ಮಣರಲ್ಲ

ಶ್ರೀಮಾನ್ ಗಲಗಲಿ ಚೆನ್ನಮಲ್ಲಪ್ಪನವರು ಈ ಲಾಕುಳಶೈವರಾದ ಕಾಳಾಮುಖರು ಬ್ರಾಹ್ಮಣರಲ್ಲವೆಂಬ ಶಾಸನಗಳ ಫಲಶ್ರುತಿ ಪದ್ಯಗಳನ್ನು ಉದಹರಿಸಿ ದೃಢಪಡಿಸಿರುವರು. ಅವರು ತಪೋಧನರನ್ನೂ, ವೇದಾಢ್ಯ ರನ್ನೂ, ಕಪಿಲೆ, ಸ್ತ್ರೀ, ಬಾಳರನ್ನೂ ಕೊಂದ ಪಾಪ ತಗಲುವ ಪದ್ಯಗಳನ್ನಷ್ಟೇ ಆರಿಸಿಕೊಂಡಿರುವರು. ಅದರಂತೆ ಧರ್ಮದತ್ತಿಯನ್ನು ಪಾಲಿಸಿದವರಿಗೆ

ಬರುವ ಪುಣ್ಯವನ್ನು ಹೇಳುವಾಗ ಕೂಡ ಎರಡು ಜನಾಂಗಗಳನ್ನು ಬೇರೆ ಬೇರೆಯಾಗಿ ಅನೇಕ ಶಾಸನಗಳಲ್ಲಿ ಹೇಳಲಾಗಿದೆ. ಇಷ್ಟೆಯಲ್ಲ, ಈ ಎರಡು ಜನಾಂಗಗಳಲ್ಲಿಯ ಆಚಾರವೈಶಿಷ್ಟ್ಯದ ಮಾತುಗಳು ಶಾಸನಗಳಲ್ಲಿ ಬರುತ್ತವೆ. ಅವು ಈ ರೀತಿ: "ಇಂತೀ ಧರ್ಮ್ಮಮನಾರೊರ್ವ್ವರು ಪ್ರತಿಪಾಳಿಸಿದವರ್ಗ್ಗೆ ಗಂಗೆ, ವಾರಣಾಸಿ, ಕುರುಕ್ಷೇತ್ರದೊಳಂ ಸಾಸಿರ ಕವಿಲೆಯುಮಂ ಸಾಸಿರಹೊಂನ್ನುಮಂ ವೇದಪಾರಗರಪ್ಪ ಬ್ರಾಹ್ಮಣರ್ಗ್ಗೆ ಕೊಟ್ಟ ಫಳ" (ಚಿತ್ರದುರ್ಗ ನಂ. ೪೭; ೧೦೬೭ A. D. ಇಂಗಳೇಶ್ವರ No. 7 & 14; Inscriptions in Northern Karnataka). ಇನ್ನೊಂದರಲ್ಲಿ "ಈ ಧರ್ಮಮಂ ಸ್ವಧರ್ಮದಿ ಪ್ರತಿಪಾಳಿಸಿದವರ್ಗ್ಗೆ ವಾರಣಾಸಿ, ಪ್ರಯಾಗೆ,....ತೀರ್ಥ, ಕುರುಕ್ಷೇತ್ರಗಳಲು ಸಾವಿರ ಕವಿಲೆಯಂ ಕೋಡು, ಕೊಳಗುಮಂ ಸುವರ್ಣದಿಂ ಕಟ್ಟಿಸಿ ವೇದಪಾರಗರಪ್ಪ ಬ್ರಾಹ್ಮಣರ್ಗ್ಗೆ ಕೊಟ್ಟ ಫಳಮಕ್ಕುಂ" (ನಿಡಗುಂದಿ ಶಾಸನ ನಂ. ೫ ಮತ್ತು ಇಂಗಳೇಶ್ವರ ಶಾಸನ ನಂ. ೧೪). ಬ್ರಾಹ್ಮಣರಲ್ಲಿ ಸುವರ್ಣ ದಕ್ಷಿಣೆಯ ದಾನದ ಮಹತ್ವವಿದೆ. ರಾಜರು ಯಜ್ಞಗಳಲ್ಲಿ ಸುವರ್ಣ ಮತ್ತು ದಕ್ಷಿಣೆ ಬ್ರಾಹ್ಮಣರಿಗೆ ಕೊಟ್ಟ ಉದಾಹರಣೆಗಳು ಮಹಾಭಾರತಾದಿ ಪ್ರಾಚೀನ ಗ್ರಂಥಗಳಲ್ಲಿ ಹೇರಳವಾಗಿ ಬರುತ್ತವೆ. ಅದೇ ಪರಂಪರೆಯಂತೆ ಇಂದಿಗೂ 'ಸುವರ್ಣ ದಕ್ಷಿಣೆ'ಯ ರೂಢಿಯಿದೆ ಅದರಂತೆ ಶಿವಯೋಗಿಗೆ ಅನ್ನದಾನದ ಮಹತ್ವವಿದ್ದುದು ತಿಳಿದುಬರುವುದು

ವಿಜಯನಗರದ ಬುಕ್ಕರಾಯನಿಗೂ, ಗೋವೆ, ಚಂದ್ರಗುತ್ತಿಗಳಿಗೆ ಅಧಿಕಾರಿಯಾಗಿದ್ದ ಮಾಧವಮಂತ್ರಿಗೂ ಗುರುವಾಗಿದ್ದ ಕ್ರಿಯಾಶಕ್ತಿಯು ಈ ಕಾಳಾಮುಖ ಸಂಪ್ರದಾಯದವನು ಆಗಿದ್ದಿರಲಾರನೆಂದು ನಮ್ಮ ಊಹೆ. ಯಾಕೆಂದರೆ ಇದೇ ಮಾಧವ ಮಂತ್ರಿಯು "ಸೂತಸಂಹಿತೆ"ಗೆ ವ್ಯಾಖ್ಯಾನ ಬರೆದಿರುವನು "ಸೂತಸಂಹಿತೆ" ಯಲ್ಲಿ "ಶಾಂಭವಿ ಮತ್ತು ಕಾಳಾಮುಖ" ದೀಕ್ಷೆ ಹೊಂದಿದವರನ್ನು ಬ್ರಾಹ್ಮಣಾಧಮರೆಂದು ನಿಂದಿಸಲಾಗಿದೆ. ಈ ಕ್ರಿಯಾಶಕ್ತಿಯು ಕಾಳಾಮುಖನಾಗಿದ್ದ ಪಕ್ಷದಲ್ಲಿ ಮಾಧವ ಮಂತ್ರಿಯು ಇಂಥ ವ್ಯಾಖ್ಯಾನವನ್ನು ಬರೆಯುವುದಕ್ಕೆ ಉದ್ಯುಕ್ತನಾಗುತ್ತಿದ್ದಿಲ್ಲ ಕಾಳಾಮುಖ ಗುರುವಿನ ಶಿಷ್ಯನಾದವನು, ತನ್ನ ಗುರುವಿನ ಸಂಪ್ರದಾಯವನ್ನು ನಿಂದಿಸಿದ ಗ್ರಂಥಕ್ಕೆ ವ್ಯಾಖ್ಯಾನ ಬರೆಯುವುದು ಹೇಗೆ ಕೂಡುವುದು? ಶಕ್ತಿ ಮತ್ತು ಜೀಯ ಮುಂತಾದ ಉಪಪದಗಳು ಕಾಳಾ

ಮುಖರಲ್ಲಿ ರೂಢವಾಗಿದ್ದು, ಅದೇ ತರದ ಉಪಪದವಾದ "ಶಕ್ತಿ" ಶಬ್ದ ದಿಂದ ಈ ರೀತಿ ಊಹಿಸುವುದಕ್ಕೆ ಬರುವಂತಿಲ್ಲ. ಯಾಕಂದರೆ ಸೂತ ಸಂಹಿತೆಯು ಶುದ್ಧವೈದಿಕ ಶೈವಸಂಪ್ರದಾಯ ಪ್ರಮಾಣಗ್ರಂಥವೆಂದು ನಿಜಗುಣಶಿವಯೋಗಿಯು ತನ್ನ ವಿವೇಕಚಿಂತಾಮಣಿಯಲ್ಲಿ ಸ್ಪಷ್ಟವಾಗಿ ಹೇಳಿರುವನು. ಈ ನಿಜಗುಣಶಿವಯೋಗಿಯು ಶೈವಾಗಮ ಶಾಸ್ತ್ರಗಳಲ್ಲಿ ಅಸಾಧಾರಣ ಪಾಂಡಿತ್ಯವುಳ್ಳವನು. ಈ ಎಲ್ಲ ಕಾರಣಗಳಿಂದ ಮಾಧವ ಮಂತ್ರಿಯ ಗುರುವಾದ ಕ್ರಿಯಾಶಕ್ತಿಯು "ಕಾಳಾಮುಖಗುರು" ಎನ್ನು ವುದಕ್ಕೆ ಹಿಂಜರಿಯಬೇಕಾಗುತ್ತದೆ. ಇನ್ನೊಂದು ಸಂಗತಿಯೆಂದರೆ, ಮೇಲೆ ಹೇಳಿದ ಹೊಂಬಳದ ಶಾಸನದ ಶಿರೋಭಾಗದಲ್ಲಿ —

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ।
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥

ಎಂಬ ಸಾಮಾನ್ಯವಾದ ಸ್ತುತಿಯ ನಂತರದಲ್ಲಿ —

ಯಸ್ಯೋನ್ಮೇಷನಿಮೇಷಾಭ್ಯಾಂ ಜಗತಃ ಪ್ರಲಯೋದಯಃ ।
ತಂ ಶಕ್ತಿಚಕ್ರವಿಭವಂ ಪ್ರಭವಂ ಶಂಕರಂ ನಮಃ ॥

ಎಂದು ಎರಡನೇ ಶ್ಲೋಕವಿದೆ ಈ ಶ್ಲೋಕವು ಮೂಲ ಎಲ್ಲಿ ಯದೆಂಬುದು ಗೊತ್ತಾಗುವುದಿಲ್ಲ. ಆದರೆ ಇದೇ ಶ್ಲೋಕವನ್ನು ಕ್ಷೇಮ ರಾಜನು 'ಸ್ಪಂದನಿರ್ಣಯ' ಎಂಬ ಗ್ರಂಥದ ಪ್ರಾರಂಭದಲ್ಲಿ ಬರೆದು ಅದ್ವಯಪರವಾಗಿ ವ್ಯಾಖ್ಯಾನ ಮಾಡಿರುವನು. ಹೊಂಬಳ ಶಾಸನದಲ್ಲಿ ವರ್ಣಿತರಾದ 'ಬೊಂತೆ' ಮುನಿ ಮುಂತಾದವರು ಕಾಳಾಮುಖರಾಗಿರು ವರು. ಇಷ್ಟರಿಂದಲೇ ಪರ್ವತಾವಳಿಯ ಬೆಳ್ಳಿಯಸಂತಾನದ ಕಾಶ್ಮೀರಿ ಗಳಾಗಲಾರರು. ಶಕ್ತಿತತ್ತ್ವವು ಶೈವ–ಮಾಹೇಶ್ವರರಲ್ಲಿ ಸಾಮಾನ್ಯವಾದ ವಿಷಯವು.

ಇವಲ್ಲದೆ ಕಾಶ್ಮೀರದೇವ, ಕಾಶ್ಮೀರಮುನಿ ಮುಂತಾದ ಹೆಸರುಗಳು ಹಲಕೆಲ ಶಾಸನಗಳಲ್ಲಿ ಉಕ್ತವಾಗಿರುವುದರಿಂದ, ಎಲ್ಲ ಕಾಳಾಮುಖರು ಕಾಶ್ಮೀರದಿಂದ ಕರ್ನಾಟಕಕ್ಕೆ ಬಂದವರೆಂದು ಊಹಿಸುವುದೂ ಸರಿಯಲ್ಲ. ಯಾಕಂದರೆ ಕಾಳಾಮುಖರು ಬೇರೆ ಬೇರೆ ಸಂತಾನದವರೆಂದು ಅನೇಕ

ಗುರುಪರಂಪರೆಯವರ ಪೀಳಿಗೆಗಳನ್ನು ಹೇಳಲಾಗಿದೆ. ಈ ಕೆಳಗೆ ಕೊಟ್ಟಿರುವ ಉದಾಹರಣೆಗಳನ್ನು ನೋಡಬಹುದು.

(೧) ಕಾಳಾಮುಖರ್.... ಪೊಗಳಲು ಚೆಲ್ವಾದುದಾ ಪರ್ವತಾವಳಿಯನಿಲ್ಲೀಶಾನಶಕ್ತಿಬ್ರತೀಂದ್ರಂ ಮಿಗೆ ವಾಣೀಕಾಂತೆಯಂ ಕೂರಿಸಿ ತಪಮೆ ಧನಂ ತಾನೆನಲು.... (ಬೇಲೂರ ನಂ. ೧೧೭; ೧೦೪೭ A. D.).

(೨) ಅಂತೆನಿಸಿದ ಪೊಂಬಟಿಲೊಳ್ ।
ಬೊಂತೆಯಮುನಿ ಕಾಲಾಮುಖ ಮುನೀಶ್ವರನತಿ ನಿ ॥
ಶ್ಚಿಂತಾತ್ಮನಾಗಿ **ಬೆಳ್ಳೆಯ ।**
ಸಂತಾನಂ ನೆಗೞ್ದ ಪರ್ವತಾವಳಿಯುದಿರ್ಪಂ ॥

(೩) ಕಾಳಾಮುಖ ಸಮಯ ಸರೋವರ ರಾಜಹಂಸಲಾರ್ಕುಳ ಸಿದ್ಧಾಂತ ನೈಯಾಯಿಕ ನಳಿನೀದಿವಾಕರರ್, ಮಾಧ್ಯಾಹ್ನ ಕಲ್ಪವೃಕ್ಷರ್, ಗುರುಕುಳ ಸಮುದ್ಧರಣರ್, ಶ್ರೀ **ಶೈಲ ಪಶ್ಚಿಮದ್ವಾರ ತೋರಣರ್, ಮಲ್ಲಿಕಾರ್ಜುನ ದೇವದರ್ಶನ ಕಾರಣಪುರುಷರ್ ಕಿಟ್ಟಿಗಾವೆಯ ಸಂಬಂಧಿ ಮೊಸಂಗಿಯ** ಬ್ರಹ್ಮೇಶ್ವರದಾಚಾರ್ಯರ್ ಗಂಗರಾಶಿ ಭಟ್ಟಾರಕರ ಶಿಷ್ಯರ್ ಶ್ರೀಮತ್ ಸುರೇಶ್ವರ ದೇವರ್ಗ್ಗೆ (S I. Ins. Mad. No. 119, 1057 A. D.).

(೪) ಶಕ್ತಿಪರಷೆ .... ... ಈಶ್ವರಯ್ಯಗೆ ಕಾಲ್ಚಂ ಕರ್ಚಿ (ಸೊರಬ ನಂ. ೭೦. ಶ್ರೀಕನ್ನರ ದೇವನ ಕಾಲ)

(೫) **ಮುದಿನೀರ ತೀರ್ಥದ ರಾಮೇಶ್ವರದ ಮುಲೆಯಾಳ ಪಂಡಿತ ದೇವರ ಸಂತತಿ,** ಈ ಸ್ಥಾನದ ಲಕುಲೀಶ್ವರ ಪಂಡಿತರ ಮಠದ ತಪೋಧನರ್ಕಂ, ವಿದ್ಯಾರ್ಥಿಗಳಶನಾಚ್ಛಾದನಕ್ಕಂ. (ಹುವ್ವಿನಹಡಗಲಿ No 135 Md. Ins. 1071 A D.).

(೬) ವಿಶ್ವಮುನಿಬೃಂದವಂದಿತ ಚರಣಾರವಿಂದ ಶ್ರೀಮಲ್ಲಕುಳೀಶ ಮುಖಕಮಳವಿನಿರ್ಗತ ಶಾಸ್ತ್ರಾರ್ಥಸದ್ಭಾವಾಭಿಜ್ಞರ್, ಯಮನಿಯ

ಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಜಪಸಮಾಧಿ ಸಂಪನ್ನರಪ್ಪ ಕೋಗಳಿಯಯ್ಶೂಱ ಮಠಾಧಿಪತಿಗಳಪ್ಪ ಸಿಂಹಪರ್ಷೆಯ **ಶ್ರೀಮನ್ಮಲೆಯಾಳಪಂಡಿತ** ದೇವರ ಶಿಷ್ಯರ್ ಜ್ಞಾನೇಶ್ವರ ಪಂಡಿತರ ಶಿಷ್ಯರ್ ಶ್ರೀಮತ್ಸೋಮೇಶ್ವರ ಪಂಡಿತರ್ಗೆ. (ಮುತ್ತಗೆಯ ಶಾಸನ, ಇಂಗಳೇಶ್ವರ No. 14 ಮತ್ತು Mad. Inscriptions No. 101; ಮೊರಗಿರಿ, ಹಡಗಲಿ, 1045 A. D).

(೭) **ಶ್ರೀಪರ್ವತದ ಅಗಸ್ತ್ಯೇಶ್ವರ ಸಂತತಿಯ ಮಠಮಿಲ್ಲಿಯ ಮಂಡಳಿಕ ತಪೋಧನರು** ನಿಯಮಸ್ಥರು, ಶಿವಾಚಾರರಪ್ಪುದುಮಿನ್ನಿದು ನೈಷ್ಠಿಕಸ್ಥಾನ (S. I Ins. Mad. No. 128; 1065 A D.)

(೮) ಮಲೆಯಾಳದೇವರ ಸಂತತಿ (Mad. Inscriptions No. 135, 1077 A D )

(೯) ಧರೆಪೊಗಳೆ ಮೋಲಾನ್ವಯ ಪರಿರಾಜಿತ **ಸಿಂಹ**.... ಮಂಡಳಿಕ ಮಲೆಯಾಳರ ಶಿಷ್ಯ ಪ್ರತಿಶಿಷ್ಯನ್ನಿರ್ಗರವದ್ಯಂ ಧರ್ಮರಾಶಿ ಮುನಿಪೋತಂ (ಇಂಗಳೇಶ್ವರ ನಂ. ೧೪, ೧೧೭೭ A. D. ಸೋಮನಾಥ ಗುಡಿ).

(೧೦) **ಶಕ್ತಿಪರ್ಷೆಯ ಭುಜಂಗಾವಳಿಗೆ ಸೇರಿದ ಇಟ್ಟಿಗೆಯ ಸಂತತಿ** (ಸೊರಬ ನಂ. ೭೦).

(೧೧) ಉಭಯಕುಲಶುದ್ಧರಪ್ಪ ಶ್ರೀ **ಕಾಳಾಮುಖಮುನಿಯ ಸಂಬಂಧ ಶ್ರೀಮತುರಾಯ ರಾಜಗುರು** ಸರ್ವೇಶ್ವರ ದೇವರ್.

(೧೨) ಗುರುಕುಳ ಸಮುದ್ಧರಣರುಂ **ಕಾಶ್ಮೀರದೇವ ಸಂತಾನವಾರ್ಧಿವರ್ಧನ ಸುಧಾಕರರುಮು**ಮಳ ಗುಣಾಕಾರರುಮಪ್ಪ ಲಕುಳೀಶ್ವರ ಪಂಡಿತರ ಸಂತಾನವೆಂತೆನೆ (Mad. Inscriptions. No. 165-1019)

(೧೩) **ಮುದಿನೀರ ತೀರ್ಥದ ರಾಮೇಶ್ವರದ ಮಲೆಯಾಳ ಪಂಡಿತ ದೇವಸಂತತಿ** ಈ ಸ್ಥಾನ (Mad. Inscriptions No. 163; 1093 A.D.)

ಈ ಮೇಲಿನ ಶಾಸನಗಳಲ್ಲಿ ಕಾಶ್ಮೀರ ಸಂತಾನ, ಸಿಂಹಪರ್ಷೆಯ ಮಲೆಯೂಳದೇವರ ಸಂತತಿ, ಶ್ರೀಪರ್ವತದ ಅಗಸ್ತ್ಯೇಶ್ವರ ಸಂತತಿಯ ಮಠ, ಬೆಳ್ಳಿಯಸಂತಾನ, ಮಸಿಯ ಸಂಬಂಧ, ಶಕ್ತಿಪರ್ಷೆಯ ಭುಜಂಗಾವಳಿಯ ಇಟ್ಟಿಗೆಯ ಸಂತತಿ, ಶಕ್ತಿಪರ್ಷೆಯ ಕಿಟ್ಟಿಗಾವೆಯ ಸಂತತಿ ಮುಂತಾದ ಮಠಗಳ ಶಿಷ್ಯಪರಂಪರೆಯೂ ಒಂದು ಶಾಖೆಯ ಒಳಮಠಗಳ ಪರಂಪರೆ ಯಿದ್ದುದು ತಿಳಿದುಬರುವುದು. ಅಂತೂ ಇವೆಲ್ಲವು ಮೂಲ ಮಠದ ಗುರು ಗಳಿಂದ ಶಿಷ್ಯಶಾಖೆಗಳು ಬೇರೆಯಾಗಿ, ಅಲ್ಲಲ್ಲಿ ಹರಿಡಿ, ತಮ್ಮ ಮೂಲ ಮಠದ ಪರಂಪರೆಯನ್ನು ಹೇಳಿಕೊಳ್ಳುವ ರೂಢಿಯಿದ್ದಂತೆ ಕಾಣುವುದು. ಅಂತೆಯೇ ಕಾಶ್ಮೀರ ಸಂತತಿಯ ಶಿಷ್ಯಪರಂಪರೆಯವರು ಬಳ್ಳಾರಿ ಜಿಲ್ಲೆಯಲ್ಲೂ ಬಿಜಾಪುರಜಿಲ್ಲೆಯಲ್ಲೂ ಇದ್ದುದು ಕಂಡುಬರುವುದು. ಅದರಂತೆ ರಾಮೇ ಶ್ವರ ತೀರ್ಥದ ಮಲೆಯೂಳ ಗುರುಗಳ ಪರಂಪರೆಯು ಬಿಜಾಪುರ ಜಿಲ್ಲೆಯ ಇಂಗಳೇಶ್ವರದಲ್ಲೂ, ಬಳ್ಳಾರಿ ಜಿಲ್ಲೆಯಲ್ಲೂ ಇದ್ದುದಾಗಿ ತಿಳಿದು ಬರುತ್ತದೆ ಒಂದೇ ಮೂಲಮಠದ ಶಾಖೆಗಳು ಬೇರೆ ಬೇರೆ ಸ್ಥಳಗಳಲ್ಲಿ ಹೇಗೆ ಮತ್ತು ಯಾವ ಕಾರಣಗಳಿಂದ ಬೆಳೆದುಬಂದಿವೆ ಎಂಬುದನ್ನು ನಿರ್ಣೈ ಸಲು ಸಾಧನಗಳಿಲ್ಲ ಒಂದೆರಡು ಶಾಸನಗಳಲ್ಲಿ ಕಾಶ್ಮೀರ ಮುನಿಯ ಹೆಸರು ಬಂದಿದೆಯೆಂದು, ಇಡೀ ಜನಾಂಗವೇ ಕಾಶ್ಮೀರದಿಂದ ಬಂದು ಕರ್ನಾಟಕದಲ್ಲಿ ನೆಲಿಸಿತೆಂದು ಊಹಿಸುವುದು ತಪ್ಪಾಗುವುದು. ಈ ಲಾಕುಳಶೈವ ಗುರುಗಳ ಹೆಸರುಗಳು ಕರ್ನಾಟಕದಲ್ಲೆಲ್ಲ ಶಾಸನಗಳಲ್ಲಿ ಸಾವಿರಾರು ದೊರೆಯುತ್ತಿರುವಾಗ, ಈ ಎಲ್ಲ ಜನಾಂಗವು ಕಾಶ್ಮೀರದಿಂದ ಬಂದದ್ದಾಗಿದ್ದರೆ, ಬೇರೆ ಬೇರೆ ಮಠಪರಂಪರೆಗಳು ಇರುತ್ತಿರಲಿಲ್ಲ. ಉತ್ತರದ ಕಾಶ್ಮೀರ ಪರಂಪರೆಯ ಶಿಷ್ಯ ಸಂತಾನದವರಿದ್ದಂತೆ, ದಕ್ಷಿಣದ ಮುದಿನೀರ (ಸಮುದ್ರ) ರಾಮೇಶ್ವರತೀರ್ಥದ ಮಲೆಯೂಳ ಗುರುಗಳ ಸಂತಾನದವರೂ ಇರುವರು. ಶ್ರೀಪರ್ವತದ ಶಿಷ್ಯಶಾಖೆಯ ಪರಂಪರೆಯೂ ಇರುವುದು ಶಕ್ತಿಪರ್ಷೆಯ ಸ್ಥಾನವು ಆವುದೋ ತಿಳಿಯದು. ಅದರಂತೆ ಪರ್ವತಾ ವಳಿಯ ಬೆಳ್ಳಿಯ ಸಂತಾನದ ಮೂಲ ಸ್ಥಾನವು ತಿಳಿಯದಾಗಿದೆ. ಕಾಶ್ಮೀರ, ರಾಮೇಶ್ವರ, ಶ್ರೀಪರ್ವತ ಮುಂತಾದ ಪ್ರಸಿದ್ಧ ಸ್ಥಳದ ಮಠಗಳ ಶಿಷ್ಯ ಸಂತಾನ, ಮಠಗಳ ಪರಂಪರೆ ಇದ್ದುದು ಮಾತ್ರ ನಿಜ. ನೊಳಂಬರು ಪಲ್ಲವ ವಂಶೀಯರೆಂದು ಹೇಳಿಕೊಳ್ಳುತ್ತಾರೆ ಶಾಸನಗಳಲ್ಲಿ. ಇವರು ಆಳುತ್ತಿದ್ದ ನಾಡಿನಲ್ಲಿ ಸಿಂಹಪರ್ಷೆಯ ಮಲೆಯೂಳ ಗುರುಗಳ ಮಠವಿದ್ದುದು ಕಂಡು ಬರುತ್ತದೆ. ಈ ಕೂಡ್ಲಗಿ ತಾ॥ ಬೆಣಕಲ್ಲ (ನಂ ೩೪೩ ನೆಯ) ಶಾಸನವು

ಕ್ರಿ. ಶ. ೧೨೨೬ ರ ಕಾಲದ್ದು. ಬಲ್ಲಾಳ ವೀರನಾರಸಿಂಹನ ಕಾಲದಲ್ಲಿ "ಕಾಣ್ವಾನ್ವಯಾಭಿಜಾತ ಮತ್ತು :ವಾಜಿವಂಶ ಚೂಡಾಮಣಿಯಾದ ಭಾರದ್ವಾಜ ಗೋತ್ರದವನಾದ ಅಮಿತಯ್ಯದಂಡನಾಯಕನು ಪದ್ಮಲೇಶ್ವರ, ಅಮೃತೇಶ್ವರ, ಲಕ್ಷ್ಮೀನಾರಾಯಣ, ಬಲ್ಲಾಳೇಶ್ವರ, ನಾರಸಿಂಹ ದೇವಾಲಯಗಳನ್ನು, ನೊಳಂಬವಾಡಿಯ ಕೋಗುಳಿಯ ಬೆಣ್ಣೆಕಲ್ಲಿನಲ್ಲಿ ಕಟ್ಟಿಸಿ ದತ್ತಿಯನ್ನು ಬಿಟ್ಟನು. ಸ್ವತಃ ಬಲ್ಲಾಳ ನಾರಸಿಂಹನೇ ವಜ್ರೇಶ್ವರ ಮತ್ತು ಸೋಮನಾಥ ದೇವರೆದುರು ರಾಜಗುರುವಾದ ಖಳೇಶ್ವರ ದೇವನ ಕಾಲಂಕರ್ಚಿ ದತ್ತಿಯನ್ನು ಬಿಟ್ಟಿರುವನು. ಈ ಶಾಸನವು ಭಾಷೆಯ ದೃಷ್ಟಿಯಿಂದಲೂ ಮಹತ್ವದ್ದಾಗಿದೆ ಇದರಲ್ಲಿ ರೂಪರೇಖೆ, ಧಾಪನೆ, ಬಯ್ಸಿಕೆ, ಚಡಾಯಿತೆ, ಗಾಯತಿಕೆ, ಉನ್ನತಿಕೆ, ದೆಖ್ಖಾದೆಖ್ಖಿಯೊಳು, ಚಮತುಕಾರ ರೂಪ. ಧಾರಾಧಾರ, ಮಲ್ಲಾಮಲ್ಲಿ ಇವೇ ಮುಂತಾದ ಪೂರ್ವದ ಶಾಸನಗಳಲ್ಲಿಲ್ಲದ ಹೊಸ ಶಬ್ದರೂಪುಗಳು ಬರುತ್ತವೆ. ಅದಿರಲಿ. ಈ ಶಾಸನದಲ್ಲಿ ಕಳೇಶ್ವರ ವರ್ಣನೆ ಮತ್ತು ಅವರ ಗುರುಪರಂಪರೆಯಿರುವುದು........ "ಮುನಿದಿವ್ಯವಂದಿತ ಪಾದಾರವಿಂದ **ಶ್ರೀಲಕುಳೀಶ್ವರದೇವ ಮುಖಕಮಳ ವಿನಿರ್ಗತ ಸಕಲ ಶಾಸ್ತ್ರಜ್ಞರುಂ**, ನಿಖಿಳ ಧರ್ಮಜ್ಞರುಂ, ಯಮನಿಯಮ ಪ್ರಾಣಾಯಾಮ ಪ್ರತ್ಯಾಹಾರಾದಿ ನಿಜಕೃತ್ಯ ಕ್ರಿಯಾಕರಣಾನುರಕ್ತ ಸ್ವಾಂತಃಕರಣ ಪರಿಣತ ವಿಶೇಷ ಪರಾಕೃತಪ್ರತ್ಯವಾಯರುಂ, ಸ್ವರ್ಗಾಪವರ್ಗ ಮಾರ್ಗೋಪಾಯರುಂ, ಪರವಾದಿಘುರಟ್ಟರುಂ, ಸರಸ್ವತೀಲಲಾಟಪಟ್ಟರುಂ, ಸಮವಾದಿ ಪರಭಭೇರುಂಡರುಂ, **ಅಭಿನವ ಪಾಶುಪತ ಸಮಯ ವಾರ್ಧಿವರ್ಧನ ಸುಧಾಕರರುಂ,** ಸ್ವಕ್ರಿಯಾನುಷ್ಠಾನ ನಿಷ್ಠಿತ ಮಹಿಮೋಪಾರ್ಜಿತ ಸಪ್ತಾಹತ್ತರಿ ಸ್ಥಾನಾಚಾರ್ಯರುಮಪ್ಪ ತಪಚಕ್ರವರ್ತಿ ಖಳೇಶ್ವರ ದೇವರ ಅನ್ವಯ ಕ್ಷಿತಿನುತ ಲಕುಳೀಶನ್ಯೋತ್ತಶಿಷ್ಯ ಲೋಕಸ್ತುತಯತಿ ಮುದಿನೀರ ಶ್ರೀ ॥ ಮಲೆಯಾಳದೇವ ಬ್ರತಿಕುಳಕಮಳಾರ್ಕಸ್ತತ್ಪ್ರ ಶಿಷ್ಯಸ್ಸ್ವ ಪೂಜಾನ್ವಿತ ಭುವಿ ಜಯತು ಶ್ರೀ ॥ ಜ್ಞಾನರಾಶಿಮುರ್ನೀಶಃ

ತಚ್ಛಿಷ್ಯಸ್ತಾಪಸಶ್ರೇಷ್ಠಃ ಸೋಮೇಶ್ವರ ಮಹಾಬ್ರತಿಃ।
ತನ್ಮುನಿಶಿಷ್ಯವಿಖ್ಯಾತೋ ಶಾಂತರಾಶಿರ್ಯತೀಶ್ವರಃ ॥
ಆ ಮುನಿಯ ಶಿಷ್ಯ ಭೃಗ್ವಿ ।
ಶ್ವಾಮಿತ್ರಾಂಗಿರಸ ಕಪಿಲ ಸನಕಾದಿಮುನಿ ॥

ಸ್ತೋಮರ್ತರ್ಮಗೆಣೆಯೆನಲಂ ।
ತಾಮಹಿಮೆಯ ತಾಳ್ದಿದಂ ಕಳೇಶ್ವರಮುನಿಶಂ ॥
ಅವರ ಶಿಷ್ಯ ಶ್ರೀಕಳೇಶ್ವರ ಬ್ರತೀಂದ್ರ ।

ಮಲೆಯಾಳ ಪರಂಪರೆಯ ಕಳೇಶ್ವರನು ಮೂಲಪುರುಷನ ಆರನೆಯ ತಲೆಯವನು. ಅದರಂತೆ ಕಾಶ್ಮೀರ ಮುನಿಗಳ ತಲೆಮಾರಿನಿಂದ ಲೆಕ್ಕ ಮಾಡಿ ಸುಮಾರಾಗಿ ಮೂಲಪುರುಷನ ಕಾಲವನ್ನು ಗೊತ್ತುಹಚ್ಚಬಹುದು. ಒಟ್ಟಿನಮೇಲೆ ಹೇಳುವುದಾದರೆ ಕಾಳಾಮುಖರೆಲ್ಲರೂ ಕಾಶ್ಮೀರಿಗಳಲ್ಲ. ನೊಳಂಬರ ಪಲ್ಲವವಂಶೀಯರು. ಅವರು ತಾವು ಕರ್ನಾಟಕದಲ್ಲಿ ರಾಜ್ಯ ವಾಳುತ್ತಿರುವಾಗ ದಕ್ಷಿಣದ ರಾಮೇಶ್ವರ ತೀರ್ಥದ ಮಠಪರಂಪರೆಯ ಗುರುಗಳನ್ನು ಸ್ಥಾಪಿಸಿರಬಹುದೆ ?

ಬ್ರಾಹ್ಮಣರ ಗೋತ್ರಸೂತ್ರಗಳು ಈ ಲಾಕುಳಶೈವರ ವರ್ಣನೆ ಯಲ್ಲಿಲ್ಲೂ ನಮಗೆ ನೋಡಲು ಸಿಕ್ಕಿಲ್ಲ. ಆದರೆ ಶುದ್ಧ–ಶೈವರೆಂದು ಹೇಳಿ ಕೊಳ್ಳುವವರಲ್ಲಿ ಮಾತ್ರ ಬ್ರಾಹ್ಮಣರ ಗೋತ್ರಗಳು ದೊರೆಯುತ್ತವೆ. ಇದನ್ನು ಮುಂದೆ ವಿವೇಚಿಸಲಾಗುವುದು ಇದೇ ಸಂದರ್ಭದಲ್ಲಿ ಒಂದೆರಡು ಸಂಗತಿಗಳನ್ನು ಹೇಳುವುದವಶ್ಯವಾಗಿದೆ.

(ಅ) ಸ್ವಸ್ತಿ ಶ್ರೀಮನ್ಮಹಾಮಂಡಳೇಶ್ವರ ಬೀರದೇವರಸನ ಆಳಿಕೆಯ ಕಾಲದಲ್ಲಿ "ಕಲ್ಲಗಾಂಡನ ಮಗ ಹೆಗ್ಗಡೆ ಕಾಮಯ್ಯ ತಳ್ತಿರಿದು ಸುರಲೋಕ ಪ್ರಾಪ್ತನಾದನು. ಅದಕ್ಕೆ ರುದ್ರಶಕ್ತಿದೇವರು ಮುಂಡೆಗನ ಸರುವಿನಲ್ಲಿ ಯಿಕ್ಕಿದಕ್ಕೆ ನೆತ್ತರುಗೊಡಗೆ ಕೆಯಿ ೧೦ ಬೆನವೂರ ಗ್ರಾಮ ' (ಶಿವಮೊಗ್ಗ ಜಿಲ್ಲೆ, ಸೊರಬ ನಂ. ೩೫೮ ಶಕವಿಲ್ಲ.)

(ಬ) ಅದೇ ಬೀರದೇವರಸನ ಕಾಲ — "ಬೆನವುರಲ್ಲಿ ಬೊಪ್ಪಿ ಸೆಟ್ಟಿಯ ಸಾಂತನಯ್ಯ ತಳ್ತಿಱಿದು ಸುರಲೋಕ ' ಪ್ರಾಪ್ತನಾದ, ರುದ್ರಶಕ್ತಿ ದೇವರು ಮುಂಡೆಗನ ಸರುವಿನಲ್ಲಿ ಇಕ್ಕಿದಕ್ಕೆ ನೆತ್ತರಗೊಡಗೆ ಕೆಯಿ ೧೦ " (ಸೊರಬ ನಂ. ೩೬೬, ಶಕಕಾಲವಿಲ್ಲ).

ಈ ಮಹಾಮಂಡಳೇಶ್ವರ ಬೀರದೇವರಸನ ಆಳಿಕೆಯ ಕಾಲ ತಿಳಿಯುವುದಿಲ್ಲ. ಈ ಎರಡು ಶಾಸನಗಳಲ್ಲಿ ಉಲ್ಲೇಖಿಸಿರುವ ' ಕಲ್ಲನ

ಗೌಡನ ಮಗ ಹೆಗ್ಗಡೆ ಕಾಮಯ್ಯ ' ಮತ್ತು ' ಬೊಪ್ಪಿಸೆಟ್ಟಿ ಸಾಂತರಯ್ಯ ' ಇವರಿಬ್ಬರ ಅಂತ್ಯವಿಧಿಯನ್ನು ಮುಗಿಸಿ ನೆತ್ತರಗೊಡಗೆ ಪಡೆದ " ರುದ್ರ ಶಕ್ತಿ"ಯು ಬ್ರಾಹ್ಮಣನಾಗಿದ್ದಿರಲಾರ. ಬ್ರಾಹ್ಮಣರ ಸಂಪ್ರದಾಯದ ವಿರುದ್ಧ ನಡತೆ ಇದು. ಗೋವೆ, ಚಂದ್ರಗುತ್ತಿಯ ಬುಕ್ಕರಾಯನ ಮಂತ್ರಿಯಾದ ಮಾಧವನ ಗುರು ಕ್ರಿಯಾಶಕ್ತಿಯೂ ಮತ್ತು ಹೆಗ್ಗಡೆ ಕಾಮಯ್ಯ, ಬೊಪ್ಪಿಸೆಟ್ಟಿ ಸಾಂತರಯ್ಯಗಳ ಅಂತ್ಯವಿಧಿಯನ್ನು ಮುಗಿಸಿದ ರುದ್ರ 'ಶಕ್ತಿ'ಯೂ ಬರೇ 'ಶಕ್ತಿ'ಯೆಂಬ ಉಪಪದವಿದ್ದುದರಿಂದ, ಒಂದೇ ಜಾತಿಯವರಾದ ಬ್ರಾಹ್ಮಣರೆಂದು ಹೇಳುವುದು ತಪ್ಪಾಗುವುದು.

ಶ್ರೀಮಾನ್ ಗಲಗಲಿ ಚೆನ್ನಮಲ್ಲಪ್ಪನವರು, ಈ ಪ್ರಾಚೀನ ಸ್ಥಾನಾಚಾರ್ಯರು, ತಪೋಧನರು, ಲಿಂಗಿಗಳು ಎಂದು ಶಾಸನಗಳಲ್ಲಿ ಉಕ್ತರಾಗಿದ್ದವರು ಬ್ರಾಹ್ಮಣರಲ್ಲವೆಂದು ಸಿದ್ಧಾಂತಗೈದು, ಈ ಜನರ ಹೆಸರುಗಳ ಮುಂದೆ 'ಜೀಯ' ಮತ್ತು 'ಗೊರವ'ರೆಂದು ಉಪಪದಗಳಿದ್ದುದರಿಂದ, ಈಗಿನ "ಜೀರ್ರು" ಅಥವಾ "ಗೊರ್ರು" ಎಂಬ ಪೂಜಾರಿಕೆಯುಳ್ಳವರ ಪೂರ್ವಜರಾಗಿದ್ದರೆಂದೂ, ಅವರು ಈಗಿನ ಗುರುವರ್ಗದಲ್ಲಿ ಅಡಗಿದರೆಂದೂ ತರ್ಕಿಸಿರುವರು. ಕೇವಲ ಶಬ್ದಸಾದೃಶ್ಯದಿಂದ ಈ ರೀತಿ ಊಹಿಸಬಹುದಾದರೂ ಇವರ ಊಹೆಯು ಕೂಡ ಸರಿಯಲ್ಲ.

ಹಿಂದುಜನಾಂಗವು ಜಾತಿವಿಶಿಷ್ಟವಾದ ಜನಾಂಗವು. ಈ ಜಾತಿತತ್ವದ ಮೂಲವು ಉದ್ಯೋಗ ಮತ್ತು ಲಗ್ನಸಂಸ್ಥೆಯು. ಒಂದು ಜಾತಿಯವರು ಧರ್ಮಾಂತರವಾಗಿದ್ದಿರಬಹುದು. ಧರ್ಮಾಂತರ ಆದವರು ತಮ್ಮದೆಯಾದ ಬೇರೊಂದು ವಿಶಿಷ್ಟ ಒಳಜಾತಿಯ ಪಂಗಡವನ್ನು ನಿರ್ಮಿಸಿಕೊಂಡು, ತಮ್ಮ ಜಾತಿಯ ಅಸ್ತಿತ್ವವನ್ನು ಉಳಿಯಿಸಿಕೊಂಡಿರುವರು. ಆದರೆ ಅನ್ಯ ಜಾತಿಯವರಲ್ಲಿ ಸಂಪೂರ್ಣವಾಗಿ ಬೆರೆತು ನಾಮಶೇಷವಾಗಿದ್ದುದು ಅಪರೂಪ. ಅಂತೆಯೇ ಜಾತೀಯತೆಯನ್ನು ನಂಬಲಾರದ ಎಷ್ಟೋ ಪಂಥಗಳಲ್ಲಿ ಸಹ ಒಳಜಾತಿಗಳು ಇದ್ದಕ್ಕಿದ್ದಂತೆ ಹಾಗೆಯೇ ಉಳಿದುಕೊಂಡಿವೆ. ಜೈನಬ್ರಾಹ್ಮಣರು ಇದ್ದುದು ನಮಗೆ ಕನ್ನಡ ಕವಿಚರಿತೆಯಿಂದ ಗೊತ್ತಾಗುತ್ತದೆ. ಆದಿಕವಿ ಪಂಪನು ಜೈನಬ್ರಾಹ್ಮಣನು. ಅದೇ ವೆಂಗಿ ವಿಷಯದಲ್ಲಿ ಕಮ್ಮೆ ನಾಡಿನ ಪುಂಗನೂರೆಂಬ ಗ್ರಾಮದಲ್ಲಿ ಕೌಂಡಿನ್ಯ ಗೋತ್ರೋದ್ಭವನಾದ ಯಾಜ್ಞವಲ್ಕ್ಯ ಸದೃಶನಾದ ನಾಗಮಯ್ಯನೆಂಬ

ಜೈನ ಬ್ರಾಹ್ಮಣನಿದ್ದನು. ಆತನಿಗೆ ಮಲ್ಲಪ, ಪೊನ್ನಿಮಯ್ಯನೆಂಬ ಇಬ್ಬರು ಮಕ್ಕಳಿದ್ದರು. ಇವರು ತಮ್ಮ ಗುರುವಾದ 'ಜಿನೇಂದ್ರ ದೇವರ' ಪರೋಕ್ಷ ವಿನಯ ಪ್ರದರ್ಶನಾರ್ಥವಾಗಿ ಒಂದು ಗ್ರಂಥವನ್ನು ಬರೆಯಲು ಕೇಳಿ ಕೊಳ್ಳಲು, ಕವಿಪೊನ್ನನು 'ಶಾಂತಿಪುರಾಣ'ವನ್ನು ಬರೆದನು. ಇದೇ ಪೊನ್ನಿಮಯ್ಯನ ಮಗಳಾದ ಅತ್ತಿಮಬ್ಬೆಯು ರನ್ನನಿಂದ ಅಜಿತ ಪುರಾಣ ವನ್ನು ಬರೆಯಿಸಿದಳು. ಬ್ರಹ್ಮಶಿವನು ವತ್ಸಗೋತ್ರದ ಜೈನಬ್ರಾಹ್ಮಣನು. ಇವನ ಸ್ಥಳ ಪೊಟ್ಟಣಕೆರೆ. ಶೈವಮತವನ್ನು ತ್ಯಜಿಸಿ ಜೈನನಾದವನು. (ಕಾಲ ಕ್ರಿ. ಶ. ೧೧೨೫). ಆಚಣ್ಣ (೧೧೯೫) ನು ಭಾರದ್ವಾಜಗೋತ್ರದ ಜೈನ ಬ್ರಾಹ್ಮಣನು. ಜನ್ನನು (೧೨೦೯) ಕಮ್ಮ ಕುಲದ ಜೈನಬ್ರಾಹ್ಮಣನು ನಾಗರಾಜನು (೧೩೩೧) ಕೌಶಿಕ ಗೋತ್ರದ ಜೈನ ಬ್ರಾಹ್ಮಣನು. ಅಭಿನವ ಚಂದ್ರನು ಜೈನ ಬ್ರಾಹ್ಮಣನು (೧೪೦೦). ಇವರಂತೆ ಶೈವಬ್ರಾಹ್ಮಣರು ಸ್ಪಷ್ಟವಾಗಿ ತಂತಮ್ಮ ಗೋತ್ರಗಳನ್ನು ಹೇಳಿಕೊಂಡಿರುವರು. ಇಂತಹವ ರೆಲ್ಲರನ್ನು ಉದಹರಿಸುತ್ತ ಹೋದರೆ ವಿಷಯಾಂತರವಾಗುವುದು.

ಈಗಿನ ಆಧುನಿಕ ಹೊಸಕಾಲದಲ್ಲೂ ನಮ್ಮ ಕಣ್ಣೆದುರಿಗೆ ನಡೆ ಯುತ್ತಿರುವ ಸಾಮಾಜಿಕ ಕ್ರಿಯೆಯು, ಇದಕ್ಕೆ ಬಲವಾದ ನಿದರ್ಶನ ವಾಗಿದೆ. ಕ್ರಿಶ್ಚನ್ನರಾದ ಹಿಂದುಗಳಲ್ಲೂ, ಆರ್ಯಸಮಾಜದಲ್ಲೂ ಈ ಜಾತಿ ಪ್ರಭಾವವು ಅಳಿದುಹೋಗದೆ ಹಾಗೆಯೇ ಉಳಿದಿದೆ. ಈ ಎರಡೂ ಪಂಥದವರೂ ಜಾತಿತತ್ವವನ್ನು ಒಪ್ಪುವುದಿಲ್ಲ. ಶೀಖಪಂಥದಲ್ಲೂ ಇದೇ ಅವಸ್ಥೆ. ಉತ್ತಮ ಜಾತಿಯ ಶೀಖರು ಕೀಳು ಜಾತಿಯ ಶೀಖರೊಡನೆ ಶರೀರಸಂಬಂಧ ಮಾಡುವುದಿಲ್ಲ. ಬಸವಣ್ಣನವರ ಕಾಲದಲ್ಲಿ ಜಾತಿಬಂಧನ ವನ್ನು ಕಿತ್ತೊಗೆಯಲಾಯಿತೆಂದು ಹಲವು ಲಿಂಗಾಯತರು ಪ್ರತಿಪಾದಿಸು ತ್ತಾರೆ. ವಿರಕ್ತರಲ್ಲಿ ಜಾತಿಯನ್ನು ಎಣಿಸದಿರುವುದು ಬೇರೆ; ಅವರಲ್ಲಿ ಶರೀರ ಸಂಬಂಧವಾದ ಲಗ್ನ ವ್ಯವಹಾರದ ಪ್ರಶ್ನೆಯೇ ಬರುವುದಿಲ್ಲ. ಆಧುನಿಕರ ಈ ಹೇಳಿಕೆಯು ನಿಜವಾಗಿದ್ದಲ್ಲಿ ಬಸವಣ್ಣನವರ ಕಾರ್ಯವು ಯಶಸ್ವಿಯಾಗಲಿಲ್ಲವೆಂದೇ ಹೇಳಬೇಕಾಗುತ್ತದೆ. ಯಾಕೆಂದರೆ ಈಗಿನ ಕಾಲದಲ್ಲೂ ಲಿಂಗಾಯತರಲ್ಲಿ ಅನೇಕ ಜಾತಿಗಳು ಇದ್ದಕ್ಕಿದ್ದ ಹಾಗೆಯೇ ಉಳಿದುಕೊಂಡಿವೆ. ಬಸವಣ್ಣನವರ ಕಾಲದಲ್ಲಿ ಜಾತಿತತ್ವವನ್ನು ನಿರಾಕರಿಸ ಲಾಯಿತೊ ಇಲ್ಲವೊ ಎಂಬುದು ಬೇರೆ ಪ್ರಶ್ನೆ. ಪ್ರಸ್ತುತ ವಿಷಯಕ್ಕೆ ಅದು ಸಂಬಂಧಪಟ್ಟುದಲ್ಲ. ಈ ಜಾತಿತತ್ವವು ಉಳಿಯುವುದು ಅಳಿಯುವುದು

ಮೇಲೆ ಹೇಳಿದಂತೆ ಲಿಗ್ನಸಂಸ್ಥೆಯಿಂದ, ಇದಿ ಹಿಂದು ಸಮಾಜದ ಕಟ್ಟಡವೇ ಈ ಜಾತಿತತ್ವದ ಮೇಲೆ ನಿಂತಿದೆ.

ಈ ಜಾತಿತತ್ವಕ್ಕನುಸರಿಸಿ ಪೂರ್ವದ ಲಾಕುಳ ಗುರುಗಳು ಎಲ್ಲಿ ಅಡಗಿದರೂ. ವಿಶಿಷ್ಟವಾದ ಜಾತಿಯೊಂದರಲ್ಲಿ ಕಾಣಿಸಿಕೊಳ್ಳಲೇಬೇಕು. ಇವರು ಬ್ರಾಹ್ಮಣರಾಗಿದ್ದುದಾದರೆ ಬ್ರಾಹ್ಮಣ ಸಮಾಜದ ಒಳಜಾತಿಗಳಲ್ಲಿ ಕಾಣಿಸಿಕೊಳ್ಳುವಷ್ಟು ಐತಿಹಾಸಿಕ ಪ್ರಮಾಣಗಳಿಲ್ಲ. " ಜೀಯರು " ಎಂಬ ಶಬ್ದವು ಈಗಲೂ ಎಂಥವರಿಗೆ ಉಪಯೋಗಿಸಲಾಗುತ್ತದೆಂಬುದಕ್ಕೆ ಒಂದು ಹೊಸ ಉದಾಹರಣೆಯನ್ನು ಕೊಡುವುದು ಉಚಿತವಾಗಿದೆ. ಇದೇ (೧೯೫೩) ಮಾರ್ಚ ತಿಂಗಳು ೨ನೆಯ ತಾರೀಖಿಗೆ ರಾಮಾನುಜ ಸಂಪ್ರದಾಯದ ಶ್ರೀ ಅಹೋಬಲ ಮಠದ ಶ್ರೀಮನ್ ಸತ್ಗೋಪ ಶ್ರೀರಂಗನಾಥ ಸತ್ಗೋಪಯತೀಂದ್ರ ಮಹಾದೇಶಿಕರು ೪೨ನೆಯ ಜೀಯರು ಸಮಾಧಿಸ್ಥರಾದರು. ಅವರ ಸ್ಥಳದಲ್ಲಿ ೪೩ನೆಯ ಜೀಯರಾದ ಮಹಾದೇಶಿಕರಾದ ಶ್ರೀಮನ್ ಸತ್ಗೋಪ ಶ್ರೀಯತೀಂದ್ರ ವೀರರಾಘವ ಸತ್ಗೋಪ ಯತೀಂದ್ರರು ಪಟ್ಟವೇರಿದರು (March 3 rd 1923–Hindu). ಈ ಶ್ರೀ ಅಹೋಬಲ ಮಠದ ಸ್ವಾಮಿಗಳಿಗೆ ಜೀಯರು, ಮಹಾದೇಶಿಕರು ಎಂದು ಮರ್ಯಾದೆಗಾಗಿ ಸಂಬೋಧಿಸಲಾಗಿದೆ. ಇಲ್ಲಿ ಜೀಯರು ಎಂದುದರಿಂದ " ಜೀರು " ಎಂದಾಗಲಿ, ಅಥವಾ 'ದೇಶಿಕ' ಶಬ್ದದಿಂದ ಲಿಂಗಾಯತ ಸ್ವಾಮಿಗಳೆಂದಾಗಲಿ ಊಹಿಸಿದರೆ ಅಪಾರ್ಥವಾದೀತು

ದೇವಾಲಯಗಳಿಗೆ ದಾನ ಕೊಡುವಾಗ ದೇವಾಲಯಕ್ಕೆ ಸಂಬಂಧಪಟ್ಟ ಅನೇಕ ವೃತ್ತಿಯವರ ಜೀವಿತವನ್ನು ಕಲ್ಪಿಸಲಾಗುತ್ತಿತ್ತೆಂದು ಹಿಂದಿನ ಪ್ರಕರಣದಲ್ಲಿ ವಿವೇಚಿಸಲಾಗಿದೆ. ದಾನಕೊಡುವ ಉದ್ದೇಶವನ್ನು ಹೇಳುವಾಗ, ಸ್ಥಾನಪತಿಗಳು, ಸ್ಥಾನಿಕರು, ಆಚಾರ್ಯರು, ಒಡೆಯರು, ಆಳುವವರು, ಪೂಜಾರಿಗಳು, ತಮ್ಮಡಿಗಳು. ಸ್ಥಾನದ ತಪೋಧನರು ಮುಂತಾದವರಿಗೆಂದು ಹೇಳಿದ್ದುದಲ್ಲದೆ, ತಪೋಧನರ ಆಹಾರಕ್ಕಾಗಿಯೆಂದೂ, ಜೀಯರ ಆಹಾರಕ್ಕೆಂದೂ, ಒಡೆಯರ ಆಹಾರ ದಾನಕ್ಕಂ ಎಂದೂ, ಅರ್ಚಕರ ಅಹಾರದಾನಕ್ಕಂ ಎಂದೂ, ಗಣಂಗಳ ಆಹಾರ ದಾನಕ್ಕೆಂದೂ, ತಪೋಧನ ವಿದ್ಯಾರ್ಥಿಗಳ ಅಶನಾಚ್ಛಾದನಕ್ಕೆ ........ ಪೂಜಾರಿಗಂ ಎಂದೂ ಅನೇಕ ಶಾಸನಗಳಲ್ಲಿ ಹೇಳಲಾಗಿದೆ. ಕೆಲವೆಡೆಗಳಲ್ಲಿ " ಸ್ಥಾನಪತಿ, ಪೂಜಾರಿ, ಪರಿಚಾರಕರಾಹಾರದಾನಕ್ಕಂ " (ಅರಸಿಕೆರೆ ನಂ ೨೨; ೧೧೮೮)

“ **ಪೂಜಾರಿ, ಪರಿಚಾರಕ, ಬಾಣಸಿಗ, ಮಾಲೆಗಾಱ,** ” (ಅ. ಕೆ. ನಂ. ೯೦; ೧೧೮೯ A. D. ಅ. ಕೆ. ನಂ. ೯೪). ಇನ್ನೊಂದರಲ್ಲಿ “ **ಅರ್ಚಕರು, ಪರಿಚಾರಕರು, ಬಾಣಸಿಗರು, ಹೂವಿನತೋಟ ಮಾಡುವವರು,** ಭೇರಿ, ಜಾಂಗಟೆ, ಮುಂತಾದ ನಿಯೋಗದವರ ಜೀವಿತ ” (ಚೆನ್ನರಾಯಪಟ್ಟಣ ನಂ. ೨೫೯, ೧೪೨೯ A. D.); “ **ಪೂಜಾರಿ,** ಬಾಣಸಗಿತ್ತಿ, **ತೋಟಿಗ,** ಮತ್ತು ಸಂಕಿಮಯ್ಯನೊಳಗಾಗಿ ” (ಗುಬ್ಬಿ ನಂ. ೧೪; ೧೧೬೪); “ **ಮಾಲೆಗಾರ** ಚಕ್ಕಂಗೆ ” (ಬೇಲೂರು ನಂ ೧೯೪; ೧೧೬೦ A. D); “ **ಜೀಯರ್ಗ್ಗಂ** ಮತ್ತು **ಪ್ರತಿಯ ನಡಕವ ಶಿಶ್ರುಕಂಗೆ** ” (ದಾವಣಗೆರೆ ನಂ. ೮೫; ೧೧೪೪ A.D). “ ಭೋಗವಾಳ್ವ ಪರಿಕಾಱರ್ಗ್ಗಂ” (ದಾವಣಗೆರೆ ನಂ. ೨೦; ೧೦೪೫ A. D.) “ ಹುವ್ವಿನ ತೋಟವು, ಹುವ್ವಿನ ಪಡಿಯ ನಡಸುವಂತಾಗಿ, ಭೇರಿ, ಶಂಖ, ಬಾರಿಸುವಂತಾಗಿ, ಚಾಮಣ್ಣಂಗೆ ಕೊಟ್ಟು, ಮಠವನ್ನು ಆಳುವವರು ಮಲಜೀಯ, ಚಿಕ್ಕಜೀಯ, ಬೊಮ್ಮಜೀಯಂಗಳಿಗೆ ಕಾಲತೊಳೆದು, ಕೈಗೆಧಾರೆಯನೆಱೆದು ಕೊಟ್ಟಿದೆ. (ಅರಸಿಕೆರೆ ನಂ ೨೫೭), ಅರ್ಚಕರು, ಬಾಣಸಿಗರು, ಹುವ್ವಿನತೋಟ ಮಾಡುವವರು, ಭೇರಿ, ಜಾಂಗಟೆ ಮುಂತಾದ ನಿಯೋಗದವರು (ಚೆನ್ನರಾಯಪಟ್ಟಣ ನಂ. ೨೫೯; ೧೪೯೨ A. D.); “ ಹೇಮೇಶ್ವರ ದೇವರ **ಪೂಜಿಸುವ ಬಾಚಜೀಯಂಗೆ**” (ನಾಗಮಂಗಲ ನಂ. ೧೨; ೧೧೭೯ A.D ); “ **ತಮ್ಮ ಗುರುಗಳ್ ಮಲೆಯಾಳ ಜೀಯನ್ನ್**ರ್ಗಲ್ಲೂಪಳ್ಳಿ ನೀಲಕಂಠ ಭಟಾರರ್ಗ್ಗೆ” (ಅರಕಲಗೂಡು ನಂ. ೯೪; ೧೦೬೪ A. D.); “ ಸಾಮಂತ ಕನ್ನರಸು ರಾಮೇಶ್ವರ ದೇಗುಲಕ್ಕೆ **ತಿಪ್ಪಯ್ಯಗೊರವರ್ಗ್ಗೆ** ಮತ್ತರ್ ೪೦ ಕೆಯುಮುಮಂ ಮಕ್ಕಳ್ ಮಕ್ಕಳ್ಗೆ, ಶಿಷ್ಯರ್ ಶಿಷ್ಯರಿಗೆ ನಡೆಯಿಸುವುದು. ’ (ಪ್ರೊದುಟೂರು ನಂ. ೬೮ S I. Ins. Md.)

ಈ ಮೇಲಿನ ಶಾಸನಗಳಲ್ಲಿ ಜೀಯರು ಸ್ಥಾನಪತಿಗಳಾಗಿದ್ದುದಂತೂ ಸರಿಯೆ. ಹೇಮೇಶ್ವರ ದೇವರನ್ನು **ಪೂಜಿಸುವ** ಬಾಚಜೀಯನಾಗಿರುವನು (ನಾಗಮಂಗಲ ನಂ. ೧೨.); ಮಲೆಯಾಳಜೀಯರ್ ನೀಲಕಂಠ ಭಟಾರರು ಗುರುಗಳಾಗಿರುವರು (ಅ. ಗೂಡು. ನಂ. ೯೪), ರಾಮೇಶ್ವರ ದೇಗುಲದ ತಿಪ್ಪಯ್ಯ ಗೊರವರ್ಗ್ಗೆ (ಪೊದಟೂರು ನಂ ೬೮). ಈ ಜೀಯರು **ಪೂಜಿ**ಸುವ ವೃತ್ತಿಯುಳ್ಳವರಾಗಿದ್ದುದಲ್ಲದೆ, ಗುರುಗಳಾಗಿಯೂ ಇದ್ದರು. **ತಿಪ್ಪಯ್ಯ ಗೊರವ**ನು ಅಂತೆಯೇ ಮತ್ತೊಂದೆಡೆಯಲ್ಲಿ “ ಎಕ್ಕೋಟಿ ಚಕ್ಕ

ವರ್ತಿ ಮಾಲೇಶ್ವರ ಗುರುಗಳ ಸನ್ಮತದಿಂದ ಪಂಚಮಠ ಸ್ಥಾನಿಕರಪ್ಪ ಉದ್ದ್ಧಾರು ಚೋಳಯ್ಯನುಂ, ಗುಬ್ಬಿಯ ದಿಬ್ಬಲಿಂಗಿಯುಂ, ಮಾರವೂರ ಸಮಯ ಮಂತ್ರಿಯುಂ, ಹೆಂಣೆಗದಲ ಅಂಕಜೀಯನುಂ, ಅಣ್ಣೆಯೂರ ಸಮಯ ಮಂತ್ರಿ, ತಱಿಗಣಲೆಯ ಬಲ್ಲಾಳ ಶಿವಶಂಭುವುಂ, ಇಂತಿನಿಬರು **ಮಹರೂಪುಗಳುಂ** ಎನ್ನಲಾಗಿದೆ. (ಅರಕಲಗೂಡು ನಂ. ೭೯; ೧೧೯೦ A. D). ಉಪಪದಗಳಿಂದ, ಜೀಯರು, ಅಯ್ಯಗಳು, ಮಹಾರೂಪುಗಳು, ಪಂಚಮಠಸ್ಥಾನಿಕರು ಇವರೆಲ್ಲ ಒಂದೇ ವರ್ಗದವರಾಗಿದ್ದರೆಂದು ಹೇಳ ಬಹುದು. ನಾರಸಿಂಹನಮಗ ಬಲ್ಲಾಳದೇವನ ಕಾಲದಲ್ಲಿ ಸನ್ನಿಸೆಟ್ಟಿಯು ಸಿದ್ದೇಶ್ವರ ದೇವರಿಗಾಗಿ ಹಿರೇಬೆಟ್ಟಜೀಯನ ಮಕ್ಕಳು ಸಿದ್ಧಯಬಯ್ಯ ಯಂಗೆ ಭೂಮಿಯನ್ನು ವಿಭಾಗ ಮಾಡಿಕೊಟ್ಟಿರುವನು. ಸಿದ್ಧಯ್ಯಂಗೆ ೪ ಭಾಗ, ಬಯ್ಯಯಂಗೆ ೧ ಭಾಗ ಎಂದು ಕೊಟ್ಟ ಸಂಗತಿಯಿದೆ (ಅರಸಿ ಕೆರೆ (ನಂ. ೩೮). ಈ ಶಾಸನದಲ್ಲಿ ಜೀಯನಮಕ್ಕಳು ಅಯ್ಯಗಳಾಗಿರು ವರು. " ರಾಜಗುರು ರುದ್ರಶಕ್ತಿದೇವರು, ಬಾಚಲೇಶ್ವರದ ಸಿದ್ಧಗುರುಗಳ ಮಕ್ಕಳು ಬೈಚಗುರುಗಳು ಬೂದಯ್ಯನ ಮಗ ದೇವಂಣ ಪೂಜಾರಿ, ಆ ಊರ ರಾಮನಾಥದೇವ ಸ್ಥಾನಿಕ ರಾಮಜೀಯ (ಅರಸಿಕೆರೆ ನಂ. ೯; ೧೨೮೭ A. D), ಕ್ರಿ. ಶ ೧೨೮೭ಕ್ಕೆ ಜೀಯರೆಂದು ಉಪಪದವುಳ್ಳವರು, ಪೂಜಿ ಸುವರಾಗಿಯೂ, ಗುರುಗಳಾಗಿದ್ದರೆಂಬುದನ್ನೂ, ಮತ್ತು ಅವರ ಮಕ್ಕಳು 'ಅಯ್ಯ'ಗಳಾಗಿ ಪಂಚಮಠ ಸ್ಥಾನಿಕರಾಗಿದ್ದರೆಂಬುದನ್ನೂ ತಿಳಿದುಕೊಂಡಂ ತಾಯಿತು. ಅದರಂತೆ ಬೂದಯ್ಯನ ಮಗ ದೇಮಂಣನು ಪೂಜಿಸುವ ಪೂಜಾರಿಯಾಗಿರುವನು. ವೃತ್ತಿಯಿಂದಲೂ, ಉಪಪದಗಳಿಂದಲೂ, ಜೀಯ, ಗೊರವ ಮತ್ತು ಅಯ್ಯ, ಮಹಾರೂಪುಗಳು ಒಂದೇ ವರ್ಗದವ ರಾಗಿರುವರು. ಸೊರಬ ನಂ. ೩೮೪ ಕ್ರಿ ಶ ೧೧೭೭ನೆಯ ಶಾಸನದಲ್ಲಿ ಜೀಯರ ಆಹಾರ ದಾನಕ್ಕಾಗಿ ಎಂದಿದೆ. ದಾವಣಗೆರೆ (ನಂ. ೮೫ ಕ್ರಿ. ಶ. ೧೧೪೩ A.D.) ನೆಯ ಶಾಸನದಲ್ಲಿ 'ಜೀಯರ್ಗಂ ಮತ್ತು ಪತ್ರಿಯನಡಕುವ ಶಿಶ್ರುಕಂಗೆ' ಎಂದಿರುವುದು. ಇಲ್ಲಿ ಜೀಯರು ಮತ್ತು ಪತ್ರಿಯನಡಕುವ ಶಿಶ್ರುಕನು ಬೇರೆ ಬೇರೆಯಾಗಿ ಹೇಳಲ್ಪಟ್ಟಿರುವರು ಪತ್ರಿಯನಡಕುವವರು, ಹುವ್ವಿನತೋಟ ಮಾಡುವವರು, ಭೇರಿ, ಜಾಗಂಟೆ ಬಾರಿಸುವವರು, ದೇವರ ಭೋಗಕ್ಕಾಗಿ ಪೂಜೆಗಟ್ಟುವ ನಿಯೋಗದವರು ಬೇರೆ ವರ್ಗದವರು ಮತ್ತು ಗುರುಗಳು, ಪಂಚಮಠ ಸ್ಥಾನಿಕರಾಗಿದ್ದವರು ಬೇರೆ ಎಂಬುದು ಇದರಿಂದ ಸ್ಪಷ್ಟವಾಗಿದೆ. ಈ ಎರಡು ವೃತ್ತಿಯವರು ಒಂದೇ ಜಾತಿಯವರಲ್ಲ.

ಮಾಲೆಗಾರರೆಂಬ ಇನ್ನೊಂದು ಶಬ್ದವು ಅದೇ ಹುವ್ವಿನ ತೋಟಗಾರರಿಗೆ ಉಪಯೋಗವಾಗಿದೆ. ಈಗ ಅಲ್ಲಲ್ಲಿ ಉತ್ತರಕರ್ನಾಟಕದಲ್ಲಿ ಜೀರ್ರು ಮತ್ತು ಗೊರ್ರು ಎನಿಸಿಕೊಳ್ಳುವವರು ಈಗಲೂ ಇದೇ ನಿಯೋಗದವರಾಗಿದ್ದಾರೆ. ಆದರೆ ಶಾಸನಗಳಲ್ಲಿಯ ಜೀಯರು ಎಂಬ ಉಪಪದವುಳ್ಳವರು ದೇವಸ್ಥಾನದ ಸ್ಥಾನಿಕರು, ಗುರುಗಳು ಆಗಿದ್ದರು. ಗುರು ಮತ್ತು ಪತ್ರಿಯನಡಕುವ ಶಿಶ್ರ್ರಿಕ, ಜಾಂಗಟೆ, ಭೇರಿ ಬಾರಿಸುವವರಲ್ಲಿ ಅಂತರವಿಲ್ಲೆಂದು ಹೇಳಲಾಗದು. ಸ್ಥಾವರಲಿಂಗೋಪಾಸನೆಯು ಕುಗ್ಗಿ, ಅದೇ ಪೂರ್ವದ ಜೀಯರು, ಒಡೆಯರು, ಅಯ್ಯಗಳು ಜಂಗಮರಾಗಿರುವರು. ತಪೋಧನರಾಹಾರದಾನಕ್ಕಾಗಿ, ಜೀಯರ ಆಹಾರಕ್ಕಾಗಿ, ಅರ್ಚಕರ ಆಹಾರಕ್ಕಾಗಿ, ಎಂದು ಶಾಸನಗಳಲ್ಲಿ ಬರುವುದು. ಮುಂದಿನ ಕಾಲದಲ್ಲಿ ಅದರ ಬದಲಾಗಿ, " ಅಯಿವರ ಒಡೆಯರ ಸತ್ರಕ್ಕಾಗಿ " (ಸೊರಬ ನಂ. ೧೮ ಕ್ರಿ. ಶ. ೧೪೪೯) ಎಂದು ಬಂದಿದೆ. ಕೆಳದಿ ಶಿವಪ್ಪನಾಯಕರು ಹಂಚಿನ ಬಸವಪ್ಪ ಒಡೆಯರಿಗೆ.... ವೀರಶಪ್ಪೊಡೆಯರಿಗೆ ಕಟ್ಟಿಸಿಕೊಟ್ಟ ಧರ್ಮಕ್ಕೆ ಶಿವಾರ್ಪಿತವಾಗಿ ಬಿಟ್ಟಿರುವರು (ಸೊರಬ ನಂ. ೪೫೪). ಮೀರಾಸಿ, ಕಂಥೆ ಒಡೆಯರು (ಸೊರಬ ನಂ ೪೫೭; ಕ್ರಿ. ಶ. ೧೬೬೫); ಶುದ್ಧಶಿವಾಚಾರ ಸಂಪನ್ನರಪ್ಪ ಶ್ರೀಮಲ್ಲಿಕಾರ್ಜುನ ಮ....ಲಿಂಗದೇವರ ದಿವ್ಯಪಾದಾರಾಧಕ [ರು] ಮಪ್ಪ ಮುಕ್ತಿನಾಥ ಒಡೆಯರು (ಸೊರಬ ನಂ. ೧೨೬) ಎಂದಿದೆ. ಶಿವಾಲಯದಲ್ಲಿಹ ನಾಲ್ವತ್ತು ಒಡೆಯರುಗಳಿಗೆ ಸಲ್ಲುವ ಸುಯಿದಾನ (ಗುಂಡ್ಲಪೇಟೆ ನಂ ೨೪, ಕ್ರಿ. ಶ. ೧೪೨೮), ರಾವೊಡೆಯನ ಮಗ ಚೆನ್ನಯ್ಯಂಗೆ ತಮ್ಮಯ್ಯನ ಹಳಿಯ ಮಠಕ್ಕಾಗಿ (ಚೆಳ್ಳಕೆರೆ ೧೬೮೫ A. D), ಒಡೆಯರ ಮಗ ಜಂಗಮ ಆದುದಕ್ಕೆ ಇದು ನಿದರ್ಶನವಾಗಿದೆ. ತಪೋಧನರ ಆಹಾರಕ್ಕಾಗಿದ್ದುದು, ಜೀಯರು, ಗಣಂಗಳು ಒಡೆಯರು, ಜಂಗಮರ ಆಹಾರಕ್ಕೆಂದು ಕಾಲಕಾಲಕ್ಕೆ ಶಾಸನಗಳಲ್ಲಿ ಬದಲಾವಣೆಯಾದದ್ದು ಕಂಡುಬರುತ್ತದೆ.

ಕ್ರಿ. ವ. ೧೦೨೮ = ಆಚಾರ್ಯರಾಹಾರಕ್ಕಂ ಬಮ್ಮಜೀಯನ ತಮ್ಮ ಬೆನಕರಾಶಿಗೆ

,, ೧೦೫೯ = ತಪೋಧನರ ಆಹಾರದಾನಕ್ಕಾಗಿ (ಸೂಂಡಿಯ ಶಾಸನ)

,, ೧೧೨೧ / ೧೧೪೪ } ಸ್ಥಾನಾಚಾರ್ಯರ ಗ್ರಾಸಕ್ಕಂ.

ಕ್ರಿ. ಶ. ೧೧೩೨ = ಗಣಂಗಳ ಆಹಾರಕ್ಕಾಗಿ.
,, ೧೧೩೭ = ಜೀಯರ ಆಹಾರ ದಾನಕ್ಕಂ.
,, ೧೩೫೪ = ಜಂಗಮರು ಉಂಬುವದಕ್ಕೆ
,, ೧೪೨೮ } = ಒಡೆಯರುಗಳಿಗೆ ಸಲ್ಲುವ ಸುಯಿದಾನ
೧೪೪೯ } = ಆರೋಗಣೆ ಐವರ ಒಡೆಯರ ಸತ್ರಕ್ಕಾಗಿ;

ದೇವರಿಗೆ ಪೂಜೆಗಟ್ಟುವ, ಭೋಗಕೊಡುವ, ಹೂ, ಪತ್ರಿಗಳನ್ನು ಪೂಜೆಗಾಗಿ ಒದಗಿಸುತ್ತಿರುವ, ಹೂಗಾರರು ಮಾಲೆಗಾರರೆಂದು ಕರೆಯಿಸಿ ಕೊಳ್ಳುವ, ಜಾಂಗಟೆ, ಭೇರಿಯನ್ನು ಪೂಜೆಯ ಕಾಲದಲ್ಲಿ ಬಾರಿಸುತ್ತಿರುವ, ಈಗಿನ 'ಜೀರ್‍ರು' ಅಥವಾ 'ಗೊರ್‍ರು' ಜಾತಿವಿಶಿಷ್ಟವಾದ ಹಿಂದು ಜನಾಂಗ ದಲ್ಲಿ ಗುರುಗಳೆಂದು ಮನ್ನಣೆ ಪಡೆದಿರುವರೆಂಬುದು ಅಸಾಧ್ಯವಾದ ಮಾತು. ಧಾರ್ಮಿಕ ಸಮಾಜದಲ್ಲಿ ಕಡಿಮೆ ತರಗತಿಯಲ್ಲಿದ್ದವರು. ಸಕಲ ಶೈವ ಸಮಾಜದಲ್ಲೆಲ್ಲ ಮನ್ನಣೆ ಪಡೆದು 'ಗುರುಸ್ಥಾನವನ್ನು' ಪಡೆದು ಪೂಜ್ಯ ರಾದರೆಂದು ಊಹಿಸುವುದಕ್ಕಿಂತ ಪ್ರಾಚೀನ ಲಾಕುಳಶೈವ-ಗುರುಗಳೇ ಹೊಸ ಪಂಥದಲ್ಲಿ ರೂಪಾಂತರ ಹೊಂದಿರುವರೆಂದು ಊಹಿಸುವುದು ಸಮಂಜಸವಾದುದಾಗಿದೆ. ಈ ತರದ ಊಹೆಗೆ ಐತಿಹಾಸಿಕ ಪ್ರಮಾಣ ಗಳಿವೆ. ರಾಯಚೂರ ಜಿಲ್ಲೆಯ ಕುಷ್ಟಗಿ ತಾಲುಕೆಯ ಒಬ್ಬ ಗೌಡನು ಜಂಗಮ ಮಠಪತಿಗಳಿಗೆ 'ತಪೋಧನರೆಂ'ದು ಅಂದುದನ್ನು ಈ ಲೇಖಕನು ಸ್ವತಃ ಕೇಳಿರುವನು. ತಪೋಧನರೆಂಬ ಪ್ರಾಚೀನ ಶಬ್ದದ ಪ್ರಯೋಗವು ಇನ್ನೂ ಬಳಕೆಯಲ್ಲಿದೆ ಈ ನಾಡಿನಲ್ಲಿ. ಈ ಮಾತು 'ಜೀರ್‍ರ'ರಿಗೆ ಅನ್ವಯಿಸುತ್ತಿ ದ್ದಂತೆ, 'ಗೊರ್‍ರ'ರಿಗೂ ಅನ್ವಯಿಸುತ್ತಿದೆ ಗೊರವರ್, ಕಾಳಾಮುಖರ್ ಎಂದು ಬಂದಿರುವುದೇನೋ ನಿಜ. "ಎಳೆದೇರ ಗೋವನ್ನೆಮೊಗಂ" ಮುಂತಾಗಿ ಶಿವನಿಗೆ ಗೊರವನೆಂದು ಹೆಸರಿದ್ದುದು ನಿಘಂಟುವಿನಲ್ಲಿದೆ. ಶಿವಸ್ವರೂಪಿಯಾದವರು ಎಂಬ ಅರ್ಥವು ಇಲ್ಲಿ ಧ್ವನಿತವಾಗುತ್ತದೆ. (ಚಿತ್ರದುರ್ಗ ನಂ. ೧೪; ಕ್ರಿ. ಶ. ೧೪೧೧) ಶಾಸನದಲ್ಲಿ ಹೇಳಿರುವಂತೆ ವೀರಪ್ರತಾಪದೇವರಾಯನ ಮಗ ಮಲ್ಲಣ್ಣೊಡೆಯರು ಶ್ರೀ ಹಿಡಿಂಬನಾಥ ದೇವತಾರ್ಚನೆಯ ಕಾಲದಲ್ಲಿ ತನ್ನ ತಾಯಿ ಮಲ್ಲವ್ವೆಗೆ ಪುಣ್ಯಲೋಕ ಪ್ರಾಪ್ತಿಯಾಗಲೆಂದು ಆಶೀರ್ವಾದವನ್ನು ಮಾಡುವುದಕ್ಕಾಗಿ, ಆ ಸ್ಥಾನದ ತಪೋಧನರಾದ ಇಡುಬಜೀಯ, ಸಿರಿಗಿರಿಜೀಯರುಗಳಿಗೆ ದಾನ ಕೊಟ್ಟ ದ್ದನ್ನು ಲಕ್ಷಿಸಿದರೆ, ಈ ಇಡುಬಜೀಯ ಮತ್ತು ಸಿರಿಗಿರಿಜೀಯರು, ಈಗಿನ

'ಜೀರ್‍ರು' ಎಂದಿಗೂ ಆಗಿದ್ದಿರಲಾರರು ಎಂದೇ ತೋರುವುದು. ವೀರ ಪ್ರತಾಪದೇವರಾಯನ ಹೆಂಡತಿಯಾದ ಮಲ್ಲವ್ವೆಗೆ ಪುಣ್ಯಲೋಕ ಪ್ರಾಪ್ತಿ ಯಾಗಲೋಸುಗ ಆಶೀರ್ವಾದ ಮಾಡುವಷ್ಟು ಸಾಮಾಜಿಕ ಧಾರ್ಮಿಕ ದರ್ಜೆಯು ಕ್ರಿ. ಶ. ೧೫ನೆಯ ಶತಕದಲ್ಲಿ ಈಗಿನ ಜೀರ್‍ರಿಗೆ ಇದ್ದಿರಲಿಕ್ಕಿಲ್ಲ. '**ಎಳಂಬಳ್ಳಿಯ** ದೇಕಸೆಟ್ಟಿಯು ತಾನು ಮಾಡಿದ ಶಾಂತಿನಾಥ ಬಸದಿಯ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಂ.... ಜೀಯರ ಆಹಾರ ದಾನಕ್ಕಂ, ಚಾತುರ್ವರ್ಣ ಶ್ರವಣ ಸಂಘಕ್ಕೆ ಘಟ್ಟದ ಕೊಂಡ ಕುಂದಾನ್ವಯದ ನನ್ನ ವಂಶದ ಶಾಂತಿನಾಥ **ಘಟಿಕಾಸ್ಥಾನದ ಮಂಡಳಾಚಾರ್ಯರಪ್ಪ** ಭಾನುಕೀರ್ತಿಯ ಕಾಲಂ ಕರ್ಚಿ ಕೊಟ್ಟಿರುವನು (ಸೊರಬ ನಂ. ೩೮೪). ಈ ಶಾಸನವು ಜೈನರಿಗೆ ಸಂಬಂಧಿಸಿದ್ದುದಾಗಿದೆ. ಜೀಯರಾಹಾರಕ್ಕಾಗಿ ದಾನ ಕೊಟ್ಟಿರುವುದರಿಂದ, ಜೈನಬಸದಿಯಲ್ಲಿ ಪೂಜಿಸುವವರಿಗೂ ಜೀಯ ರೆನ್ನುತ್ತಿದ್ದುದು ತಿಳಿದುಬರುವುದು. ಈ ಜೈನ 'ಜೀಯರು' ಕೇವಲ ಶೈವರಲ್ಲವೆಂದು ಈಗಿನ 'ಜೀರ್‍ರ'ರೂ ಆಗಿದ್ದಿರಲಾರರೆಂದೂ ಇಲ್ಲಿ ಸ್ಪಷ್ಟ ವಾಗಿ ಊಹಿಸಬಹುದು. ಇದಲ್ಲದೆ ಶಾಂತಿನಾಥ ಘಟಿಕಾಸ್ಥಾನದ ಭಾನುಕೀರ್ತಿಯು, ಮಂಡಳಾಚಾರ್ಯನು. ಮಂಡಳಾಚಾರ್ಯ ಜೀಯ, ಈ ಉಪಪದಗಳು ಗೌರವಪರವಾಗಿ ಜೈನರಲ್ಲೂ ಬಳಸಲಾಗು ತ್ತಿದ್ದವು. "ಈ ಜೀಯನು ತನ್ನ ದೀಕ್ಷೆಯ ಮಗ ತಿಮ್ಮಸೆಟ್ಟಿಗೆ" (ಚಿಕ್ಕ ಮಗಳೂರು ನಂ ೨೭; ೧೨೩೨ A. D.) ಎಂದಿರುವುದರಿಂದ ಪ್ರಾಚೀನ ಲಾಕುಳಜೀಯರು ದೀಕ್ಷೆ ಕೊಡುವಷ್ಟು ಪೂಜ್ಯರಾಗಿದ್ದರು. ಈಗಿನ 'ಜೀರ್‍ರು' ದೀಕ್ಷಾಕಾರ್ಯ ಮಾಡಿದರೆ ಯಾರೂ ಒಪ್ಪಲಿಕ್ಕಿಲ್ಲ. ಅದರಂತೆ 'ಮಲಕಜೀಯರ ದೀಕ್ಷೆಯ ಪುತ್ರ ಅಮಿತರಾಶಿಗೆ' ಎಂದೂ ಅನ್ನಲಾಗಿದೆ. (ಚಿಕ್ಕಮಗಳೂರು ನಂ. ೧೬; ಕ್ರಿ. ಶ. ೧೧೯೪). ಹಾಸನ (ನಂ. ೧೦೭ ಕ್ರಿ. ಶ. ೧೧೯೬) ನೆಯ ಶಾಸನದಲ್ಲಿ **ಮಾರಜೀಯರ ಮಠ** ಎಂದಿದೆ. ಇನ್ನೊಂದೆಡೆಯಲ್ಲಿ ಅಗ್ರಹಾರದ ಅಶೇಷ ಮಹಾಜನಗಳಿಗೂ, ಅಲ್ಲಿಯ ಸ್ಥಾನಾಚಾರ್ಯ ದೇವರಾಶಿಗುರುಗಳ ಮಕ್ಕಳು ಬೆಟ್ಟಗುರುಗಳು, ಜಗತ ಜೀಯ, ಚಂದಜೀಯ, ಸಂಕಜೀಯ, ನಾಗಗುರುಗಳ ಮಗ ಲಖಜೀಯ ರಿಗೂ ದೇವಸ್ಥಾನದ ಭೂಮಿಯ ಸಲುವಾಗಿ ವಿವಾದ ಉಂಟಾದಾಗ, ಪಂಚರು ನಿರ್ಣಯಿಸಿದರು. ಆ ಸ್ಥಾನಿಕರು ತಪ್ಪು ಒಪ್ಪಿಕೊಂಡು ಮಹಾ ಜನಗಳಿಗೆ ಭೂಮಿಯನ್ನು ಬಿಟ್ಟಿರುವ ಸಂಗತಿಯಿದೆ (ಅರಸಿಕೆರೆ ನಂ. ೪೯) ಜೀಯರು ಗುರುಗಳೂ ಸ್ಥಾನಿಕರೂ ಆಗಿದ್ದುದರ ನಿದರ್ಶನವಿದು.

ಲಾಕುಳಶೈವಗುರುಗಳು, ಯತಿಗಳೂ ಸ್ಥಾನಿಕರೂ ತಪೋಧನರೂ ಮಂಡಳಾಚಾರ್ಯರೂ ಆಗಿದ್ದರೆಂಬುದರಲ್ಲಿ ಸಂಶಯವಿಲ್ಲ. ಶಿವಾಲಯಕ್ಕೆ ಸಂಬಂಧಪಟ್ಟ ಮಠದ ಒಡೆಯರೂ ಆಗಿದ್ದರು. ಇವರ ಆಹಾರಕ್ಕಾಗಿ ವ್ಯವಸ್ಥೆ ಮಾಡಲಾಗುತ್ತಿತ್ತು ಕ್ರಿ. ಶ. ೧೧೩೨ನೆಯ ವರುಷದ ಶಾಸನ ದಲ್ಲಿ ತಪೋಧನರು, ಗಣಂಗಳ ಆಹಾರಕ್ಕೆಂದೂ ಕ್ರಿ. ಶ ೧೨೫೬ನೆಯ ವರ್ಷದ ಶಾಸನದಲ್ಲಿ ಏಕಕ್ಕೋಟಿ ಪಂಡಿತಮಪ್ಪ ಚಿಕ್ಕೊಡೆಯ ಎಂದೂ, ಶಿವಾಲಯದಲ್ಲಿಯ ಮಠದ ಒಡೆಯರ ಸುಯಿದಾನ ಆರೋಗಣೆಗಾಗಿ ಎಂದೂ, ಕ್ರಿ. ಶ. ೧೪೪೩ನೆಯ ವರ್ಷದ ಒಂದು ಶಾಸನದಲ್ಲಿ ಪಂಡಿತಾ ರಾಧ್ಯರು ಕತ್ತಿಯ ಮಲ್ಲೊಡೆಯರು ಎಂದೂ ಉಲ್ಲೇಖಗಳಿವೆ.

ಶಿವಾಲಯದ ಮಠ, ಒಡೆಯ, ಸುಯಿದಾನ, ಆರೋಗಣೆ ಎಂಬ ಮಾತುಗಳು ಈಗಿನ ಕಾಲದ ಜಂಗಮರಿಗೂ ಅನ್ವಯಿಸುತ್ತಿವೆ. ಗಣಂಗ ಳೆಂದು ಇಂದಿಗೂ ಜಂಗಮರಿಗೆ ರೂಢವಾದ ಹೆಸರು. ತಪೋಧನರೆಂದು ಇಂದಿಗೂ ಕೆಲವೆಡೆಗಳಲ್ಲಿ ಇವರಿಗೇನೇ ಅನ್ನುವ ರೂಢಿಯಿದೆ. ಜಂಗಮ ರಿಗೆ ಉಣಿಸುವ ಪದ್ಧತಿಯು ಹಿಂದಿನ ಕಾಲದಲ್ಲಿದ್ದಂತೆ ಇಂದಿಗೂ ಈಗಿನ ವೀರಶೈವರಲ್ಲಿದೆ ಲಾಕುಳಶೈವ ಗುರುಗಳಲ್ಲಿ ಯತಿಗಳೂ ಸಂಸಾರಿಗಳೂ ಇದ್ದಂತೆ, ಈಗಿನ ಜಂಗಮರಲ್ಲೂ ಯತಿಗಳೂ ಸಂಸಾರಿಗಳೂ ಉಂಟು. ಗೊರವವಾಡ ಅಥವಾ ಮಠವನ್ನು ದೇವಾಲಯದೊಡನೆ ಕಟ್ಟಿಸಲಾಗುತ್ತಿ ದ್ದಿತು. ಈಗ ದೇವಸ್ಥಾನವಿಲ್ಲದೆ ಪ್ರತಿ ಊರುಗಳಲ್ಲಿ ಜಂಗಮರ ಮಠ ಗಳಿವೆ. ಆಗಿನ ಕಾಲದಲ್ಲಿ ಪ್ರಸಿದ್ಧ ದೇವಸ್ಥಾನಗಳಲ್ಲಿ ತಪೋಧನ ವಿದ್ಯಾರ್ಥಿ ಗಳಿರುತ್ತಿದ್ದರು. ಈಗಿನ ಕಾಲದ ಜಂಗಮರ ಪ್ರಸಿದ್ಧ ಮಠಗಳಲ್ಲಿ ವಿದ್ಯಾರ್ಥಿಗಳಿಗೆ ವ್ಯವಸ್ಥೆಯಿದೆ. ಒಂದೇ ಮನೆಯಲ್ಲಿ ಒಬ್ಬನನ್ನು ಯತಿ ಯನ್ನಾಗಿರಿಸುವುದು, ಇತರರು ಸಂಸಾರಿಗಳಾಗಿರುವುದು ಇಂದಿಗೂ ಜಂಗಮರಲ್ಲಿ ನಡೆದುಬಂದಿದೆ. ಈ ಪದ್ಧತಿಯು ಪೂರ್ವದ ಲಾಕುಳ-ಶೈವ ಗುರುಗಳಲ್ಲೂ ಇದ್ದಿತು. ಮಠಗಳಲ್ಲಿ ದೇಶಿಕರು, ಹಿಂದಿನ ಕಾಲದಲ್ಲಿದ್ದಂತೆ, ಇರುವ ರೂಢಿಯಿದೆ. ಲಾಕುಳ ಗುರುಗಳು ಭಕ್ತರಿಗೆ ದೀಕ್ಷೆಯನ್ನು ಕೊಡುತ್ತಿದ್ದಂತೆ, ಈಗಲೂ ಜಂಗಮರು ದೀಕ್ಷಾಕಾರ್ಯವನ್ನು ಮಾಡು ತ್ತಾರೆ. ಭಕ್ತರಿಗೆ ಶಿಕ್ಷೆಯ ಮಕ್ಕಳೆಂದು ಕರೆಯಲಾಗುತ್ತಿದ್ದಿತು. ಈಗಲೂ ಭಕ್ತರು ಶಿಕ್ಷೆಯ ಮಕ್ಕಳೆಂದು ಕರೆಯಲ್ಪಡುತ್ತಾರೆ ಸ್ವಜಾತಿಯವರು ಶಿಶುಗಳು, ಮರಿಗಳು ಆಗುವ ರೂಢಿ ಜಂಗಮರಲ್ಲಿದೆ. ಗೌಡರು, ಸೆಟ್ಟರು

ಮುಂತಾದವರು ಇಂದಿಗೂ ಜಂಗಮರ ಶಿಷ್ಯರಾಗಿರುವರು. ಆಗಿನ ಕಾಲದಲ್ಲಿ ಅರಸರು ಮೊದಲುಗೊಂಡು ಗೌಡರವರೆಗೆ ಶಿಷ್ಯರಾಗಿದ್ದರು. ಲಾಕುಳ ಶೈವಗುರುಗಳಿಗೆ ಧಾರ್ಮಿಕ ಕ್ಷೇತ್ರದಲ್ಲಿ ಪ್ರಾದೇಶಿಕ ಅಧಿಕಾರವಿತ್ತು. ಈಗಲೂ ಗುರುವರ್ಗದ ಮಠಗಳ ಶಿಷ್ಯಶಾಖೆಯು ಆಯಾ ಸ್ಥಳದ ಅಧಿಕಾರವನ್ನು ನಡೆಯಿಸುತ್ತಿದೆ. ಲಾಕುಳ ಗುರುಗಳಲ್ಲಿ ಅದೇ ಸಂತತಿಯು ಬ್ರಹ್ಮಚರ್ಯವುಳ್ಳವರನ್ನು ಇರಿಸಬೇಕೆಂದು ನಿಯಮವಿದ್ದುದು ಕಂಡು ಬರುವುದಲ್ಲದೆ ದೀಕ್ಷೆಯ ಸಂತತಿಯನ್ನು ಹೇಳಲಾಗಿದೆ. ಇಂದಿಗೂ ಜಂಗಮರಲ್ಲಿ ಪುತ್ರಸಂತತಿ ಮತ್ತು ಶಿಷ್ಯಸಂತತಿಯುವರನ್ನು ಮಠಗಳಿಗೆ ಅಧಿಪತಿಗಳನ್ನಾಗಿ ಮಾಡುವ ರೂಢಿಯಿದೆ. ಈಗಿನ ಜಂಗಮರು ಮಹೇಶ್ವರರು, ಆ ಮೊದಲಿಗರಂತೆ ಅಹುದು. ಕೇದಾರ, ಶ್ರೀಶೈಲ, ಮುಂತಾದ ಶಿವಾಲಯಗಳು ಈಗಿನ ಜಂಗಮರ ಪೂಜ್ಯಸ್ಥಾನಗಳಾಗಿವೆ. ಕಾಳಾಮುಖರೂ ಇವನ್ನು ಪೂಜ್ಯಸ್ಥಾನಗಳೆಂದು ಭಾವಿಸಿದ್ದರು. ಹೂಲಿ, ಪಂಚವಣ್ಣಿಗೆ ಮುಂತಾದವುಗಳು ಈಗಿನ ಜಂಗಮರ ವಶದಲ್ಲಿವೆ. ಕೆಲವು ಪ್ರಮುಖಸ್ಥಾನದ ಗುರುಗಳನ್ನು ಮಾತ್ರ ವಿಶೇಷವಾಗಿ ಪಾಂಡಿತ್ಯವುಳ್ಳವರೆಂದು ಶಾಸನಗಳಲ್ಲಿ ಹೊಗಳಿದ್ದುದು ಕಂಡುಬರುತ್ತದೆ. ಅದರಂತೆ ಇಂದಿಗೂ ಈಗಿನ ಜಂಗಮರಲ್ಲಿ ಪ್ರಸಿದ್ಧ ಮಠಗಳ ಅಧಿಪತಿಗಳು ಪಂಡಿತರಾಗಿರುವರು. ಕೇದಾರ ಪೀಠಕ್ಕೆ ಇಲ್ಲಿಂದ ಹೋದ ಜಂಗಮ ಗುರುಗಳು ಜನ್ನಿವಾರವನ್ನು ಹಾಕಿಕೊಳ್ಳುತ್ತಾರೆಂದೂ, ಅದಿಲ್ಲದೆ ಅಲ್ಲಿ ರಾಜರು ಮನ್ನಣೆ ಮಾಡುವುದಿಲ್ಲೆಂದೂ, ನಾವು ಕೇಳಿರುವೆವು. ಇದು ನಿಜವಿದ್ದಲ್ಲಿ ಇದು ಕಾಳಾಮುಖರ ಪರಂಪರೆ ಇದ್ದಿರಬಹುದಲ್ಲವೆ ? ಈ ಎಲ್ಲ ಸಂಗತಿಗಳನ್ನು ಪರ್ಯಾಲೋಚಿಸಿದರೆ ಪೂರ್ವದ ಲಾಕುಳ ಗುರುಗಳು ಈಗಿನ ಜಂಗಮರ ಪೂರ್ವಜರೆಂದು ನಿರ್ಧಾರವಾಗುವುದು. ದೇವಸ್ಥಾನಗಳಲ್ಲಿಯ ಸ್ಥಾವರಲಿಂಗೋಪಾಸನೆ ಮತ್ತು ತತ್ಸಂಬಂಧವಾದ ಭೂ-ವೃತ್ತಿ ಇವೆರಡನ್ನು ಕಳೆದುಳಿದದ್ದೇ ಈಗಿನ ಜಂಗಮರ ಸಂಸ್ಥೆಯೆಂದು ಸ್ಪಷ್ಟವಾಗಿ ಹೇಳಬಹುದು. ಅದೇ ಪೂರ್ವದ ಧಾರ್ಮಿಕ ಸಂಸ್ಥೆ, ಅದೇ ವ್ಯವಸ್ಥೆ, ಅದೇ ಸಮಾಜ; — ರೂಪ ಬೇರೆಯಷ್ಟೆ. ಈಗಿನ ಗುರುವರ್ಗದ ಮಠಗಳು ಕ್ರಿ. ಶ. ಏಳನೆಯ ಶತಮಾನದಿಂದ ಈ ಇಪ್ಪತ್ತನೆಯ ಶತಮಾನದವರೆಗೆ ಅಚ್ಚಳಿಯದೆ ಉಳಿದುಕೊಂಡು ಬಂದಿವೆ. ಇಷ್ಟೊಂದು ಪ್ರಾಚೀನ ಕಾಲದ ಧಾರ್ಮಿಕಸಂಸ್ಥೆಯು ಬ್ರಾಹ್ಮಣರ ಸಂಸ್ಥೆಯ ವಿನಾ ಬೇರೊಂದಿಲ್ಲ. ಶಾಸನಗಳ ಆಧಾರದಿಂದ ಈ ಮಾತು ನಿಶ್ಚಿತವಾಗುವುದು. ಶಾಸನಗಳು

ರೂಢವಾಗುವುದಕ್ಕಿಂತ ಪೂರ್ವದಲ್ಲಿಯ ಗುರುಗಳ ಸಂಸ್ಥೆಯು ಅಜ್ಞಾತವಾಗಿದೆ.

ಬಸವೇಶ್ವರರ ವಚನಗಳಲ್ಲಿ "ಸ್ಥಾವರಜಂಗಮ ಒಂದೇ" ಎಂದಿರುವುದನ್ನೂ, "ಜಂಗಮದಲ್ಲಿ ಜಾತಿಯನೆಣಿಸೆ" ಎಂದು ಹರಿಹರನ ಕಾವ್ಯದಲ್ಲಿ ಮೇಲಿಂದಮೇಲೆ ಬಂದಿರುವುದನ್ನೂ, ಈ ಮೇಲಿನ ಧಾರ್ಮಿಕ ಇತಿಹಾಸದೊಡನೆ ತುಲನಾತ್ಮಕವಾಗಿ ಪರಿಶೀಲಿಸಿದರೆ, ಮುಖ್ಯವಾಗಿ ಎರಡು ಸಂಗತಿಗಳಲ್ಲಿ ಪರಿವರ್ತನೆಯಾದದ್ದು ಕಂಡುಬರುವುದು ಸ್ಥಾವರಲಿಂಗೋಪಾಸನೆಯು ಬದಲಾಗಿ ಅದಕ್ಕೆ ಸರಿಸಮಾನವಾಗಿ ಜಂಗಮಕ್ಕೆ ಬೆಲೆಯುಂಟಾದದ್ದು ಮೊದಲನೆಯದು. ಜಾತಿವಿರಹಿತರಾದ ಎಲ್ಲರಿಗೂ ಜಂಗಮತ್ವ ಬಂದದ್ದು ಎರಡನೆಯದು. ಈಗಿನ ಜಾತಿವಿಶಿಷ್ಟ ವಾಚಕವಾದ ಜಂಗಮ ಶಬ್ದವು ಬೇರೆ; ಬಸವಣ್ಣನವರ ವಿಷಯದಲ್ಲಿ "ಜಂಗಮದಲ್ಲಿ ಜಾತಿಯನೆಣಿಸೆ" ಎಂದು ಹರಿಹರನು ಹೇಳಿದ್ದುದು ಬೇರೆ. ಈಗಿನ ಜಾತಿವಿಶಿಷ್ಟರಾದ ಜಂಗಮರು, ಮತ್ತು ಪೂರ್ವದಲ್ಲಿ ಲಾಕುಳ-ಶೈವ ಗುರುಗಳು ಒಂದೇ ಜನಾಂಗವು ಲಾಕುಳ ಗುರುಗಳಲ್ಲಿ ಅನ್ಯಜಾತಿಯವರು ಕ್ವಚಿತ್ತಾಗಿ, ಅಪರೂಪವಾಗಿ, ವಿರಕ್ತರಾಗಿರುತ್ತಿದ್ದುದನ್ನು ನಾವು ಹಿಂದಿನ ಪ್ರಕರಣದಲ್ಲಿ ಚರ್ಚಿಸಿರುವೆವು. ಅವರೂ ಸ್ಥಾವರಲಿಂಗವನ್ನು ಸ್ಥಾಪಿಸಿ, ದೇವಾಲಯಗಳನ್ನು ಕಟ್ಟಿಸಿಕೊಂಡು ಅಲ್ಲಿಯೇ ಇರುತ್ತಿದ್ದರು. ಇಂತಹವರು ಅನಂತರ ವಚನಕಾರರೆಂದು ಪರಿಗಣಿಸಲ್ಪಟ್ಟಿರುವರು ಆದಾಗ್ಯೂ ಸಮಾಜದಲ್ಲಿ ವಿಶೇಷ ಪರಿವರ್ತನೆಗೆ ಕಾರಣೀಭೂತವಾದದ್ದು ಶಾಂಭವೀ ದೀಕ್ಷೆ ಮತ್ತು ಶಾಂಭವೀವ್ರತ ಸ್ಥಾವರಲಿಂಗೋಪಾಸನೆಯು ಹಿಂದಕ್ಕೆ ಬಿದ್ದು "ದೇಹವೇ ದೇಗುಲ"ವೆಂಬ ಭಾವನೆಯು ರೂಢವಾಗಿ ಸಕಲ ಜಾತಿಯವರು ಜಂಗಮರೆಂದು ಪರಿಗಣಿತವಾದದ್ದು ಅದಕ್ಕೂ ಮುಂದಿನ ಕಾಲದಲ್ಲಿ, ಸ್ಥಾವರಲಿಂಗದ ಬದಲಾಗಿ ಈ ಸಂಪ್ರದಾಯವು ಪ್ರಬಲವಾಗಿದೆ. ಈ ಶಾಂಭವೀದೀಕ್ಷೆಯಾದರೂ ಕಾಳಾಮುಖದೀಕ್ಷೆಯಂತೆ ಸೂತಸಂಹಿತೆಯ ಅಭಿಪ್ರಾಯದ ಮೇರೆಗೆ ಬ್ರಾಹ್ಮಣರಿಗೆ ಸಲ್ಲದು. ಕಾಲಕ್ಕನುಸಾರವಾಗಿ ಧಾರ್ಮಿಕ ಆಚಾರಗಳಲ್ಲಿ ಪರಿವರ್ತನೆಯಾಗಿ "ದೇವತಾಭವನ"ಗಳು ಹಿಂದಕ್ಕೆ ಬಿದ್ದರೂ ಆ ಭಾವನೆಯು ಸಂಪೂರ್ಣವಾಗಿ ನಾಮಶೇಷವಾಗದೆ "ಶಿವಶರಣರ" ಸಮಾಧಿಗಳ ಮೂಲಕ ಸಮಾಜದಲ್ಲಿ ವ್ಯಕ್ತವಾಗುವುದು ಪ್ರಾರಂಭವಾಗತೊಡಗಿದೆ. ಶಿವಶರಣರ

ಸಮಾಧಿಗಳಲ್ಲಿ ದೊಡ್ಡ ದೊಡ್ಡ ಕಟ್ಟಡಗಳನ್ನು ಕಟ್ಟಿಸಿ, ಜಾತ್ರೆಗಳನ್ನು ನೆರೆಯಿಸುವುದು ಕೂಡ ಆ ಮೂಲಭಾವನೆಯ ರೂಪಾಂತರವೆಂದೇ ಹೇಳಬಹುದು. ಶಿವಶರಣರೆ ದೇವತಾಪುರುಷರು; ಅವರ ಸಮಾಧಿಗಳಿಗೆ ಪೂರ್ವದ ದೇವಾಲಯಗಳಿಗಿದ್ದಷ್ಟು ಮಹತ್ವ; ಅದೇ ಭಕ್ತಿಭಾವನೆಯ ಕೇಂದ್ರ, ಸಾಮಾನ್ಯ ಜನರಿಗೆ.

ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು ಷಿಕಾರಿಪುರದ ೧೨೩ನೆಯ ಶಾಸನಾಧಾರದಿಂದ "ತಮ್ಮ ಆರಾಧ್ಯರಪ್ಪ" ಎಂಬ ಶಬ್ದ ಪ್ರಯೋಗವನ್ನನುಲಕ್ಷಿಸಿ 'ಕಾಳಾಮುಖರಿ'ಗೆ 'ಆರಾಧ್ಯ' ಎಂಬುದು ರೂಢಿಯಿತ್ತೆಂದೂ, ಬಸವಣ್ಣನವರು ಈ ಆರಾಧ್ಯ ಕುಲದಲ್ಲಿ ಜನಿಸಿ, ಕೆಲವು ಮಾರ್ಪಾಟುಗಳನ್ನು ಮಾಡಿದರೆಂದೂ, ಆದುದರಿಂದ ಬಸವಣ್ಣನವರಿಗಿಂತ ಹಿಂದೆಯೇ ಲಿಂಗಧಾರಣೆಯಿದ್ದಿರಬೇಕೆಂದೂ ಊಹಿಸಿರುವರು.

ಆರಾಧ್ಯ ಶಬ್ದದಿಂದಲೂ, ಆರಾಧ್ಯ ಬ್ರಾಹ್ಮಣರಲ್ಲಿ ಲಿಂಗಧಾರಣೆ ಇದ್ದುದರಿಂದಲೂ ಈ ತರದ ಊಹೆ ಮಾಡಿದಂತೆ ತೋರುತ್ತದೆ. ಆರಾಧ್ಯರಲ್ಲಿ ಲಿಂಗಧಾರಣೆಯಿದ್ದುದೇನೋ ನಿಜವಾದ ಸಂಗತಿ ಆದರೆ ಬಸವಣ್ಣನವರು ಈ ಆರಾಧ್ಯರ ಕುಲದಲ್ಲಿ ಜನಿಸಿದರೆಂಬುದಕ್ಕೆ ಬಲವಾದ ಆಧಾರವಿಲ್ಲ. ಹರಿಹರನ ಕಾಲದ ವಿಷಯದಲ್ಲಿ ಪಂಡಿತರಲ್ಲಿ ಭಿನ್ನಾಭಿಪ್ರಾಯಗಳಿವೆ. ಆದರೆ ಎಲ್ಲ ವೀರಶೈವ ಕನ್ನಡಕವಿಗಳಿಗಿಂತ ಇವನು ಪ್ರಾಚೀನನೆಂಬುದರಲ್ಲಿ ವಿವಾದವಿಲ್ಲ. ಬಸವರಾಜ ದೇವರ ರಗಳೆಯಲ್ಲಿ ಕಮ್ಮೆ ಕುಲದಲ್ಲಿ ಬಸವರಾಜನು ಜನಿಸಿದನೆಂದು ವರ್ಣನೆಯಿರುವುದು (ಪರಿಷ್ಕೃತ ಮೈಸೂರಿನ ಪ್ರತಿ). ಕಮ್ಮೆ ಬ್ರಾಹ್ಮಣರು ಬೇರೆ, ಆರಾಧ್ಯ ಬ್ರಾಹ್ಮಣರು ಬೇರೆ ಸಂಶೋಧಕರಾದ ವೈ. ನಾ. ರಾಜಪುರೋಹಿತರು 'ಕಮ್ಮೆ' ಸ್ಥಳದಲ್ಲಿ 'ಕಣ್ವ' ಇರಬೇಕೆಂದು ಪ್ರತಿಪಾದಿಸಿರುವರು. ಇಂಥ ಪ್ರಸಂಗದಲ್ಲಿ ತರ್ಕಕ್ಕಿಂತ ಪ್ರಾಚೀನ ಪ್ರತಿಗಳ ಪಾಠಕ್ಕೆ ಹೆಚ್ಚು ಬೆಲೆ. 'ಕಣ್ವ' ಎಂಬ ಶಬ್ದವಿದ್ದ ಹಳೇ ಪ್ರತಿಯು ದೊರೆಯುವವರೆಗೆ 'ಕಣ್ವಕುಲ' ಎಂದು ಅಂಗೀಕರಿಸಲು ಬರುವಂತಿಲ್ಲ. ಈಗಿನ ಸ್ಥಿತಿಯಲ್ಲಿ 'ಕಮ್ಮೆ' ಶಬ್ದವು ಇದ್ದುದು ನಮಗೆ ತಿಳಿದುಬಂದಿದೆ. 'ಕಣ್ವ' ಶಬ್ದವು ಇದ್ದಿರಬಹುದು, ಆದರೆ ಪ್ರತಿಗಳಲ್ಲಿ 'ಪಾಠ'ಗಳ ಬೆಂಬಲವಿಲ್ಲದೆ ಬರೇ ತರ್ಕವಷ್ಟೇ. ಇನ್ನು 'ಆರಾಧ್ಯ' ಶಬ್ದದ ಪ್ರಯೋಗಗಳನ್ನು ನೋಡೋಣ, ಶಾಸನಗಳಲ್ಲಿ.

## " ಆರಾಧ್ಯ "

ಕಾಮೆಯ ಕೇತಯನಾಯಕರು ತಮ್ಮ ಆರಾಧ್ಯರಪ್ಪ ಶಿವಶಕ್ತಿ ದೇವರ ಉಪದೇಶದಿಂ ಸ್ವಹಸ್ತವಾಗಿ ಕೊಟ್ಟ (ಅರಸಿಕೆರೆ ನಂ. ೪೭; ಕ್ರಿ. ಶ. ೧೧೫೩); ಅದಳಕುಳ ಮಲ್ಲಿದೇವನ ಮಗ ಗಂಗನು ಶಕೆ ೧೧೮೧ ರಲ್ಲಿ ಜಿಡಹದಲು ತಮ್ಮ ಆರಾಧ್ಯರು ಸ್ವಸ್ತಿ ಶ್ರೀಮತ್ಪರಮಯೋಗೀಂದ್ರ ಸಕಳ ಕಳಾ......ಶಿವಯೋಗಿ ಚಕ್ರವರ್ತಿ ಹಿರಿಯ ಅಘುಮ್ಯ ಸೋಮನಾಥ ದೇವರ ಪ್ರತಿಷ್ಠೆ ಮಾಡಿ ಆ ದೇವರ ಅಮೃತಪಡಿಯ ಕಾರ್ಯ್ಯಕ್ಕಾಗಿ ಗದ್ದೆ ಕೊಟ್ಟನು (ಅರಸಿಕೆರೆ ನಂ ೨೮; ಕ್ರಿ. ಶ. ೧೨೫೯); ನದಿಶ್ರೇಣಿಯೊಳ್ ಗಂಗೆಯುಗ್ಗಳವೆಂತಾರಾಧ್ಯಂ, ಬ್ರಾಹ್ಮತ್ತನಿಯೊಗಿ ನಿವಹಾರಾಧ್ಯನ್. ಈ ಮೇಲಿನ ಶಾಸನಗಳಲ್ಲಿ ಗುರುಗಳು, ಶ್ರೇಷ್ಠರು, ಪೂಜೆಗೆ ಅರ್ಹರು ಎಂಬ ಅರ್ಥದಲ್ಲಿ ಆರಾಧ್ಯ ಶಬ್ದದ ಉಪಯೋಗವಾಗಿದೆ. ಅದರಂತೆ ರಾಜಗುರು, ಮಂಡಳಾಚಾರ್ಯ್ಯ, ಸಮಯ ಚಕ್ರವರ್ತಿ **ಬ್ರಹ್ಮರಾಶಿ** ಗುರುಗಳ ಮಕ್ಕಳು ಕುಮಾರ ಸೋಮೇಶ್ವರ ದೇವರು **ತಮ್ಮ ಗುರುಗಳು, ಮಲೆಯಾಳ ಜೀಯಗ್ಗಳಂ** (ಅರಕಲಗೂಡು ನಂ ೯೩, ಕ್ರಿ. ಶ. ೧೦೬೬); ರಾಜಗುರು ರುದ್ರಶಕ್ತಿ, ಬಾಚಲೇಶ್ವರಸಿದ್ಧಗುರುಗಳ ಮಕ್ಕಳು ಚೈತಗುರುಗಳು (ಅ.ಕೆ ನಂ. ೧೪); ಕೇದಾರ ಗುರುಗಳು (ಬೇಲೂರು ನಂ. ೧೬೮, ಕ್ರಿ ಶ ೧೨೧೩); ಈ ಶಾಸನಗಳಲ್ಲಿಯ " ಗುರುಗಳು " ಎಂಬ ಶಬ್ದಗಳು ಗೌರವಾರ್ಥ ವಾಗಿಯೂ ಒಬ್ಬ ವ್ಯಕ್ತಿಯ ಗುರುವೆಂದೂ ಬಳಸಲಾಗಿವೆ. ಅದರಂತೆ 'ಗೊರವ' ( S I. Insc. ಪೊದಟೂರು ನಂ. ೬೮), 'ಲಗುಡಿಗರು' ( S. I. Inscr. Mad No. 107) 'ಮಹಾರೂಪುಗಳು' (ಅ ಕೆ. ನಂ. ೭೯-೧೧೯೦ ಮತ್ತು ನಂ. ೮೧-೧೧೮೮), ' ಗಣಂಗಳು ' (ಹೇಮಾವತಿ-೯ನೇ ಶತಕ ) ತಮ್ಮ ಗುರುಗಳು ಅಂಕರಾಶಿಗಳ್ಗೆ ಧಾರಾಪೂರ್ವಕ ವಾಗಿ (ಬೇಲೂರ ನಂ. ೫೮-೧೨೨೬), ಸೆಟ್ಟಿಯರ ಮಗಳು ಅಯ್ಯಾವಳಿಯ ತಮ್ಮ ತಂದೆಯ ಹೆಸರಿನಲ್ಲಿ ಬಲ್ಲಾಳಸೆಟ್ಟಿಯ ದೇಮೇಶ್ವರ ವಿಶ್ವನಾಥ ಗುರುಗಳ್ಗೆ ಪಾದಪ್ರಕ್ಷಾಳನ ಮಾಡಿ... (ಹೊಳಲ್ಕೆರೆ ನಂ. ೧೨೪-೧೨೦೮) ಈ ರೀತಿಯಾಗಿ ಆರಾಧ್ಯರೆಂದೂ, ಗುರುಗಳೆಂದೂ ಒಂದೇ ಅರ್ಥದಲ್ಲಿ ಬಳಸಲಾಗಿವೆ ಆರಾಧ್ಯಶಬ್ದಕ್ಕೆ ಪೂಜ್ಯರೆಂದು ಇಷ್ಟೇಯರ್ಥ. ಆರಾಧ್ಯ ಬ್ರಾಹ್ಮಣರು ಎಂದು ಅರ್ಥ ಹೊರಡುವುದಿಲ್ಲ. ಮೈಸೂರು ಪ್ರಾಂತದಲ್ಲಿ ಜಂಗಮರೂ ಆರಾಧ್ಯರೆಂದು ಉಪಪದವನು ಹಚ್ಚಿಕೊಳ್ಳುತ್ತಾರೆ.

ಇದಲ್ಲದೆ ಲಾಕುಳಶೈವ ಗುರುಗಳಲ್ಲಿ ಲಿಂಗಧಾರಣೆಯಿತ್ತೆಂದು ಇಷ್ಟರಿಂದಲೇ ಹೇಳಲು ಬಾರದು. ಈ ವಿಷಯವನ್ನು ಹಿಂದಿನ ಪ್ರಕರಣಗಳಲ್ಲಿ ಅಲ್ಪ ಸ್ವಲ್ಪ ನಿರ್ದೇಶ ಮಾಡಲಾಗಿದೆ. ಮಹಾಕೂಟ, ಕಾಳಕಾಳೇಶ್ವರ ಮುಂತಾದ ಸ್ಥಳಗಳಲ್ಲಿ ಕಾಳಾಮುಖರ ಪ್ರತಿಮೆಗಳಿವೆ. ಅಲ್ಲಿಯ ಪ್ರಾಚೀನ ಪ್ರತಿಮೆಗಳಲ್ಲಿ ಇಷ್ಟಲಿಂಗಧಾರಣೆಯ ಯಾವ ಕುರುಹುಗಳಿಲ್ಲ. ಇದು ಪ್ರತ್ಯಕ್ಷ ಪ್ರಮಾಣ. ಶಾಸನಗಳಲ್ಲಿ ಕಾಳಾಮುಖರ ವರ್ಣನೆಗಳು ಬಂದಿವೆ. ಆ ವರ್ಣನೆಗಳಲ್ಲೂ ಲಿಂಗದ ವರ್ಣನೆಯಿಲ್ಲ. ಸೊರಬ ನಂ. ೨೭೫ನೆಯ ಶಾಸನದಲ್ಲಿ ಚಿಕ್ಕಸರ್ವೇಶ್ವರ ಯತಿಯ ವರ್ಣನೆಯಿದೆ. ಅದರಲ್ಲಿ ಜಡೆ, ಭಸ್ಮ, ಕಾಶಾಪಚ್ಛಾದಿಗಳ ವರ್ಣನೆಯಿದೆ; ಆದರೆ ಲಿಂಗದ ವರ್ಣನೆ ಎಲ್ಲಿಯೂ ಇಲ್ಲ "ಧವಳತನು. ಕೆಂಜಡೆ, ಸುಲಿಪಲ್ಲು, ವರಮುದ್ರೆ ಲಾಕುಳ ಸಲಕ್ಷಣವೊಗೆದನೆಂದು ಮರುಗೇಶ್ವರ ಮುನಿಪ" ಎಂದಿರುವುದು. (ಹಾಸನ ನಂ. ೬೯; ೧೧೫೫ A. D.); ಲಿಂಗದ ವರ್ಣನೆಯಿಲ್ಲ. ಅಭಿನವ ಪಾಶುಪತಾಚಾರ್ಯರಪ್ಪ ಸಪ್ತಹತ್ತರಿ ಸ್ಥಾನಾಚಾರ್ಯರಪ್ಪ ತಪಚಕ್ರವರ್ತಿ ಮಲೆಯಾಳದೇವ ಬ್ರತಿಗಳ ಪ್ರಶಿಷ್ಯ ಸೋಮೇಶ್ವರ ಮಹಾಬ್ರತಿಯ ವರ್ಣನೆಯಲ್ಲೂ ಜಡೆ, ಲಾಕುಳ, ವರಮೇಖಲೆಗಳನ್ನು ಹೇಳಿದೆ; ಲಿಂಗದ ಹೆಸರಿಲ್ಲ. ಈ ಶಾಸನದ ಕಾಲ ಕ್ರಿ. ಶ. ೧೨೨೬ (ಕೂಡ್ಲಗಿ ನಂ. ೩೪೩). ಈ ಎಲ್ಲ ಕಾರಣಗಳಿಂದ ಲಾಕುಳ-ಯತಿಗಳಿಗೆ, ಕಾಳಾಮುಖರಿಗೆ 'ಲಿಂಗಧಾರಣೆ' ಇದ್ದಿಲ್ಲವಷ್ಟೇಯಲ್ಲ, ಅವರು ಆರಾಧ್ಯ ಬ್ರಾಹ್ಮಣರೂ ಅಲ್ಲ ಎಂದು ನಿಷ್ಪನ್ನವಾಗುವುದು. ಅವರು ಈಗಿನ ಜಂಗಮರ ಪೂರ್ವಜರು; ವೀರಶೈವಗುರುಗಳಾಗಿ ರೂಪಾಂತರ ಹೊಂದಿರುವರಷ್ಟೆ. ಲಿಂಗಧಾರಣೆಯು ಎಂದಿನಿಂದ ಹೇಗೆ ಪ್ರಾರಂಭವಾಯಿತೆಂಬುದು ಬೇರೆ ವಿಷಯವಾಗಿದೆ. ಅದು ಜಟಿಲ ಪ್ರಶ್ನೆಯು

ಈ ಪ್ರಕರಣವನ್ನು ಮುಗಿಸುವುದಕ್ಕಿಂತ ಮೊದಲು ಇನ್ನೊಂದು ವಿಷಯವನ್ನು ಹೇಳುವುದು ಆವಶ್ಯಕವಾಗಿದೆ. 'ರಾಮಾನುಜಾಚಾರ್ಯರ ಶ್ರೀಭಾಷ್ಯದ ಆಧಾರದಿಂದ ಇವರು ಘೋರಕರ್ಮಿಗಳೆಂದು (Horrible Class of Shaivas) ಕಾಪಾಲಿಕರೊಡನೆ ಕಾಳಾಮುಖರನ್ನು ಡಾ॥ ಭಾಂಡಾರಕರರವರು ತಮ್ಮ Shaivism & Vaishnavism and other minor Sects ಎಂಬ ಗ್ರಂಥದಲ್ಲಿ ಬರೆದಿರುವರು. ಕಾಳಾಮುಖದೀಕ್ಷೆಯ ಸ್ವರೂಪವೇನಿತ್ತೆಂದು ತಿಳಿಯದ ವಿನಾ ಈ ವಿಷಯದಲ್ಲಿ

ಏನೂ ಹೇಳಲಿಕ್ಕೆ ಬರುವಂತಿಲ್ಲ. ಲಾಕುಳಾಗಮವು ಉಪಲಬ್ಧವಿಲ್ಲ. ಯಾವುದೋ ವಾಮಾಚಾರಕ್ಕೆ ಸಂಬಂಧಿಸಿದ ಶಾಕ್ತದೀಕ್ಷೆಯಾಗಿದ್ದಿರಬೇಕೆಂದು ನಾಗಾರ್ಜುನನ ಕಕ್ಷಪುಟಿಯಲ್ಲಿಯ ವಿಷಯಗಳಿಂದ ಊಹಿಸಬಹುದಷ್ಟೆ. ಕರ್ನಾಟಕದಲ್ಲಿ ಈ ಮತವು ಕ್ರಿ. ಶ ಏಳನೆಯ ಶತಮಾನದಿಂದ ಕಾಣಿಸಿಕೊಳ್ಳುತ್ತ, ಕ್ರಿ. ಶ ಹತ್ತನೆಯ ಶತಕದಲ್ಲಿ ತಲೆಯೆತ್ತಿ ಕ್ರಿ. ಶ. ೧೧, ೧೨, ೧೩ ನೇ ಶತಕಗಳಲ್ಲಿ ಉತ್ಕರ್ಷ ಸ್ಥಿತಿಯಲ್ಲಿದ್ದು, ಕ್ರಿ. ಶ. ೧೪ನೆಯ ಶತಮಾನದಲ್ಲಿ ತುರುಕರ ದಾಳಿಯ ಅಶಾಂತತೆಯ ಕಾಲದಲ್ಲಿ ಅಳಿದುಳಿದು, ವಿಜಯನಗರದ ಅರಸರ ಕಾಲದಲ್ಲಿ— ಕ್ರಿ ಶ. ೧೫ ಮತ್ತು ೧೬ನೆಯ ಶತಮಾನಗಳಲ್ಲಿ ಜೀವವಿಡಿದುಕೊಂಡು, ಕ್ರಿ. ಶ. ೧೭ನೆಯ ಶತಮಾನದಲ್ಲಿ ಸಂಪೂರ್ಣವಾಗಿ ನಾಮಶೇಷವಾಗಿದೆ. ಈ ಮತಕ್ಕೆ ಎರಡು ಕುತ್ತಿನ ಪ್ರಸಂಗಗಳು ಬಂದದ್ದುಂಟು ಕ್ರಿ. ಶ. ೧೪ನೆಯ ಶತಮಾನದಲ್ಲಾದ ತುರುಕರ ದಾಳಿಯೊಂದು ಬಾಹ್ಯದ ಕುತ್ತು; ಕ್ರಿ. ಶ. ೧೫ನೆಯ ಶತಮಾನದಲ್ಲಿ ವಿಜಯನಗರದ ಅರಸರ ಕಾಲದಲ್ಲಾದ ವಿರಕ್ತರ ಪುನರ್ಘಟನೆಯ ಸಾಂಸ್ಕೃತಿಕ ಚಳವಳಿಯು ಎರಡನೆಯದು; ಇದು ಆಂತರಿಕವಾದದ್ದು. ಹಿಂದೆ ಕೊಟ್ಟಿರುವ ಲಾಕುಳ ಗುರುಗಳ ಹೆಸರುಗಳ ಪಟ್ಟಿಗಳಿಂದ ಈ ಮಾತುಗಳ ಸತ್ಯತೆಯ ಪ್ರತೀತಿಯಾಗುವುದು ಒಟ್ಟಿನ ಮೇಲೆ ಕರ್ನಾಟಕದಲ್ಲಿಯ ಕಾಳಾಮುಖರು ಘೋರಕರ್ಮಿಗಳೆಂಬುದಕ್ಕೆ ಸದ್ಯಕ್ಕಂತೂ ಯಾವ ನಿದರ್ಶನವೂ ಇಲ್ಲ. ರಾಜರ ಮನ್ನಣೆಯನ್ನು ಹೊಂದಿದ್ದು, ರಾಜ್ಯದ ಏರಿಳಿತಕ್ಕೂ ಈ ಮತಕ್ಕೂ ನಿಕಟ ಸಂಬಂಧವಿದ್ದುದು ಕಂಡು ಬರುತ್ತದೆ. ಇಡೀ ಹಿಂದುಸ್ಥಾನದ ದೃಷ್ಟಿಯಿಂದಲೂ ಈ ಮಾತು ದೃಢಪಡುತ್ತದೆ. ಅಂತೂ ದೇವಾಲಯಗಳ ಉದಯ, ಹೆಚ್ಚಳ, ಅಳಿಗಾಲಕ್ಕೆ ರಾಜ್ಯಗಳ ಸುಸ್ಥಿರತೆಯೇ ಮುಖ್ಯ ಕಾರಣವೆಂದು ಹೇಳಬಹುದು. ರಾಜ್ಯಗಳು ನಷ್ಟವಾಗುವ ಸಂಕ್ರಮಣ ಕಾಲದಲ್ಲಿ ಹೊಸ ಭಕ್ತಿಪಂಥಗಳು ತಲೆದೋರಿವೆ. ದೇವಾಲಯಗಳ ಬದಲಾಗಿ ಗುರುಮಾರ್ಗಕ್ಕೆ ಮಹತ್ವ ಬಂದಿದೆ. ಈ ಭಕ್ತಿಪಂಥಗಳಿಂದ ದೇಶಭಾಷೆಗಳಿಗೆ ಹೆಚ್ಚು ಪ್ರೋತ್ಸಾಹ ಉಂಟಾಗಿದೆ.

ಕರ್ನಾಟಕದ ಧಾರ್ಮಿಕ ಇತಿಹಾಸಕ್ಕೆ ಸಂಬಂಧಪಟ್ಟ ಇನ್ನೊಂದು ವಿಷಯವನ್ನು ಕುರಿತು ಹೇಳಬೇಕಾಗಿದೆ. ವೀರಶೈವರಲ್ಲಿ ಆಚಾರ್ಯರೆಂದು ಪ್ರಸಿದ್ಧಿಯನ್ನು ಪಡೆದ, ರೇವಣಸಿದ್ಧ, ಮರುಳಸಿದ್ಧ, ಪಂಡಿತಾ

ಚಾರ್ಯ, ಏಕೋರಾಮ, ವಿಶ್ವೇಶ್ವರಾಚಾರ್ಯ, ಪಂಚಾಚಾರ್ಯ, ಚತುರಾಚಾರ್ಯರ ಹೆಸರುಗಳು ಶಾಸನಗಳಲ್ಲಿ ಸಿಕ್ಕುವದಿಲ್ಲ. ಆದರೆ ಕೇದಾರ, ವಾರಣಾಸಿ, ಶ್ರೀಪರ್ವತ, ಕುರುಕ್ಷೇತ್ರ, ಪ್ರಯಾಗ ಮುಂತಾದ ಪ್ರಸಿದ್ಧ ಪುಣ್ಯಕ್ಷೇತ್ರ ತೀರ್ಥಗಳ ಹೆಸರುಗಳು ಸಾವಿರಾರು ಕಡೆ ಫಲಶ್ರುತಿಯಲ್ಲಿ ಬರುತ್ತವೆ. ಅದರಂತೆ ರಾಮೇಶ್ವರ ತೀರ್ಥದ ಮಲೆಯಾಳ ಗುರುಗಳ ಮಠವು ಮಾತ್ರ ಪ್ರಸಿದ್ಧವಾಗಿದ್ದುದು ತಿಳಿದುಬರುತ್ತದೆ. ಒಂದು ಶಾಸನದಲ್ಲಿ ಈ ಮಲೆಯಾಳ ಗುರುಗಳ ಮಠವಿದ್ದುದು ಉಜ್ಜನಿಯೆಂದು ಬರುವುದು. ಅದು ಮುದಿನೀರ ರಾಮೇಶ್ವರ ತೀರ್ಥದ ಮಲೆಯಾಳ ಗುರುಗಳ ಸ್ಥಾನವಾಗಿತ್ತು. ಶ್ರೀಪರ್ವತದ ಅಗಸ್ತ್ಯೇಶ್ವರದ ಮಠದ ಪರಂಪರೆಯು ಬಂದಿರುವುದು ಕಾಶ್ಮೀರ ಸಂತಾನದ ಗುರುಗಳ ಉಲ್ಲೇಖವೂ ದೊರೆಯುತ್ತದೆ. ಈ ಮಠ–ಪರಂಪರೆಯು ಕೇದಾರಕ್ಕೆ ಸಂಬಂಧಿಸಿತ್ತೆಂದು ಊಹಿಸಬಹುದು. ಕೇದಾರವು ಕಾಶ್ಮೀರಕ್ಕೆ ಸಮೀಪವಾದ ಕ್ಷೇತ್ರವು. ವಾರಣಾಸಿ ಕ್ಷೇತ್ರದಲ್ಲಿ ವಿಶ್ವೇಶ್ವರಾಚಾರ್ಯರ ಸಂಬಂಧವಿರುವುದು ಸರಿಯೆ ದ್ರಾಕ್ಷಾರಾಮದ ಉಲ್ಲೇಖವಿಲ್ಲ ಈ ರೀತಿಯಾಗಿ ಒಂದೊಂದು ಪುಣ್ಯತೀರ್ಥಕ್ಕೆ, ಕ್ಷೇತ್ರಕ್ಕೆ ಕ್ರಮವಾಗಿ ಒಂದೊಂದು ಮಠದ ಸಂಬಂಧವಿದ್ದುದು ಕಂಡುಬರುವುದು. ಶಾಸನಗಳಲ್ಲೂ ಈ ಮಠಗಳ ಗುರುಗಳು ಪೂಜ್ಯರಾಗಿದ್ದುದು ಕಂಡುಬರುವುದು. ಏನೇಯಾದರೂ ಈ ಆಚಾರ್ಯರ ಹೆಸರುಗಳು ಮಾತ್ರ ಶಾಸನಗಳಲ್ಲಿ ಇಲ್ಲವೆಂದೇ ಹೇಳಬಹುದು.

ಈ ಆಚಾರ್ಯಪುರುಷರು ಎಲ್ಲರೂ ಬಹುತರವಾಗಿ ದಕ್ಷಿಣದೇಶದವರು, ಆಂಧ್ರ ಪ್ರಾಂತಕ್ಕೆ ಸಂಬಂಧಿಸಿದವರು. ಹೊಸದಾಗಿ ಶ್ರೀಕಂಠಶಿವಾಚಾರ್ಯರಂಥವರು ಶಕ್ತಿವಿಶಿಷ್ಟಾರ್ಥಪರವಾಗಿ ಸಿದ್ಧಾಂತ ಗ್ರಂಥವನ್ನು ಬರೆದರು. ಗುರುಮಾರ್ಗವು ಪ್ರಾರಂಭವಾಯಿತು. ದೀಕ್ಷೆಯ ಕಾಲದಲ್ಲಿ ನಾಲ್ಕು ದಿಕ್ಕಿನಲ್ಲಿ ನಾಲ್ಕು ಕಳಸ ಮತ್ತು ಮಧ್ಯದಲ್ಲಿ ಸಾಕ್ಷಾತ್ ಗುರುವಿನ ಕಳಸ ಇಡುವುದು, ಮತ್ತು ಮಂತ್ರಗಳಿಂದ ಅಭಿಮಂತ್ರಿತ ಜಲದಿಂದ ಶಿಶುವಿಗೆ ಅಭಿಷೇಕ ಮಾಡುವುದು, ಆಗಮೋಕ್ತ ವಿಧಿ. ಈ ವಿಧಿಗನುಸಾರವಾಗಿ ಆಯಾ ಕಳಸಗಳಲ್ಲಿ ಆಯಾ ದಿಕ್ಕಿನಲ್ಲಿ ಸದ್ಯೋಜಾತ ಮುಂತಾದ ಶಿವನ ಪಂಚಮೂರ್ತಿಗಳನ್ನು ಕಲ್ಪಿಸುವುದು ಅವಶ್ಯವಾಗಿದೆ. ಅದೇ ಆಗಮೋಕ್ತ ಪ್ರಕ್ರಿಯೆಗನುಸಾರವಾಗಿ ಆಚಾರ್ಯನು ಶಿವಸ್ವರೂಪಿಯು. ಅದಕ್ಕಾಗಿ ಪ್ರತಿಯೊಂದು ದಿಕ್ಕಿನ ಕಳಸದಲ್ಲಿ ಆಯಾ ಶಿವ

ಮೂರ್ತಿ ಸ್ವರೂಪಿಯಾದ ಆಚಾರ್ಯನು ಬೇಕಾಯಿತು. ಈ ಆಚಾರ್ಯ ಪುರುಷರ ಐತಿಹಾಸಿಕ ಚರಿತ್ರೆಯು ಸಾಕಷ್ಟು ಬೆಳಕಿಗೆ ಬಂದಿಲ್ಲ. ಕರ್ನಾಟಕ ದಲ್ಲಿ ಪ್ರಾಚೀನ ಕಾಲದಿಂದಿದ್ದ ಲಾಕುಳಶೈವ ಗುರುಗಳು, ರಾಮೇಶ್ವರ, ಕೇದಾರ, ಉಜ್ಜನಿ, ಶ್ರೀಪರ್ವತ ಮುಂತಾದ ಮಠದ ಪರಂಪರೆಯವರು ಮೊದಲಿನಿಂದ ದೀಕ್ಷೆ, ಶಿಕ್ಷೆಗಳನ್ನು ಮಾಡತಕ್ಕವರಾಗಿದ್ದವರು. ಹೊಸ ಗಾಲದ ಶಕ್ತಿವಿಶಿಷ್ಟಾದ್ವೈತಮತ ಮತ್ತು ಗುರುಮಾರ್ಗಾಚರಣೆಯ ಪ್ರಾಚುರ್ಯದಿಂದ, ಆಚಾರ್ಯರನ್ನು ಸ್ವೀಕರಿಸಲಾಗಿದೆಯೆಂದು ತೋರಿ ಬರುವುದು. ಮೊದಲಿನಿಂದಲೇ ಕೇದಾರ, ರಾಮೇಶ್ವರ, ಶ್ರೀಪರ್ವತ ಮುಂತಾದ ಮಠಗಳ ಗುರುಪರಂಪರೆಯವರೇ ಒಂದೊಂದು ಆಚಾರ್ಯರ ಸ್ಥಾನದವರೆಂದು ಪೂರ್ವಪರಂಪರೆಯ ಮಠಗಳಿಗೂ ಹೊಸಗಾಲದ ಹೊಸಮತಕ್ಕೂ ಸಮನ್ವಯಗೊಳಿಸಿ, ಪ್ರಾಚೀನ ಪರಂಪರೆಯನ್ನು ಕಾಯ್ದು ಕೊಂಡು ಬಂದಿರುವರು.

ಅದರಂತೆ ಅಲ್ಲಮಪ್ರಭುವಿನ ಹೆಸರು ಶಾಸನಗಳಲ್ಲಿ ಸಿಕ್ಕುವುದಿಲ್ಲ. ಬಸವೇಶ್ವರನ ಹೆಸರಾದರೂ ಕ್ರಿ. ಶ ೧೨೫೦ ರ ಸುಮಾರಿಗೆ ಮತ್ತು ಅನಂತರ ದಲ್ಲಿ ಬರುವುದು. ಸಿದ್ಧರಾಮೇಶ್ವರನ ಹೆಸರು ಸಿಕ್ಕುವುದಾದರೂ ಸುಮಾರು ಇದೇ ಕಾಲದಲ್ಲಿ. ದೇವರ ದಾಸಿಮಯ್ಯನ ಹೆಸರು ಕ್ರಿ. ಶ. ೧೨ನೆಯ ಶತಕದ ಶಾಸನದಲ್ಲಿ ದೊರೆಯುತ್ತದೆ. ಏಕಾಂತ ರಾಮಯ್ಯನ ಹೆಸರು ಕ್ರಿ. ಶ ೧೨ನೆಯ ಶತಕದ ಕೊನೆಯ ಭಾಗದಲ್ಲಿ. ಕ್ರಿ ಶ. ೧೨೮೦ ರ ಸುಮಾರಿಗೆ ವಚನಗಳಲ್ಲಿ ಬರುವ ಕೇಶಿರಾಜ ಮುಂತಾದ ಶಿವಶರಣರ ಹೆಸರುಗಳು ಬರುವವು. ಶಾಸನಗಳ ಆಧಾರದಿಂದ ಹೇಳುವುದಾದರೆ ವಚನಕಾರರ ಕಾಲವು ಕ್ರಿ. ಶ. ೧೨ ನೆಯ ಶತಮಾನದ ಕೊನೆಯ ಮತ್ತು ಹದಿಮೂರನೆಯ ಶತಕದ ಪೂರ್ವಾರ್ಧದಲ್ಲಿ ಆರಂಭವಾಗಿದೆಯೆಂದು ಸ್ಥೂಲವಾಗಿ ಹೇಳಬಹುದು.

---

# ಆರನೆಯ ಪ್ರಕರಣ

# ಕರ್ನಾಟಕ ಕುಳದ ಬ್ರಾಹ್ಮಣರು

## ಲಾಕುಳರು ಮತ್ತು ಬ್ರಾಹ್ಮಣರು

ಹಿಂದಿನ ಪ್ರಕರಣದಲ್ಲಿ ಲಾಕುಳಶೈವರ ವಿಷಯದಲ್ಲಿ ಹೇಳಿದ್ದಾಯಿತು. ಲಾಕುಳಶೈವರು ಬ್ರಾಹ್ಮಣರಲ್ಲವೆಂದೂ, ಅವರು ಈಗಿನ ಜಂಗಮರ ಪೂರ್ವಜರಾಗಿದ್ದರೆಂದೂ ಶಾಸನಗಳ ಆಧಾರಗಳಿಂದ ಕಂಡದ್ದಾಯಿತು. ಬ್ರಾಹ್ಮಣರಲ್ಲೂ ಮಾಹೇಶ್ವರರೆಂದೆನಿಸಿಕೊಳ್ಳುವ ಶುದ್ಧಶ್ರೋತ್ರೀಯ ಶೈವರೂ ಇದ್ದರು. ಹೊಯ್ಸಳ ನಾರಸಿಂಹದೇವನ ಸರ್ವಾಧಿಕಾರಿಯಾದ ಮಂತ್ರಿ ನಾಗರುದ್ರನೆಂಬವನು ಇದ್ದನು. ಇವನ ತಮ್ಮ ಮುದ್ದಿರಾಜ. ಈ ಮುದ್ದಿರಾಜನ ಮಕ್ಕಳು, ಗೋವಿಂದ. ನಾಕರಸ, ಕಾಳಿದಾಸ, ಬೂಚ ಎಂಬವರು. ನಾಕರಸನು ಅರಸನ ಅಪ್ಪಣೆಯನ್ನು ಪಡೆದು—

ಧನಮಂ ಶಾಶ್ವತಮಾಗಿ ಮಾಳ್ಪುದೆ ದಿಟಕ್ಕಾಚಂದ್ರತಾರಂ
ಯಶೋ-।
ಧನಮುಂ ಧರ್ಮಮುಮೆಂದು ನಾಕಿ ವಿಹಿತಾನುಷ್ಠಾನನಿಷ್ಠಾಪರ-।
ಗ್ಗನವದ್ಯಂ ದ್ವಿಜರ್ಗಿತ್ತ ನೀರಱುತಕ್ಕಂತೆ ನಿರ್ಬಾಧಮಿ।
ರ್ಪನಮೀ ಬ್ರಹ್ಮಸಮಂ ಪಡೆದು ತನ್ನಾಳ್ವನೊಳ್ ಧಾರೆಯಂ ॥

ಶಿವಸಮುದ್ರವನ್ನು ಅಗ್ರಹಾರವಾಗಿ ಬ್ರಾಹ್ಮಣರಿಗೆ ಕೊಟ್ಟು, ಶಿವಭವನವನ್ನು ಕಟ್ಟಿಸಿ ನಾಕೇಶ್ವರನನ್ನು ಪ್ರತಿಷ್ಠಿಸಿದನು. ಖಂಡಸ್ಫುಟಿತ ಜೀರ್ಣೋದ್ಧಾರ ಅಂಗಭೋಗ ನಿವೇದ್ಯಮುಂ ಪೂಜಕ ಪರಿಚಾರಕರ್ಸ್ವಂಸಿಗರ ಜೀವಿತಮುಂ ವೇದಖಂಡಿಕಾ ಶಾಸ್ತ್ರಖಂಡಿಕಾ ತರ್ಕವಕ್ಷರಖಂಡಿಕ........ ಗಳುಗಗ್ರಾಸನವಿನಿತುಮಂ ನಡೆಸುವಂತಾಗೆ ಸ್ವಸ್ತಿ ಯಮನಿಯಮ........ ಸಂಪನ್ನರುಂ **ನೈಷ್ಠಿಕ ತಪೋಧನ ನಿಯುತರು, ಶುದ್ಧಶೈವ ಕಾಲೋತ್ತರೂರ್ಧ್ವ ಶ್ರೌತೀಯದೊಳಗೀಶಂ** ಖಮರ ಪರಮಗುಹ ಇಂದ್ರವನೀ ಕದಂಬವೃಕ್ಷಾನ್ವಯರುಮಪ್ಪ, ಶ್ರೀಮತ್ತ್ರಿಲೋಚನಾರ್ಯರ್ಗೆ ನಾಕೇಶ್ವರದೇವಸ್ಥಾನಮಂ ಶ್ರೀಕರಣದ ಹೆಗ್ಗಡೆ ನಾಕಿಮಯ್ಯ ಕಾಲಂ ಕರ್ಚಿ ಧಾರಾಪೂರ್ವಕ ಮಾಡಿಕೊಟ್ಟಿದೆಂದ ನೈಷ್ಠಿಕ ಸ್ಥಾನಂ ॥

(ಕಡೂರು ನಂ. ೫೧,-೧೧೬೯).

ಹೊಯ್ಸಳ ವೀರಬಲ್ಲಾಳದೇವರ ಆಳ್ಕೆಯಲ್ಲಿ ತತ್ಪಾದಪದ್ಮೋಪಜೀವಿ ಹರಿತಗೋತ್ರ ಶ್ರೀ ವಿಮಳ ಶಿವಾಚಾರ್ಯ ಪಾದಾರವಿಂದವಂದನ ವಿನೋದನುಂ, **ಶ್ರೀಮದಮೃತೇಶ್ವರ ಶ್ರೀಪಾದಾರಾಧಕನು, ಗುರುಕುಳತಿಳಕ ಸಂಶುದ್ಧಶೈವ ಶಾಂತನಿಕಾಚಾರ್ಯ ನಿರ್ಮಳ ಶಿವಮಹೇಶರಾಗ್ರಗಣ್ಯ** ಪಗ್ಗಡೆ ಸಂಕಣ್ಣನು **ಕರ್ನಾಟಕಾನ್ವಯನು,** ಶ್ರೀ ಚನ್ನಕೇಶವ ದೇವರ ಅಂಗಭೋಗ........ಪೂಜಾರಿಯ ಜೀವಿತಕ್ಕಂ, ತಪೋಧನರ ಅನ್ನದಾನಕ್ಕಂ ಬಿಟ್ಟರ್, ಅಶೇಷ ಮಹಾಜನಂಗಳು ಬಿಟ್ಟರ್. (ಅರಸಿಕೆರೆ ನಂ. ೧೨೭- ಕ್ರಿ. ವ. ೧೧೮೫).

ಚಾಳುಕ್ಯ ತ್ರಿಭುವನಮಲ್ಲ ವಿಕ್ರಮಾದಿತ್ಯನ ೪೮ನೆಯ ವರ್ಷ ದಕ್ಷಿಣೆ ಕೊಡುವ ಕಾಲದಲ್ಲಿ ಗುರುಗಳಾದ ದ್ರಾವಿಡಾದಿತ್ಯ ದಂಡನಾಯಕರಿಗೆ ತಿಳಿಸಿ (ಈ ದಂಡನಾಯಕನು ಜಯಂತಿಪುರನಿವಾಸಿ) ತ್ರಿಭುವನಮಲ್ಲ ಪಾಂಡೇಶ್ವರ ದೇವರ್ಗ್ಗೆ ಬೆಳ್ತೂರಿನಲ್ಲಿ ಚಾಳುಕ್ಯ ಸಮುದ್ರವನ್ನು ಕಟ್ಟಿಸಿ.... ದೇವಾಭೋಗಾಯ ಶ್ರೀಮತು **ಶೈವಾಚಾರ್ಯ** ವಿದ್ಯಾಶಿವ ಪಂಡಿತ ಶ್ರೀರಾಮುಂಡದೇವಸ್ಯ ಪಾದಪ್ರಕ್ಷಾಲನಂ ಕೃತ್ವಾ ತಸ್ಯ ಹಸ್ತೇ ಧಾರಾ ಪೂರ್ವಕಂ ದತ್ತಂ ಇದರಲ್ಲಿ **ಶಿವ....ಬ್ರಾಹ್ಮಣ** ಎಂದು ಬರೆದಿದೆ (ದಾವಣಗೆರೆ ನಂ. ೧, ಕ್ರಿ ವ. ೧೧೨೩).

ಸೊರಬ ನಂ. ೩೪೮ನೆಯ ಶಾಸನದಲ್ಲಿ "ಸ್ವಸ್ತಿಸಮಸ್ತ....ಸಂಪನ್ನರು **ಶಿವಪಾದಶೇಖರರು, ಮಹೇಶ್ವರಗಣ....ರು, ಕಾಶ್ಯಪಗೋತ್ರರು** ಶ್ರೀ ನಾಗರಖಂಡ ಪೆಪ್ಪಿತ್ತರಸಂಕ .... ಪೆರ್ಗ್ಗಡೆ ದೇವಪ್ಪನಾಯಕ ಬಿಣಂಗೆಱೆಯ ಗ್ರಾಮೇಶ್ವರದೇವರಿಗೆ ಶ್ರೀಮದಗ್ರಹಾರಂ ಕಿಱಿಯ ಕೆಱೆಯೂರ.. " ಎಂದು ಬಂದಿರುವುದು.

ಮೇಲೆ ಹೇಳಿದ ಕಡೂರ ಶಾಸನದಲ್ಲಿ ಉಕ್ತನಾಗಿರುವ ನಾಕಯ್ಯನ ತಮ್ಮ ಬೂಚರಸನ ಮಗನಾದ ನಾರಸಿಂಹನು **ಕರ್ನಾಟಕ ಕುಳಕಮಳನು.** ಬೂಚೇಶ್ವರ ದೇವಾಲಯವನ್ನು ಶಾಂತಗ್ರಾಮವೆಂಬ ಅಗ್ರಹಾರದಲ್ಲಿ ಸ್ಥಾಪಿಸಿ ದೋರಸಮುದ್ರದ **ಕಪಿಲತೀರ್ಥದ** ದೇವಶಕ್ತಿ ಪಂಡಿತರ್ಗ್ಗೆ ಶ್ರೀ ಬೂಚೇಶ್ವರಸ್ಥಾನವಂ ಧಾರಾಪೂರ್ವಕಂ ಮಾಡಿಕೊಟ್ಟಂ (ಹಾಸನ ನಂ ೭೯). ಈ ಶಾಸನದಲ್ಲಿ ಕರ್ನಾಟಕುಳದ ಬ್ರಾಹ್ಮಣನಾದ ಬೂಚ

ರಸನು ಬ್ರಾಹ್ಮಣರ ಅಗ್ರಹಾರದಲ್ಲಿ ತನ್ನ ಹೆಸರಿನ ಶಿವಾಲಯವನ್ನು ಸ್ಥಾಪಿಸಿ **ಲಾಕುಳ ಗುರುಗಳಾದ ಕಪಿಲತೀರ್ಥದ** ದೇವಶಕ್ತಿ ಪಂಡಿತರ್ಗ್ಗೆ, ಬೂಚೇಶ್ವರ ಸ್ಥಾನವನ್ನು ಕೊಟ್ಟಿರುವನು. ಇದರಲ್ಲಿಯ ಕಪಿಲತೀರ್ಥವು ಕುರುಕ್ಷೇತ್ರ ದಲ್ಲಿದೆ. ಈ ಕುರುಕ್ಷೇತ್ರವು ಪ್ರಾಚೀನ ಪುಣ್ಯಕ್ಷೇತ್ರವೆಂದು ಪುರಾಣ ಗಳಲ್ಲೂ ಶಾಸನಗಳಲ್ಲೂ ಅನೇಕ ಬಾರಿ ಉಕ್ತವಾಗಿದೆ. ದೋರಸಮುದ್ರದ ದೇವಶಕ್ತಿ ಪಂಡಿತರು ಕಪಿಲತೀರ್ಥ ಮಠದ ಪರಂಪರೆಯವರೆಂದು ಶಾಸನ ದಿಂದ ತಿಳಿದುಬರುವುದು. ಅದೇ ನಾಕಮಯ್ಯನಿಗೆ ಮಹೇಶ್ವರನಾಗ್ರಗಣ್ಯ ನೆಂದು ಹಾಸನ ನಂ. ೭೨ನೆಯ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಬ್ರಾಹ್ಮಣ ರಲ್ಲಿ ಮಹೇಶ್ವರಾಗ್ರಗಣ್ಯರು ಇದ್ದರೆಂದು ಈ ಶಾಸನದಿಂದ ತಿಳಿಯುತ್ತದೆ. ಇವರು ಬ್ರಾಹ್ಮಣರಾದಾಗ್ಯೂ ತಪೋಧನರಾದ ಲಾಕುಳ ಗುರುಗಳ ಅನ್ನ ದಾನಕ್ಕಾಗಿ ದಾನಕೊಟ್ಟಿರುವರು. ಈ ಕರ್ನಾಟಕ ಕುಳದ ಬ್ರಾಹ್ಮಣರು **ಶಿವಪಾದಶೇಖರರು**, ಶುದ್ಧಶೈವ **ಶ್ರೋತ್ರೀಯ** ಸಂಪ್ರದಾಯದ ಗುರುಗಳ ಶಿಷ್ಯರಾಗಿದ್ದುದಲ್ಲದೆ, ಅಗ್ರಹಾರದಲ್ಲಿ ಲಾಕುಳಶೈವರಂತೆ ತಮ್ಮ ಹೆಸರಿನ ಶಿವಾಲಯಗಳನ್ನು ಕಟ್ಟಿಸಿರುವರು ಬ್ರಾಹ್ಮಣ ಮತ್ತು ಲಾಕುಳಶೈವರ ಅನ್ನದಾನಕ್ಕಾಗಿ ವ್ಯವಸ್ಥೆ ಮಾಡಿರುವರು ಇಂದ್ರವನೀಕದಂಬ ವೃಕ್ಷಾನ್ವ ಯದ ತ್ರಿಲೋಚನಾಚಾರ್ಯನಾದ ಶುದ್ಧಶೈವಶ್ರೋತ್ರೀಯ ಸಂಪ್ರದಾಯದ ಗುರುವಿಗೂ ನಾಕೇಶ್ವರ ದೇವಸ್ಥಾನವನ್ನು ನೈಷ್ಠಿಕಸ್ಥಾನವನ್ನಾಗಿ ಕೊಟ್ಟಿ ರುವ ಸಂಗತಿಯಿಂದ, ಈ ಶುದ್ಧಶೈವರಾದ ಬ್ರಾಹ್ಮಣರಲ್ಲೂ ನೈಷ್ಠಿಕ ಸ್ಥಾನವನ್ನಾಗಿ ಕೊಡುವ ಪದ್ಧತಿಯಿತ್ತೆಂದು ಮೇಲಿನ ಶಾಸನಗಳಿಂದ ತಿಳಿದುಬರುತ್ತದೆ. ಲಾಕುಳ ಗುರುಗಳು ನೈಷ್ಠಿಕ ಸ್ಥಾನಗಳಿದ್ದಂತೆ ಸಂಶುದ್ಧ ಶೈವರಾದ ಬ್ರಾಹ್ಮಣರ ನೈಷ್ಠಿಕಸ್ಥಾನಗಳೂ ಇರುತ್ತಿದ್ದಂತೆ ಕಂಡು ಬರುವುದು.

## ವಾಜಿವಂಶದ ಬ್ರಾಹ್ಮಣರು

ವಾಜಿವಂಶದ ಮಾರ್ತಂಡನ ವಿಷಯದಲ್ಲಿ ಕೆಳಗಿನಂತೆ ಉಲ್ಲೇಖವಿದೆ—

**ಸಮುಸ್ತ ಧರ್ಮಂಗಳೊಳೆಸೆವ ಶಿವಧರ್ಮ ನಿರ್ಮಾಣಮಂ** ನಿರ್ಮಿ ಸುವನದೆಂತೆಂದೊಡೆ --

ಜಳಜ ಕುಲದೊಳು ಕುಲಮವು ।
ಪಲವೊಳವವಱೊಳಗೆ ಪರಮ ಪಾವನಮೆನೆ ನಿ-॥
ರ್ಮಳತೆ ಪಡೆದೆಸಕದುತ್ತಮ ।
ಕುಲವೊಪ್ಪುವ ವಾಜಿಕುಲಮಗಣ್ಯಂ ಪುಣ್ಯಂ ॥

ಈ ವಾಜಿವಂಶದೊಳಗೆ ಕೇಶಿರಾಜನು ಉದಯಿಸಿದನು. ಇವನು.... ಶ್ರೀವತ್ಸಗೋತ್ರ ತಿಳಕಂ. ಆತನ ಅಗ್ರತನೂಜಂ ಮಾಧವಂ; ಹೆಂಡತಿ ಅರಸಿ ಕಬ್ಬೆ; ಮಗ ಮಾರ್ತಂಡ. ಈತನ ವಿಷಯವಾಗಿ.

" ಶಿವಧರ್ಮವಿದುವೆ ಧರ್ಮಂ ।
ಶಿವದೇವನೆ ದೇವನೆಂಬ ಸಂಬುಗೆಮಿಗೆ ಚ- ॥
ಲ್ವವತರಿಸಿರೆ ಮಾಡಿಸಿದಂ ।
ಶಿವಗೃಹಮಂ ಭೂಪ್ರಚಂಡನೀ ಮಾರ್ತಂಡಂ ॥

ಈ ಮಾರ್ತಂಡನು ತನ್ನ ಹೆಸರಿನ ಮಾರ್ತಂಡೇಶ್ವರವನ್ನು ಮಾಡಿಸಿ ಆ ದೇವರ ಪೂಜಾ, ನಿವೇದ್ಯ, ನೈಷ್ಠಿಕ ತಪೋಧನರಾಹಾರದಾನಕ್ಕಂ ಖಂಡ ಸ್ಫುಟಿತ ಜೀರ್ಣೋದ್ಧಾರಕ್ಕಂ ಸರ್ವಬಾಧಾಪರಿಹಾರವಾಗಿ ಕೊಟ್ಟಿರುವನು. (ಕುಡತಣಿ, ಬಳ್ಳಾರಿಜಿಲ್ಲೆ S. I. Inscr.Mad. No 187, 1119 A.D.)

ಕಡೂರು ಸಂ. ೧೨ನೆಯ ಶಾಸನದಲ್ಲಿ (ಕ್ರಿ. ಶ ೧೨೨೪) ಕುಮಾರ ದೇವರ ವರ್ಣನೆಯಿದೆ.— ಅವರ ಕುಲಾನ್ವಯವೆಂತೆಂದಡೆ " ಎಳೆಯೊಳಧಿಕವೆನಿಸಿದ ಬಳಗಾರನ ಅಗ್ರಹಾರದಲ್ಲಿಯ ವಿಪ್ರಕುಳತಿಳಕಂ ಗಂಗಾನ್ವಯ ವಿಳಸಂ ಶ್ರೀವಿಷ್ಣುಗೋತ್ರ ಪವಿತ್ರ " ಅಂತೆನಿಪ ಮಂಚಿಭಟ್ಟರು ಸಂತತ ಶಿವಪೂಜೆ ಮಾಡಿ ಸುತನನ್ನು ಪಡೆದನು. ಆತನ ಹೆಸರು ಶಿವಯೋಗಿ ಸಿದ್ಧಕುಮಾರ ಮುನೀಂದ್ರ. ಪರಮಾರಾಧ್ಯರು, ಶಿವಮುಗ್ಧ ದೇವರು, ನನ್ನೆಯದೇವರುಮೆನೆ ಕುಮಾರದೇವರ ಗುರುಕುಳ ಸಾಮ್ರಾಜ್ಯಾವತಾರ ಸಾಧಾರಣಮೆ ? ಶಿವದಿವ್ಯಾಕೃತಿಯಿಂದೆ ಕಣ್ಣು, ಶಿವಪಾದಾಬ್ಜ ಸ್ಪರ್ಶದಿಂದೆ ಕರಂ, ಶಿವಸೇವ್ಯ ಸ್ತುತಿಯಿಂದೆ ಜಿಹ್ವೆ, ಶಿವತತ್ತ್ವಾಮೋದದಿಂ ಘ್ರಾಣಮಾ, ಶಿವನಾಮಾಮೃತಸೂಕ್ತಿಯಿಂದೆ ಕಿವಿ, ನಿಚ್ಚಪ್ರೀತಿಯಂ ತಾಳ್ದ ಶಿವಮುಗ್ಧರು, ಶಿವಯೋಗಿಗಳು ಶಿವಸೇವಾಸಕ್ತಿಯಿಂ ಪರ್ತಿಪರು ॥

ನಯನಂಗಳು ಕರುಣಾರಸದ್ರಾರ್ಮಧುರಂಗಳು ಮಾತುಗಳು ತತ್ವನಿಶ್ಚಯ ದೀಕ್ಷಾಗುರುಗಳು ವಿಶುದ್ಧ ಚರಿತಂಗಳ್ **ಶೈವಯೋಗೀಶ್ವರಾನ್ವಯ** ಚೂಡಾಮಣಿಗಳ ಪದಂಗಳವನಿ: ಸೇವ್ಯಂಗಳೆಂಬಂತು ನನ್ನೆಯದೇವರು ಮೆಱೆದರು, ಪ್ರಸಿದ್ಧ ಶಿವಧರ್ಮ ಪ್ರಭಾವೋದ್ಧಾರಕರು. ಅವರ ಶಿಷ್ಯರೇ ಕುಮಾರ ದೇವರು. ಈ ಕುಮಾರ ದೇವರು ಅಭಿನವರುದ್ರರು. ಈ ಕುಮಾರ ದೇವರು ಸಿದ್ಧೇಶ್ವರಂಗೆ ದೇವಾಲಯಮಂ ಮಾಡಿಸಿದರು. ಆ ಸಮಯಕ್ಕೆ ರಾಜಗುರು ಚಂದ್ರಮೌಳಿದೇವರು ಸಮಸ್ತ ಶಿವಗಣ ಸಹಿತಂ ಬಂದು, ಉಚಿತ ಪೂಜೆಯಂ ಕೈಕೊಂಡು ಮಠದೆಱೆ ಮಾನ್ಯವಿದಕ್ಕೆಂದು ಕುಮಾರ ದೇವರ್ಗ್ಗಂ ಧಾರೆಯನೆಱೆದರು. ಅನೇಕ ಗೌಡರು, ಸೆಟ್ಟಿರು ಈ ದೇವಾಲಯಕ್ಕೆ ದಾನಕೊಟ್ಟಿರುವರು. ಆ ದೇವರ ತಪೋಧನ ನಾಗ ರಾಶಿ, ಆತನ ತಮ್ಮ ಧೂಳಜೀಯಂಗಳಿಗೆ ಹದಿನೆಂಟು... ಬ್ರಾಹ್ಮಣ ನಿವೇಶ ವನುಳಿದು ಕೊಟ್ಟರು. ಸಿದ್ಧಕುಮಾರ ದೇವರು ತಮ್ಮ ಮಗ ನಾಗ ರಾಶಿ, ಆತನ ತಮ್ಮ ಧೂಳಜೀಯಂಗಳಿಗೆ ಸಿದ್ಧನಾಥ ದೇವರಿಗೆ ಧಾರಾ ಪೂರ್ವಕವಾಗಿ ಕೊಟ್ಟರು.

ಈ ಎರಡು ಶಾಸನಗಳಿಂದ ಆಗಿನ ಕಾಲದ ಅನೇಕ ಧಾರ್ಮಿಕ ಸಂಗತಿಗಳು ಹೊರಬೀಳುತ್ತವೆ. ಶಿವಧರ್ಮವೆಂದರೆ ಶಿವಗೃಹ ಮಾಡಿಸು ವುದೇಯೆಂದು ಮೊದಲನೆಯದಾದ ಕುಡತಣಿಯ ಶಾಸನದಲ್ಲಿ ಹೇಳಿದೆ. ಬ್ರಾಹ್ಮಣರು ಈ ಶಿವಧರ್ಮದಂತೆ ಶಿವಾಲಯವನ್ನು ಕಟ್ಟಿಸುತ್ತಿದ್ದರು. ಬ್ರಾಹ್ಮಣರಲ್ಲೂ, ಶೈವಯೋಗೀಶ್ವರರು, ದೀಕ್ಷಾಗುರುಗಳು ಇದ್ದರು ಕುಮಾರದೇವರು ಬ್ರಾಹ್ಮಣ ಶಿವಯೋಗಿಯು, ಸಿದ್ಧೇಶ್ವರ ಗುಡಿಯನ್ನು ಕಟ್ಟಿಸಿದಾಗ ರಾಜಗುರು ಚಂದ್ರಮೌಳಿದೇವರು ಸಮಸ್ತ ಶಿವಗುಣ ಸಹಿತ ಬಂದು ಆ ದೇವಾಲಯಕ್ಕೆ ಮಠದೆಱೆಯನ್ನು ಕೊಟ್ಟಿರುವರು ಮೇಲಿನ ಕಡೂರ ನಂ. ೫ಗನೆಯ ಶಾಸನದಲ್ಲಿ ನಾಕರಸನು ನಾಕೇಶ್ವರವನ್ನು ಪ್ರತಿಷ್ಠಿಸಿ ದತ್ತಿಯನ್ನು ಬಿಟ್ಟ ಸಂಗತಿಯಿದೆ. ಬ್ರಾಹ್ಮಣನಾದ ಶುದ್ಧಶೈವನಾದ ತ್ರಿಲೋಚನಾಚಾರ್ಯನಿಗೆ ಆ ದೇವಸ್ಥಾನವನ್ನು ಕೊಟ್ಟಿರುವನು. ಈ ತ್ರಿಲೋಚನಾಚಾರ್ಯನು ಇಂದ್ರವನೀ ಕದಂಬ ವೃಕ್ಷಾನ್ವಯದವನು. ಬ್ರಾಹ್ಮಣನು ಶಿವಾಲಯವನ್ನು ಕಟ್ಟಿ ಬ್ರಾಹ್ಮಣಾಚಾರ್ಯನಿಗೆ ಕೊಟ್ಟಿರು ವಾಗ ಮಠದೆಱೆಯನ್ನು ಬಿಟ್ಟಿರುವ ಸಂಗತಿ ಬರುವುದಿಲ್ಲ ಅದೇ ಬ್ರಾಹ್ಮಣನು ಶಿವಗೃಹವನ್ನು ಕಟ್ಟಿಸಿ ಆ ಸ್ಥಾನವನ್ನು ಬ್ರಾಹ್ಮಣ ಶಿವಯೋಗಿಗೆ

ಕೊಟ್ಟಾಗ ಗೌಡರು, ಸೆಟ್ಟರು, ಆ ಶಿವಗೃಹಕ್ಕೆ ದತ್ತಿಯನ್ನು ಬಿಟ್ಟಿದ್ದರೆ ಮಾತ್ರ ರಾಜಗುರು ಚಂದ್ರಮೌಳಿಯು ಸಮಸ್ತ ಶಿವಗಣಸಹಿತ ಬಂದು ಮಠದೆಱೆಯನ್ನು ಬಿಟ್ಟುಕೊಟ್ಟಿರುವನು ಈ ಮಠದೆಱೆಯ ಮಾನ್ಯವನ್ನು ಬಿಟ್ಟುಕೊಡುವ ಪ್ರಶ್ನೆಯು ಬ್ರಾಹ್ಮಣರಲ್ಲದ ಗೌಡರು ಸೆಟ್ಟರು ಬಿಡುವಾಗ ಮಾತ್ರ ಬಂದಿದೆ. ವಿಷ್ಣುಗೃಹಕ್ಕೆ ದತ್ತಿಯನ್ನು ಬಿಡುವಾಗಲಾದರೂ ಈ ಮಠ ಮಾನ್ಯದ ಪ್ರಶ್ನೆಯಿಲ್ಲ. ಬ್ರಾಹ್ಮಣರು ಬ್ರಾಹ್ಮಣರಿಗೆ ಕೊಟ್ಟಾಗ ಲಾದರೂ ಈ ಪ್ರಶ್ನೆಯು ಬಂದಿಲ್ಲ. ಲಾಕುಳ ಗುರುಗಳಲ್ಲದವರಿಗೆ ಗೌಡರು, ಸೆಟ್ಟರು, ದತ್ತಿಯನ್ನು ಬಿಡುವಾಗ ಮಾತ್ರ ಮಠದ ಮಾನ್ಯವನ್ನು ಬಿಟ್ಟುಕೊಟ್ಟ ಉದಾಹರಣೆಗಳಿವೆ. ಈ ಶಾಸನಗಳಿಂದ ಶಿವಧರ್ಮ ನಿರ್ಮಾಣವೆಂದರೆ ದೇವಸ್ಥಾನವನ್ನು ಕಟ್ಟಿಸುವುದೆಂದು ಸ್ಪಷ್ಟವಾಗುತ್ತದೆ. ಲಾಕುಳರಲ್ಲದ ಶಿವಾಲಯಗಳಿಗೆ ಮಠಮಾನ್ಯವಿದ್ದು, ಲಾಕುಳ ಗುರುಗಳ ಶಿಷ್ಯರಾದವರ ಮೇಲೆ ಅವರ ಅಧಿಕಾರವಿತ್ತು, ಅನ್ಯತ್ರವಿಲ್ಲವೆಂದು ಕಾಣುತ್ತದೆ; ಕುಡತಣಿಯ ಶಾಸನದಲ್ಲಿ ನಾಗರಾಶಿ ಮತ್ತು ತಮ್ಮ ಧೂಳ ಜೀಯಗಳಿಗೆ ಕುಮಾರದೇವರ ಮಕ್ಕಳೆಂದು ಬಂದಿದೆ. ಕುಮಾರ ದೇವರು ಶುದ್ಧ ಸಂಪ್ರದಾಯದ ಶಿವಯೋಗಿಯು ನಾಗರಾಶಿ ಧೂಳಜೀಯರು ಲಾಕುಳರು. ಇಲ್ಲಿ ಮಗ ಮಕ್ಕಳೆಂದರೆ ಸಾಕ್ಷಾತ್ ಮಕ್ಕಳಲ್ಲ, ಶಿಷ್ಯರು ಎಂಬ ಅರ್ಥದಲ್ಲಿ ಗ್ರಹಿಸಬೇಕು. ಶಿವಯೋಗಿಯು ನೈಷ್ಟಿಕ ಸನ್ಯಾಸಿ ಆದುದರಿಂದ ಮಗ ಶಬ್ದವು ವಿನಯುಕ್ತಾಗಿ ಪ್ರಯೋಗವಾಗಿದೆ. ಅದರಂತೆ ಬಳಕೇರಿಯ ತ್ರೈಪ್ಪಣ್ಣನಿಗೂ ಕುಮಾರದೇವ ಮಗ ಎನ್ನಲಾಗಿದೆ

## ವೈಶ್ಯರು

ಅದೇ ರೀತಿಯಾಗಿ ಚಾಂಡಿಸೆಟ್ಟಿಯು ಶಂಭುದೇವಸ್ಥಾನಮಂ ಪ್ರತಿಷ್ಠಿಸಿ, ವಿಷ್ಣುಸಮುದ್ರದ ಅಗ್ರಹಾರದ ಒಡೆಯರಾದ ಅಶೇಷ ಮಹಾ ಜನಂಗಳ ಅನುಮತಿಯಿಂದ "ಶೈವಾಗಮ ವಿಶಾರದರಪ್ಪ ಶಿವಬ್ರಾಹ್ಮಣ ಬಮ್ಮೆಯದ ಆಳಿ ಭಟ್ಟರ ಕಾಲಂ ಕರ್ಚಿ" ಎಂದಿದೆ. ಇದರಲ್ಲಿ ತಪೋ ಧನರ ಉಲ್ಲೇಖವಿಲ್ಲ. (ಕಡೂರ ನಂ. ೯೫; ೧೨೨೪ A. D). ದಾವಣ ಗೆರೆ ನಂ. ೫೫ (ಕ್ರಿ. ಶ. ೧೧೪೪) ನೆಯ ಶಾಸನದಲ್ಲಿ ಒಬ್ಬ ಶಿವಾಗಮಾ ಭ್ಯಾಸಿಗಳು ಲೋಕಾಚಾರ್ಯರು ಲೋಕೋತ್ತಮರುಮಪ್ಪ ಬ್ರಾಹ್ಮ ಣರು. ಅಳ್ವಭಟ್ಟರು ಕಲಿದೇಶ್ವರ ದೇವರ ಪ್ರತಿಷ್ಠೆ ಮಾಡಿಸಿದರು. ಆಗ

ಸಾವಂತಗೋವಿದೇವರು ಅಳ್ವಭಟ್ಟರ ಕಾಲಂ ಕರ್ಚಿ ದಾನಕೊಟ್ಟ ಸಂಗತಿಯಿದೆ. ಈ ಅಳ್ವಭಟ್ಟರು ಲೋಕಾಚಾರ್ಯರು, ವೈಶ್ಯರ (ಕೋಮಟಿಗರ) ಗುರುಗಳೆಂದು ತೋರುವದು. ಚೆಂಡಿಸೆಟ್ಟಿಯಾದರೂ ವೈಶ್ಯನಿದ್ದಿರಬಹುದು. ಇಂದಿಗೂ ವೈಶ್ಯರ ಗುರುಗಳಿಗೆ ಲೋಕಾಚಾರ್ಯರೆಂದು ಕರೆಯುವ ರೂಢಿಯಿದೆ.

ಬೆಣ್ಣೆಕಲ್ಲ ನಂ ೩೪೩ನೆಯ ಶಾಸನದಲ್ಲಿ (೧೨೨೬ A. D. Md. Ins.) ಕಾಣ್ವಾನ್ವಯಾಭಿಜಾತ ಮತ್ತು ವಾಜಿವಂಶ ಚೂಡಾಮಣಿಯಾದ ಭಾರದ್ವಾಜಗೋತ್ರದ ಅಮಿತಯ್ಯ ನಾಯಕನು, ಅನೇಕ ದೇವಾಲಯಗಳನ್ನು ಕಟ್ಟಿಸಿದ ಸಂಗತಿಯಿದೆ. ಹೊಯ್ಸಳ ನಾರಸಿಂಹನ ಅಪ್ಪಣೆಯನ್ನು ಪಡೆದು ಆ ದೇವಾಲಯಗಳಿಗೆ ದಾನಕೊಟ್ಟಿರುವನು. ಅರಸನು ರಾಜಗುರು ಮಲೆಯಾಳ ಗುರುಗಳ ಕಾಲ ತೊಳೆದು ಕೊಟ್ಟ ಸಂಗತಿಯಿದೆ ಈ ವಾಜಿವಂಶದ ಬ್ರಾಹ್ಮಣರ ಉಲ್ಲೇಖವು ಅನೇಕ ಶಾಸನಗಳಲ್ಲಿ ಬರುತ್ತದೆ. ಇವರು ಶಿವಧರ್ಮವೆಂದು ಶಿವಾಲಯಗಳನ್ನು ಕಟ್ಟಿಸಿ ಲಾಕುಳ ಗುರುಗಳಿಗೆ ದಾನಕೊಟ್ಟಿರುವರು. (ದಾ. ಗೆ ನಂ. ೭೭, ಕ್ರಿ. ಶ. ೧೧೦೫; ಅ. ಕೆ. ನಂ. ೬೮; ಕ್ರಿ ವ. ೧೧೭೮, ಅ. ಕೆ. ನಂ ೧೩೮, ೧೧೭೪; ಗುಬ್ಬಿ ನಂ. ೧೨, ಕ್ರಿ ಶ. ೧೧೬೩; ನಾಗಮಂಗಲ ನಂ. ೩೦, ಕ್ರಿ. ವ. ೧೧೬೪; ಸಾಗರ ನಂ. ೧೦೯) ಕರ್ನಾಟಕಾನ್ವಯ **ಗುರುಕುಳತಿಳಕ** (ಅರಸಿಕೆರೆ ನಂ. ೧೨೭; ೧೧೮೫) ಎಂದೂ ಶ್ರೀವತ್ಸಗೋತ್ರದ ಕರ್ನಾಟಕ ಕುಳಕಮಳ (ಹಾಸನ ೭೧), ಎಂದೂ ಬಂದಿರುವುದು. ಇವರೂ ವಾಜಿವಂಶದ ಬ್ರಾಹ್ಮಣರಂತೆ ಶಿವಾಲಯಗಳನ್ನು ಕಟ್ಟಿಸಿ ಲಾಕುಳ ಗುರುಗಳಿಗೆ ಅವನ್ನು ಒಪ್ಪಿಸಿ ದತ್ತಿಯನ್ನು ಬಿಟ್ಟಿರುವರು. ಅದರಂತೆ ಸಾವಾಸಿ ಬ್ರಾಹ್ಮಣರು ಕೊಟ್ಟಿರುವರು. ಹೆಬ್ಬಾರುವ ಬ್ರಾಹ್ಮಣನು ಶಿವಾಲಯವನ್ನು ಕಟ್ಟಿಸಿ ಲಾಕುಳಶೈವರಿಗೆ ದತ್ತಿಯನ್ನು ಬಿಟ್ಟ ಸಂಗತಿಯನ್ನು ಹಿಂದಿನ ಪ್ರಕರಣದಲ್ಲಿ ವಿವೇಚಿಸಲಾಗಿದೆ.

ಇದಲ್ಲದೆ ಕೆಲವೆಡೆಗಳಲ್ಲಿ ಗೌಡರು ಸೆಟ್ಟಿಯರು ಬ್ರಾಹ್ಮಣರ ದೇವಾಲಯಗಳಿಗೂ ದಾನಕೊಟ್ಟಿರುವರು. ಅಗ್ರಹಾರದ ಅಶೇಷ ಬ್ರಾಹ್ಮಣರು ಲಾಕುಳಶೈವ ಗುರುಗಳಿಗೆ ಕೊಟ್ಟ ಉದಾಹರಣೆಗಳಿವೆ. (ಅ. ಕೆ. ನಂ. ೧೧೭ ಮತ್ತು ನಂ. ೧೧೮,–೧೧೨೪). ಕೆಲವೆಡೆಗಳಲ್ಲಂತೂ

ತಪೋಧನರ ಆಹಾರಕ್ಕಾಗಿ ಕೊಟ್ಟಿರುವಂತೆ, ಬ್ರಾಹ್ಮಣ ಭೋಜನಕ್ಕೆ ಕೊಟ್ಟು ಅದರ ವ್ಯವಸ್ಥೆಯನ್ನು ಲಾಕುಳ ಗುರುಗಳಿಗೆ ಒಪ್ಪಿಸಲಾಗಿದೆ. ಲಾಕುಳ ಗುರುಗಳು ಮತ್ತು ಬ್ರಾಹ್ಮಣರು ಪರಸ್ಪರ ವಿಶ್ವಾಸವುಳ್ಳವರಾಗಿ ಮೈತ್ರಿಯಿಂದ ನಡೆದುಬಂದಿರುವರು ಕರ್ನಾಟಕದಲ್ಲಿ. ಎಲ್ಲಿಯೂ ಧಾರ್ಮಿಕ ತಂಟೆ ಉದ್ಭವಿಸಿದ ಸಂಗತಿಗಳು ಸಿಕ್ಕುವುದಿಲ್ಲ. ಇನ್ನೊಂದು ಶಾಸನದಲ್ಲಿ ಅಗ್ರಹಾರದ ಬ್ರಾಹ್ಮಣರು ಜೈನಬಸದಿಗೆ ದಾನಕೊಟ್ಟಿರುವರು (S. I. Ins. Mad. No. 115, 1054 A. D.) ಬ್ರಾಹ್ಮಣೇತರರು ಬ್ರಾಹ್ಮಣರ ಸತ್ರಕ್ಕೆ ಕೊಟ್ಟಿರುವರು.

ಕರ್ನಾಟಕದಲ್ಲಿ ಶುದ್ಧಶೈವ ಬ್ರಾಹ್ಮಣರೂ ಇದ್ದರು. ಅವರಲ್ಲಿ ಶಿವಯೋಗಿಗಳಿದ್ದರು. ವಿಶೇಷತಃ ಶುಕ್ಲಯಜುರ್ವೇದ ಶಾಖೆಯುವ ರಾದ ಕಾಣ್ವಮಾಧ್ಯಂದಿನ ಬ್ರಾಹ್ಮಣರು, ಕರ್ನಾಟಕ ಬ್ರಾಹ್ಮಣರು, ಸಾವಾಸಿ ಬ್ರಾಹ್ಮಣರು, ಹೆಬ್ಬಾರು ಬ್ರಾಹ್ಮಣರು ಶಿವಧರ್ಮಕ್ಕನುಸರಿಸಿ ಶಿವಗೃಹಗಳನ್ನು ಕಟ್ಟಿಸಿ, ಲಾಕುಳ ಗುರುಗಳಿಗೆ ಆ ಸ್ಥಾನಗಳನ್ನು ಒಪ್ಪಿಸಿರುವರು. ಶಿವಾಚಾರದವರು ಬ್ರಾಹ್ಮಣರಿಗೂ, ಬ್ರಾಹ್ಮಣರು ಶಿವಾಚಾರದವರಿಗೂ ಧಾರ್ಮಿಕ ಕಾರ್ಯಗಳಲ್ಲಿ ಪರಸ್ಪರವಾಗಿ ದತ್ತಿಯನ್ನು ಬಿಟ್ಟಿರುವರು. ಕೆಲವು ಪ್ರಸಿದ್ಧ ಲಾಕುಳರ ದೇವಸ್ಥಾನಗಳಲ್ಲಿ ಪುರಾಣ ಹೇಳುವುದಕ್ಕೆ, ತಪೋಧನ ವಿದ್ಯಾರ್ಥಿಗಳಿಗೆ ಪಾಠ ಹೇಳುವುದಕ್ಕೆ ಬ್ರಾಹ್ಮಣರನ್ನೇ ನಿಯಮಿಸಲಾಗಿದೆ. ಇದು ನಮ್ಮ ಕನ್ನಡ ನಾಡಿನ ಪ್ರಾಚೀನ ಸಂಸ್ಕೃತಿ.

ಜೈನರು ಋಷಿಗಳ ಆಹಾರಕ್ಕಾಗಿ, ಜಿನಾಲಯದಲ್ಲಿಯ ವ್ಯವಸ್ಥೆಗಾಗಿ ಕೊಟ್ಟಿರುವರಲ್ಲದೆ, ಶಿವಾಲಯಗಳಿಗೂ ದಾನ ಕೊಟ್ಟಿರುವರು. ಜೈನರು ಚತುಃಸಮಯಸಮುದ್ಧರಣರೆಂದು ಹೇಳಿಕೊಂಡದ್ದುಂಟು. ಜೈನರಲ್ಲಿ ಜಿನಾಲಯ ಪೂಜಾರಿಗಳಿಗೆ ಜೀಯರೆಂದು ಕರೆಯಲಾಗಿದೆ.

---

# ಅನುಬಂಧ

## ಮಲಕಾಪುರ ಶಾಸನ; ಕಾಲ ಕ್ರಿ. ಶ. ೧೨೬೧.

ಗೋಲಕೀಮಠವು ಡಾಹಲ ದೇಶದಲ್ಲಿದ್ದುದು. ಈ ಡಾಹಲ ದೇಶಕ್ಕೆ ಚೇದಿ ದೇಶವೆಂದು ಹೆಸರು. ಅದರ ರಾಜಧಾನಿಯು ತ್ರಿಪುರಿಯು. ಜಬ್ಬಲಪುರದ ಸಮೀಪದಲ್ಲಿದ್ದ ಈಗಿನ ತೀವೂರವೇ ಮೊದಲಿನ ತ್ರಿಪುರಿಯು. ಈ ಡಾಹಲ ದೇಶವು ಗಂಗಾ ಮತ್ತು ನರ್ಮದಾ ನದಿಗಳ ಮಧ್ಯ ಪ್ರದೇಶವು ಈ ದೇಶದ ಅರಸರು ಕಳಚುರಿ ವಂಶದವರು. ಗೋಳಕೀ ಮಠದ ಗುರುಗಳು ಕಲಚೂರಿಯರಸರ ಗುರುಗಳಾಗಿದ್ದರು. ಕ್ರಿ. ಶ. ೧೦ನೆಯ ಶತಮಾನದಲ್ಲಿ ಈ ಗೋಳಕೀಮಠದ ಮೂಲಪುರುಷನಾದ ಸದ್ಭಾವಶಂಭು ಎಂಬವನಿಂದ ಈ ಮಠವು ಸ್ಥಾಪಿಸಲ್ಪಟ್ಟಿತೆಂದು ಪಂಡಿತರ ಅಭಿಪ್ರಾಯ. ಈ ಮಠದ ಗುರುಪರಂಪರೆಯು ಈ ಕೆಳಗಿನಂತಿದೆ. —

(೧) ಸದ್ಭಾವಶಂಭು ಮೂಲಪುರುಷ. (೨) ಅವನ ಶಿಷ್ಯ ಸೋಮ ಶಂಭು. ಇವನು "ಸೋಮಶಂಭು ಪದ್ಧತಿ" ಎಂಬ ಗ್ರಂಥವನ್ನು ಬರೆದಿರುವನು. ಶೈವಾಗಮದ ವಿಷಯಗಳನ್ನು ಪ್ರತಿಪಾದಿಸುವ ಗ್ರಂಥವಿದು. (೩) ಇವನ ಶಿಷ್ಯ ವಾಮಶಂಭು. ಈತನು ಕಲಚೂರಿ ಕರ್ಣದೇವನ (ಕ್ರಿ. ಶ. ೧೦೪೨) ಗುರುವಾಗಿದ್ದನು. (೪) ಇವನ ತರುವಾಯ ಕೆಲ ಕಾಲಾನಂತರದಲ್ಲಿ ಕೀರ್ತಿಶಂಭು ಎಂಬವನು ಈ ಮಠದ ಗುರುವಾದನು. ಇವನ ವಿಷಯದಲ್ಲಿ "ಶೈವಾಂಭೋಧೇಶ್ಯಕ್ತಿಶಂಭೋರುದಾಚ್ಛಿಷ್ಯ" ಎನ್ನಲಾಗಿದೆ ಶಾಸನದಲ್ಲಿ. (೫) ಇವನ ಶಿಷ್ಯ ಧರ್ಮಶಿವನು. (೬) ಇವನ ಶಿಷ್ಯ ವಿಶ್ವೇಶ್ವರದೇವನು. ಇವನು ಗೌಡ-ರಾಢಾದೇಶದ 'ಪೂರ್ವಗ್ರಾಮ'ದಿಂದ ಬಂದವನು. ಇವನೇ ಕಾಕತೀಯ ಗಣಪತಿದೇವನ ಆಧ್ಯಾತ್ಮಿಕ ಗುರು; ದೀಕ್ಷಾಗುರು. ಸೋಮದೇವರಾಜೀಯ ಎಂಬ ತೆಲುಗು ಕಾವ್ಯದಲ್ಲಿ ಇವನ ಹೆಸರು ಬಂದಿದೆ ಪ್ರತಾಪರುದ್ರ ಚರಿತ್ರೆಯಲ್ಲಿ ಈ ಸೋಮದೇವನ ಉಲ್ಲೇಖವಿದೆ. ಈ ವಿಶ್ವೇಶ್ವರ ಶಂಭುಗೆ "ಶ್ರೀಚೋಳೇಶ್ವರ, ಮಾಲವ ಕ್ಷಿತಿಪತಿ ರಾಜನ್ಯಚೂಡಾಮಣಿ ಯಚ್ಛಿಷ್ಯ" ಎಂದಿದೆ, ಶಾಸನದಲ್ಲಿ. ಮತ್ತು "ಶೈವಾಂಭೋನಿಧಿ" ಎನ್ನಲಾಗಿದೆ. ವೆಲ್ನಾಡು ಕೃಷ್ಣೆಯ ಉತ್ತರವಾಹಿ 'ಕಂದ್ರವೆಂಟ' ಎಂಬ ಅಗ್ರಹಾರವನ್ನು ಸ್ಥಾಪಿಸಿ

ದ್ರಾವಿಡ ದೇಶದ ಬ್ರಾಹ್ಮಣರನ್ನು ಅಲ್ಲಿ ನೆಲಿಸಿದನು. ಈ ವಿಶ್ವೇಶ್ವರ ಶಿವನು "ಶೈವಸಿದ್ಧಾಂತಪಾರಗ"ನು(ಸಾಲು ೪೯). ೭೦ನೆಯ ಸಾಲಿನಿಂದ ೭೯ ನೆಯ ಸಾಲಿನವರೆಗೆ ಈ ಕೆಳಗಿನಂತೆ ವರ್ಣನೆಯಿದೆ.

"ಉಪೇಯುಷಾಂ ಶೈವತಪೋಧನಾನಾಂ,
ಕಾಲಾನನಾನಾಂ, ಶಿವಶಾಸನಾನಾಮ್ ।
ವಿದ್ಯಾರ್ಥಿನಾಮ್ ಪಾಶುಪತವ್ರತಾನಾ-
ಮಪ್ಯನ್ನವಸ್ತ್ರಾದಿ ಸಮರ್ಪಣಾಯ ॥

ಆರಭ್ಯ ವಿಪ್ರಾನನಿವಾದಿತಾನಾಮ್
ಚಂಡಾಲಪರ್ಯಂತಮುಪಾಗತಾನಾಮ್ ।
ಅನ್ನಪ್ರದಾನಾಯ ಚ ಸರ್ವಕಾಲ-
ಮಕಲ್ಪಯದ್ರಾಜಗುರುರ್ಮಹಾತ್ಮಾ ॥

ದೇವಸ್ಯ ಸತ್ರಸ್ಯ ಮಠಸ್ಯ ತಸ್ಯ
ಗ್ರಾಮಸ್ಯ ಸರ್ವಸ್ಯ ಚ ಸೋಽಧಿಕಾರೀ ।
ಯೋ ಗೋಲಕೀವಂಶಕೃತಾಭಿಷೇಕ-
ಶ್ಶಾಂತಶ್ಶುಚಿಶ್ಶೈವರಹಸ್ಯವೇದಿ ॥

ಶೈವಾಗಮಾನಾಮಪಿ ಪಾರಗಾಮಿ
ಸಂತಾನಪಾಲಸ್ಸಮಲೋಷ್ಟಹೇಮಾ ।
ಸರ್ವಾಣಿ ಭೂತಾನ್ಯನುಕಂಪಮಾನ-
ಸ್ಸಮಸ್ತವಿದ್ಯಾಸುಕೃತಾವಗಾಹಃ ॥

ಮಹೀಸುರಶ್ಶೀಲವತಾಂ ಪುರೋಗೋ
ಭವತ್ತರಾಂ ನೈಷ್ಠಿಕದೇಶಿಕೇಂದ್ರಃ।
ವಿಶ್ವೇಶ್ವರ ಶಿವಾಚಾರ್ಯ
ಧೀಮಾನ್ರಾಜಗುರುಃ ಸ್ವಯಂ ॥

ಏವಮಾಜ್ಞಾಪಯದ್ವೀರ
ಶೈವಾಚಾರ್ಯಶತೈರ್ವೃತಃ।
ಆಂಧ್ರೇಷು ಸ್ಥಾನಪತಯಃ
ಷಟ್‌ಕವರ್ಣಾಸ್ತಪೋಧನಾಃ ॥

ಮೂರನೆಯ ಭಾಗದ ೧೪ ನೆಯ ಓಳಿಯಲ್ಲಿ " ಸ್ವಾಮ್ಯಲಿಂಗಮುರ ಮಟಿ....ಚಂದ್ರವಲ್ಲಿ ನಗರೇ ಲಿಂಗಂ ಪ್ರತಿಷ್ಠಾಪ್ಯ " ಎಂದಿದೆ.

ಕ್ರಿ ಶ. ೧೨೬೧ನೆಯ ಈ ಶಾಸನದಲ್ಲಿ ಶೈವತಪೋಧನರು, ಕಾಲಾನನರು ಅಂದರೆ ಕಾಳಾಮುಖರು, ಶಿವಶಾಸನರು, ಪಾಶುಪತ ವ್ರತಿಗಳು ಇವರನ್ನು ಬೇರೆ ಬೇರೆ ನಿರ್ದೇಶಿಸಿ, ಅವರಿಗೆ ಅನ್ನವಸ್ತ್ರವೊದಗಿಸಲು ಮತ್ತು ವಿಪ್ರನಿಂದ ಚಂಡಾಲಪರ್ಯಂತ ಆಗತರಿಗೆ ಅನ್ನಪ್ರದಾನಗೈಯಲು ವ್ಯವಸ್ಥೆ ಮಾಡಲಾಗಿದ್ದುದನ್ನು ಹೇಳಲಾಗಿದೆ. ದೇವಸತ್ರಮುರಗಳಿಗೆ ಮಹಾತ್ಮನಾದ ರಾಜಗುರುವೇ ಅಧಿಕಾರಿಯು. ಗೋಲಕೀವಂಶ ಕೃತಾಭಿಷಿಕ್ತನು, **ಮಹೀಸುರನು**, ಶೀಲವಂತನು, **ನೈಷ್ಠಿಕದೇಶಿಕೇಂದ್ರನು** ಈ ವಿಶ್ವೇಶ್ವರಾಚಾರ್ಯನು.

ಎರಡನೆಯ ಭಾಗದ ೪೯ ನೆಯ ಓಳಿಯಲ್ಲಿ **" ವಿಶ್ವೇಶ್ವರ ಶಿವಶೈವ ಸಿದ್ಧಾಂತ ಪಾರಗಃ"** ಎಂದೂ ೪೭ನೆಯ ಓಳಿಯಲ್ಲಿ "ವಿದ್ಯಾರ್ಥಿಭ್ಯೋ ವರಂ **ಶುದ್ಧಮುಠಾಯು ಚ** " ಎಂದೂ ಇರುವುದರಿಂದ ಈ ಮುರವು "ಶುದ್ಧಶೈವ ಸಿದ್ಧಾಂತ '' ಸಾಂಪ್ರದಾಯಿಕ ಮುರದ ಪರಂಪರೆಯೆಂಬುದು ಸ್ಪಷ್ಟವಿದೆ. ಅನ್ನವಸ್ತ್ರವನ್ನು ಶೈವತಪೋಧನ, ಕಾಳಾಮುಖ, ಪಾಶುಪತ ವ್ರತಿಗಳನ್ನು ಬೇರೆ ಬೇರೆ ಹೇಳಲಾಗಿದೆ. ಶಿವಶಾಸನರು ಕದಾಚಿತ್ ಭಕ್ತರು ಇದ್ದಿರಬಹುದು **ವಿಶ್ವೇಶ್ವರಾಚಾರ್ಯನಿಗೆ ಮಹೀಸುರಶ್ಶೀಲವತಾಂ** ಎಂದಿರುವುದರಿಂದ ಇವನು ಬ್ರಾಹ್ಮಣನು; ಶುದ್ಧಶೈವ ಸಂಪ್ರದಾಯದ ಬ್ರಾಹ್ಮಣರ ಮುರವಿದು. ಈ ಶುದ್ಧಶೈವ ಬ್ರಾಹ್ಮಣ ತಪೋಧನರಿಗೆ ವೀರಶೈವಾಚಾರ್ಯರೆಂದು ಕರೆಯಲಾಗಿದೆ.

ಹಿಂದೆ ೫ನೆಯ ಮತ್ತು ೭ನೆಯ ಪ್ರಕರಣಗಳಲ್ಲಿ ವಿವೇಚಿಸಿದಂತೆ **ಶುದ್ಧಶೈವಸಿದ್ಧಾಂತ** ಮತ್ತು **ಲಾಕುಳಸಿದ್ಧಾಂತ** ಎರಡು ಭಿನ್ನ ಭಿನ್ನ ಸಿದ್ಧಾಂತಗಳಿದ್ದವು. ಶುದ್ಧಶೈವ ಸಿದ್ಧಾಂತ ಬ್ರಾಹ್ಮಣರದು, ಮತ್ತು ಲಾಕುಳ ಸಿದ್ಧಾಂತವು ಈಗಿನ **ಜಂಗಮರ ಪೂರ್ವಜರದು**. ಲಾಕುಳಸಿದ್ಧಾಂತವು ಹಿಂದೆ ಬಿದ್ದು, ಶುದ್ಧಶೈವ ಸಿದ್ಧಾಂತದ ಪ್ರಾಚುರ್ಯವು ಹೆಚ್ಚಿದೆ. ನಿಜಗುಣ ಶಿವಯೋಗಿಯು ಶುದ್ಧಶೈವಸಿದ್ಧಾಂತವನ್ನು ವಿಸ್ತಾರವಾಗಿ ಪ್ರತಿಪಾದಿಸಿ, ಅನಂತರ ವೀರಶೈವ ವ್ರತವನ್ನು ಹೇಳಿರುವನು ವಿವೇಕಚಿಂತಾಮಣಿಯಲ್ಲಿ.

ಬ್ರಾಹ್ಮಣ ಶಿವಯೋಗಿಗಳು ಶುದ್ಧಶೈವರಲ್ಲಿದ್ದು ಆ ವಿಷಯವನ್ನು ಹಿಂದಿನ ೬ನೆಯ ಪ್ರಕರಣದಲ್ಲಿ ಶಾಸನಾಧಾರಗಳಿಂದ ಚರ್ಚಿಸಲಾಗಿದೆ. ಈ ಶಾಸನದಲ್ಲೂ ಶುದ್ಧಶೈವಸಂಪ್ರದಾಯ ಶಿವಯೋಗಿಗಳಿಗೆ, ವೀರಶೈವಾಚಾರ್ಯರು, ಸ್ಥಾನಪತಿ, ತಪೋಧನರೆನ್ನಲಾಗಿದೆ. ಶಾಸನಗಳಲ್ಲೂ ದೇವಸ್ಥಾನದ ಅಧಿಪತಿಗಳಾಗಿದ್ದು, ಯತಿಗಳಾಗಿದ್ದರೆಂಬ ವರ್ಣನೆ ಬರುವುದು. ನಿಜಗುಣ ಶಿವಯೋಗಿಯು, ಹರಿಹರ, ರಾಘವಾಂಕರು ಬ್ರಾಹ್ಮಣರಾಗಿದ್ದು ಈ ಶುದ್ಧಶೈವ ಸಂಪ್ರದಾಯದವರಾಗಿದ್ದರೆಂದು ತೋರುವುದು. ಆಂಧ್ರ ದೇಶದಲ್ಲಿ ಶುದ್ಧಶೈವ ಸಂಪ್ರದಾಯದ ಬ್ರಾಹ್ಮಣ ವೀರಶೈವರ ಸಂಸ್ಥೆ ಇದ್ದುದು ಈ ಶಾಸನದಿಂದ ವ್ಯಕ್ತವಾಗುತ್ತದೆ. ಈಗಲೂ ಆಂಧ್ರದಲ್ಲಿ ಈ ಸಂಪ್ರದಾಯದ ಶೈವಬ್ರಾಹ್ಮಣರು ಇರುವರು ಆದರೆ ಕರ್ನಾಟಕದಲ್ಲಿ ಹಾಸನ ಮತ್ತು ಕಡೂರು ಜಿಲ್ಲೆಗಳಲ್ಲಿ ಈ ಶೈವಬ್ರಾಹ್ಮಣರಸಂಬಂಧವಾದ ಶಾಸನಗಳು ದೊರೆಯುತ್ತವೆ. ಈ ಎರಡು ಜಿಲ್ಲೆಗಳು ಬಲ್ಲಾಳ ಅರಸರ ಆಳಿಕೆಯಲ್ಲಿದ್ದವು ಆದರೆ ಕರ್ನಾಟಕದಲ್ಲಿ ಮಾತ್ರ ವೀರಶೈವ ಎಂಬ ಶಬ್ದವು ಲಿಂಗಾಯತರಿಗೇನೆ ರೂಢವಾಗಿದೆ ಪ್ರಾಚೀನ ಲಾಕುಳಶೈವರೇ ಈಗಿನ ವೀರಶೈವರು ಕರ್ನಾಟಕದಲ್ಲಿ. ಲಾಕುಳರು ಈ ಶುದ್ಧಶೈವ ಸಂಪ್ರದಾಯವನ್ನು ಅನುಸರಿಸಿರುವರು. ಕರ್ನಾಕದಲ್ಲಿ ಶುದ್ಧಶೈವ ಸಂಪ್ರದಾಯದ ಬ್ರಾಹ್ಮಣ ಶಿವಯೋಗಿಗಳಾದ ವೀರಶೈವರು ಇರುವರೋ ಇಲ್ಲವೋ ನಾವರಿಯೆವು.

---

## ಈ ಪ್ರಬಂಧಕ್ಕಾಗಿ ಉಪಯೋಗಿಸಿದ

# ಆಧಾರ ಗ್ರಂಥಗಳ ಪಟ್ಟಿ

## (Bibliagraphy)


೧. ಶಾರದಾ ತಿಲಕ

೨. ಸ್ವಚ್ಛಂದ ತಂತ್ರ

೩. ಪಾಶುಪತಸೂತ್ರ

೪. ಸ್ಪಂದ ನಿರ್ಣಯ

೫. ಹಠಯೋಗ ಪ್ರದೀಪಿಕಾ

೬. ಸರ್ವದರ್ಶನ ಸಂಗ್ರಹ

೭. ಬ್ರಹ್ಮಸೂತ್ರ ಭಾಷ್ಯ
— ಶಂಕರ
— ರಾಮಾನುಜ
— ಮಾಧ್ವ

೮. ಪ್ರಪಂಚಸಾರ

೯. ತಂತ್ರಸಾರ

೧೦. ಮಹಾನಿರ್ವಾಣತಂತ್ರ

೧೧. ಸೂತಸಂಹಿತಾ

೧೨. ವಾಯುವೀಯಸಂಹಿತಾ

೧೩. ಮಹಾಭಾರತ

೧೪. ಶ್ವೇತಾಶ್ವೇತರೋಪನಿಷತ್ತು

೧೫. ಅಥರ್ವ ಶಿರ್ಷೋಪನಿಷತ್ತು

೧೬. ಕಕ್ಷಪುಟಿ (ನಾಗಾರ್ಜುನ)

೧೭. ಸೂತ್ರಪಾಠ (ಮಹಾನುಭಾವ)

೧೮. ವಿವೇಕ ಚಿಂತಾಮಣಿ

೧೯. ಬಸವರಾಜ ದೇವರ ರಗಳೆ (ಹರಿಹರ)

೨೦. ಸಿದ್ಧರಾಮೇಶ್ವರ ಚರಿತ್ರೆ (ರಾಘವಾಂಕ)

೨೧. Kashmere Shaivism (Kashmere Series)

೨೨. Vaishnavism & Shaivism & other minor sects (by Bhandarkar)

೨೩. Yashastilaka (by Hundugeri)

೨೪. History of India (150 to 1350 A. D.) (by K. P. Jayaswl)

೨೫. Dr. Cousins Architecteral Series

೨೬. Epigraphica Karnatica Series

೧. ಶಿವಮೊಗ್ಗ ಜಿಲ್ಲೆ, ೨. ಮೈಸೂರುಜಿಲ್ಲೆ,
೩. ಚಿತ್ರದುರ್ಗಜಿಲ್ಲೆ, ೪. ಹಾಸನ ಜಿಲ್ಲೆ,
೫. ತುಮಕೂರು ಜಿಲ್ಲೆ, ೬. ಕಡೂರು ಜಿಲ್ಲೆ,

೨೭. South Indian Inscriptions, Madras Series Vol. IX, Part 1.

೨೮. Inscriptions of Northern Karnataka (by Prof. Kundangar)

೨೯. Some Inscriptions of Karnataka (by R. S. Panchamukhi)

೩೦. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ (ಸಂಪುಟ ೨೮, ಸಂಚಿಕೆ ೧)

೩೧. ಜಯಕರ್ನಾಟಕ ಸಂಪುಟ ಸಂಚಿಕೆ ೯-೧,೧೨-೭ ಮತ್ತು ೧೩-೩




ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ.

# ಪ್ರಕಟವಾದ ಉಪನ್ಯಾಸಗಳು

೧. ಮೂರು ಉಪನ್ಯಾಸಗಳು ೧—೦—೦

ಶ್ರೀ. ಎಂ ಗೋವಿಂದ ಪೈ

೨. THREE LECTURES 1—0—0

by Shri K. V. Subrahmanya Aiyar, B. A

೩. ಕರ್ನಾಟಕದ ಸಂಗೀತವೂ ದಾಸಕೂಟವೂ ೨—೮—೦

ಕಿನ್ನರಿವಿದ್ವಾನ್ ಶ್ರೀ. ಹುಲಗೂರು ಕೃಷ್ಣಾಚಾರ್ಯರು

೪. ಶಬ್ದಮಣಿದರ್ಪಣದ ಪಾಠಾಂತರಗಳು ಮತ್ತು ಅನುಭವಾಮೃತವೂ ಹರಿಕಥಾಮೃತಸಾರವೂ ೩—೦—೦

ಪ್ರೊ. ಡಿ ಕ. ಭೀಮಸೇನರಾಯರು, ಎಂ ಎ.

೫. ಕರ್ನಾಟಕದ ಪೂರ್ವಚರಿತ್ರೆ ೨—೦—೦

ಡಾ. ಎಂ. ಎಚ್. ಕೃಷ್ಣ, ಎಂ. ಎ, ಪಿಎಚ್. ಡಿ

೬. ಕೆಲವು ಕನ್ನಡ ವ್ಯಾಕರಣ ವಿಚಾರಗಳು ೧—೮—೦

ಪಂಡಿತ ಮ. ಪ್ರ. ಪೂಜಾರ

೭. ಕನ್ನಡ ನಾಡೂ ದೇಸಿ ಸಾಹಿತ್ಯವೂ ೧—೦—೦

ಡಿ. ಮುಳಿಯ ತಿಮ್ಮಪ್ಪಯ್ಯ

೮. SOME PROBLEMS IN KANNADA LINGUISTICS 1—8—0

by Prof. C R. Shankaran, M. A